ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹಮಾಲಿಕೆ

# ಬಿ.ಡಿ. ಜತ್ತಿ

ಕೃಷ್ಣ ಕೊಲ್ಹಾರಕುಲಕರ್ಣಿ

ಪ್ರಕಟಣೆ :

ಗ್ರಂಥಾಲಯ ಉಪಸಮಿತಿ

ವಿಧಾನ ಸಭೆ ಸಚಿವಾಲಯ

ವಿಧಾನ ಸೌಧ ಬೆಂಗಳೂರು - 1

B.D. JATTI: Prathibhavantha Samsadiya Patugala Baduku Baraha Malike (Eminent Parliamentarian Series) Written by Dr. Krishna Kolhar Kulkarni, Published by Karnataka Legislative Assembly Secretariat, Vidhana Soudha, Bangalore - 01.

Pages - 178+10

Rupees - 15/-



First Edition, September, 2002.

Number of Copies : 1500

Printed and Designed by :
Government Printing Press,
Bangalore-01.

ಬಿ.ಡಿ. ಜತ್ತಿ : ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ ಮೂಲ ಕೃತಿ : ಡಾ: ಕೃಷ್ಣ ಕೊಲ್ಹಾರಕುಲಕರ್ಣಿ, ಪ್ರಕಟಣೆ : ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನ ಸೌಧ, ಬೆಂಗಳೂರು.

ಬೆಲೆ ರೂ : 15/-

ಪುಟ ಸಂಖ್ಯೆ : 178+10



ಮೊದಲನೆ ಮುದ್ರಣ : ಸೆಪ್ಟೆಂಬರ್ 2002
ಪ್ರತಿಗಳು : 1500

ಮುಖ ಪುಟ ವಿನ್ಯಾಸ ಮತ್ತು ಮುದ್ರಣ:
ಸರ್ಕಾರಿ ಮುದ್ರಣಾಲಯ,
ಬೆಂಗಳೂರು -560 001

# ಪೀಠಿಕೆ

ದೇಶದ ಸ್ವಾತಂತ್ರ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ, ಹಾಗೂ ಆಂಗ್ಲಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ರಾಂಮನೋಹರ ಲೋಹಿಯಾ, ಡಾ : ಬಿ.ಆರ್. ಅಂಬೇಡ್ಕರ್, ಡಾ: ಶಾಂಪ್ರಸಾದ್ ಮುಖರ್ಜಿ, ಡಾ: ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಕಿರುಹೊತ್ತಿಗೆಯನ್ನು ನಾವು ಕನ್ನಡದಲ್ಲಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರ ಕುರಿತು ಕಿರುಹೊತ್ತಿಗೆಗಳನ್ನು ಸಿದ್ದಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ಈ ಕಾರ್ಯವನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯ ಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು ಹಾಗೂ ಇನ್ನೂ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಈಗ ಡಾ: ಕೃಷ್ಣ ಕೊಲ್ಹಾರಕುಲಕರ್ಣಿ, ಬಿಜಾಪುರ ಇವರು ರಚಿಸಿರುವ, ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ, ಶ್ರೀ ಬಿ.ಡಿ. ಜತ್ತಿ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆ ಎನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಯು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ಬಿ.ಎಲ್. ಶಂಕರ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಎಂ.ವಿ. ವೆಂಕಟಪ್ಪ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಅರಿಕೆ

'ಪ್ರತಿಭಾವಂತ ಸಂಸದೀಯ ಪಟುಗಳ ಬದುಕು - ಬರಹ ಮಾಲಿಕೆ' ವಿಧಾನ ಸಭೆ ಸಚಿವಾಲಯದ ಒಂದು ಸ್ತುತ್ಯ ಕಾರ್ಯ. ಅನೇಕ ರಾಜಕಾರಣಿಗಳ ಚರಿತ್ರೆಗಳು - ಆತ್ಮ ಚರಿತ್ರೆಗಳು ಮತ್ತು ಪ್ರಮುಖ ಭಾಷಣಗಳು ಪುಸ್ತಕ ರೂಪದಲ್ಲಿ ಬಂದಿವೆ. ಆದರೆ ಜನಪ್ರತಿನಿಧಿಗಳಾಗಿ ಅವರು ಶಾಸನ ಸಭೆಗಳಲ್ಲಿ ಏನು ಹೇಳಿದರು ಎಂಬುದನ್ನು ಇದ್ದಕ್ಕಿದ್ದಂತೆ ಉಲ್ಲೇಖಿಸಿ ಅವರ ಬದುಕನ್ನು ತೆರೆದಿಡುವ ಇಂಥ ಕೆಲಸ ಒಂದು ಹೊಸ ಮಾದರಿಯದು. ಆದ್ದರಿಂದ ಇದು ಇತಿಹಾಸವೂ ಹೌದು, ವ್ಯಕ್ತಿಯ ಚರಿತ್ರೆಯೂ ಹೌದು.

ಈ ಮಾಲಿಕೆಯಲ್ಲಿ ನನಗೆ ನಾಡಿನ ದ್ವಿತೀಯ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ಬಿ.ಡಿ. ಜತ್ತಿ ಅವರ ಬಗ್ಗೆ ಬರೆಯಲು ಕೇಳಿಕೊಂಡರು. ಆ ಬಗ್ಗೆ ದಾಖಲಿಸಲು ಬೇಕಾಗುವ ಸಾಮಗ್ರಿಯನ್ನು ಮೂಲದಲ್ಲಿಯೆ ಒದಗಿಸಿದರು.

ಶ್ರೀ ಜತ್ತಿ ಅವರ ಬದುಕು 'ಹಳ್ಳಿಯಿಂದ - ದಿಲ್ಲಿಗೆ' ಎಂಬ ಮಾತು ಅಕ್ಷರಶಃ ನಿಜವಾಗಿಸಿದ ವಿರಳ ಬದುಕು. ಹಳ್ಳಿಯ ಸರಪಂಚನಿಂದ, ವಿಶ್ವದ ಅತಿ ದೊಡ್ಡ ಪ್ರಜಾಪ್ರಭುತ್ವದ ರಾಷ್ಟ್ರ ಒಂದರ ಹಂಗಾಮಿ ರಾಷ್ಟ್ರಪತಿ ವರೆಗೆ ತಲುಪಿದ ಏಣಿ ವಿಸ್ಮಯಕಾರಿಯಾದದ್ದು.

ಹಲವು ಭಿನ್ನ ಸಂಸ್ಕೃತಿಯ ಒಂದೇ ಭಾಷೆಯ ಐದು ತುಕಡಿಗಳನ್ನು ಕೂಡಿಸಿ ನಿರ್ಮಿಸಿದ ವಿಶಾಲ ಮೈಸೂರು ರಾಜ್ಯ ಇಂದಿನ ಕರ್ನಾಟಕದ ಪ್ರಾರಂಭದ ದಿನಗಳಲ್ಲಿ ಅಖಂಡ ನಾಲ್ಕು ವರುಷ ಮುಖ್ಯ ಮಂತ್ರಿಗಳಾಗಿದ್ದವರು. ಭಾವನೆಗಳು ಹಲವು ಸಮಸ್ಯೆಗಳು ನೂರಾರು. ಅವುಗಳನ್ನು ಒಂದುಗೂಡಿಸುವಲ್ಲಿಯ ಶ್ರೀ ಜತ್ತಿ ಅವರ ಪಾತ್ರ ಶಾಸನ ಸಭೆಯ ಕಲಾಪಗಳಲ್ಲಿ ಅವರು ಮಾಡಿದ ಭಾಷಣಗಳಿಂದ ವ್ಯಕ್ತವಾಗುತ್ತದೆ.

ಇಂಥ ಒಂದು ಅವಕಾಶವನ್ನು ಒದಗಿಸಿದ ಕರ್ನಾಟಕ ವಿಧಾನ ಸಭೆಯ ಸಚಿವಾಲಯದ ಗ್ರಂಥಾಲಯ ಉಪಸಮಿತಿ ಅಧ್ಯಕ್ಷರು ಮತ್ತು ಸದಸ್ಯರಿಗೆ, ಕಾರ್ಯದರ್ಶಿಗಳಿಗೆ ವಿಶೇಷವಾಗಿ ಸಂಶೋಧನಾ ವಿಭಾಗದ ಸಿಬ್ಬಂದಿಗೆ ನನ್ನ ಕೃತಜ್ಞತೆಗಳು.

ಶ್ರೀ ಜತ್ತಿ ಅವರ ಬಗೆಗಿನ ಕೆಲವು ವಿಶೇಷಗಳನ್ನು ತಿಳಿಸುವ ಅವರ ಆತ್ಮಕಥನ 'ನನಗೆ ನಾನೇ ಮಾದರಿ' ಎಂಬ ಗ್ರಂಥದಿಂದ ಮತ್ತು ಅವರ 90 ರ ಹುಟ್ಟು ಹಬ್ಬದ ಸಂದರ್ಭದಲ್ಲಿ ನಾಡಿನ ಖ್ಯಾತ ದಿನ ಪತ್ರಿಕೆ ಸಂಯುಕ್ತ ಕರ್ನಾಟಕ ಪ್ರಕಟಿಸಿದ ಡಾ|| ಎಸ್. ವಿದ್ಯಾಶಂಕರ ಅವರ ಲೇಖನದ ಕೆಲವು ಭಾಗಗಳನ್ನು ಬಳಸಿಕೊಂಡಿರುವೆ. ಅವರಿಗೂ ನನ್ನ ಕೃತಜ್ಞತೆಗಳು.

ಈ ಕೃತಿಯ ಇತಿಮಿತಿಯ ಸಂಪೂರ್ಣ ಜವಾಬ್ದಾರಿ ನನ್ನದು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ ಎಂದು ಭಾವಿಸುವೆ.

'ಮಹೀಪತಿ',
633, ಕೀರ್ತಿನಗರ,
ಬಿಜಾಪುರ - 586 101.

ಕೃಷ್ಣ ಕೊಲ್ಹಾರಕುಲಕರ್ಣಿ.

## ಪರಿವಿಡಿ

ಪುಟ ಸಂಖ್ಯೆ

### ಭಾಗ-1



### ಭಾಗ-2



### ಭಾಗ - 3

# ಭಾಗ -1

## ವ್ಯಕ್ತಿ ಪರಿಚಯ

1947 ರ ಆಗಸ್ಟ 15 ರಂದು ಭಾರತಕ್ಕೆ ಸ್ವಾತಂತ್ರ್ಯ ದೊರೆತಾಗ, ದೇಶದಲ್ಲಿ ಐದು ನೂರಕ್ಕೂ ಅಧಿಕ ಸಣ್ಣ - ದೊಡ್ಡ ಸಂಸ್ಥಾನಗಳಿದ್ದವು. ಅವುಗಳಲ್ಲಿ 18 ದಕ್ಷಿಣದಲ್ಲಿದ್ದವು. ಅದರಲ್ಲೊಂದು ಜಮಖಂಡಿ ಸಂಸ್ಥಾನ. ಅದು ದಿನಾಂಕ 08-03-1948 ರಂದು ಅಂದಿನ ಮುಂಬಯಿ ರಾಜ್ಯದಲ್ಲಿ ವಿಲೀನವಾಯಿತು. ಅಂದಿನಿಂದ ಜಮಖಂಡಿ ಒಂದು ತಾಲೂಕಿನ ಸ್ಥಳವಾಯಿತು. ಮೊದಲು ಅದು ಸಾಂಗಲಿ ಜಿಲ್ಲೆಯಲ್ಲಿ ಸೇರಿ ಅನಂತರ ಬಿಜಾಪುರ ಜಿಲ್ಲೆಯಲ್ಲಿ ಸೇರಿತು. 1997 ರ ವರೆಗೂ ಬಿಜಾಪುರ ಜಿಲ್ಲೆಯಲ್ಲಿದ್ದ ಜಮಖಂಡಿ ತಾಲೂಕು ಬಿಜಾಪುರ ಜಿಲ್ಲೆ ಎರಡು ಭಾಗಗಳಾದಾಗ ಅದು ಬಾಗಲಕೋಟೆ ಜಿಲ್ಲೆಗೆ ಸೇರಿದೆ.

ಜಮಖಂಡಿ ತಾಲೂಕಿನಲ್ಲಿಯ ಒಂದು ಪ್ರಮುಖ ಹಳ್ಳಿ ಸಾವಳಗಿ, ಅಲ್ಲಿ ಜನ್ಮ ತಳೆದವರು ಶ್ರೀ ಬಸಪ್ಪ ದಾನಪ್ಪ ಜತ್ತಿ ಅವರು. ಅವರು ಜನ್ಮತಳೆದಾಗ ಸುಮಾರು 2, 3 ಸಾವಿರ ಜನ ಸಂಖ್ಯೆ ಇದ್ದ ಸಾವಳಿಗಿಯಲ್ಲಿ ಇಂದು ಸುಮಾರು 10 ಸಾವಿರ ಜನರಿದ್ದಾರೆ. 15 - 20 ಹಳ್ಳಿಗಳ ಕೇಂದ್ರ ಸ್ಥಳ. ಜಮಖಂಡಿ ಸಂಸ್ಥಾನದಲ್ಲಿ ಇರುವಾಗಲೇ ಅಲ್ಲೊಂದು ಆಸ್ಪತ್ರೆ, ಗಂಡು ಮತ್ತು ಹೆಣ್ಣು ಮಕ್ಕಳ ಸಲುವಾಗಿ ಪ್ರತ್ಯೇಕ ಶಾಲೆಗಳು, ಪೋಲಿಸ ಠಾಣೆ ಇದ್ದವು. ಜನರಿಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಸಂಸ್ಥಾನೀಕರು ಮಾಡಿದ್ದರು. ಇಂದು ಸಾವಳಗಿಯಲ್ಲಿ ಪೂರ್ವ ಪ್ರಾಥಮಿಕ ಶಾಲೆ, ಹೈಸ್ಕೂಲು ಮತ್ತು ಕಾಲೇಜು ಇವೆ.

ದಿನಾಂಕ 10-9-1912 ರಲ್ಲಿ ಶ್ರೀ ಬಸಪ್ಪ ದಾನಪ್ಪ ಜತ್ತಿ ಅವರು ಸಾವಳಗಿಯಲ್ಲಿ ಜನಿಸಿದರು. ಅವರ ತಂದೆಯ ಹೆಸರು ದಾನಪ್ಪ. ತಾಯಿಯ ಹೆಸರು ಭಾಗ್ಯವ್ವ. ಜತ್ತಿ ಎಂಬುದು ಅವರ ಅಡ್ಡಹೆಸರು. ಜತ್ತಿ ಎಂಬುದು ಒಂದು ಊರಿನ ಹೆಸರು ಕರ್ನಾಟಕ-ಮಹಾರಾಷ್ಟ್ರದ ಗಡಿಯಲ್ಲಿದೆ. ಅಚ್ಚ ಕನ್ನಡ ಪ್ರದೇಶ ಇಂದು ಮಹಾರಾಷ್ಟ್ರದಲ್ಲಿ ಒಂದು ತಾಲೂಕಿನ ಸ್ಥಳ. ಬಹುಶಃ ಅವರ ಪೂರ್ವಜರು ಆ ಊರಿನವರಾಗಿದ್ದು ಕಾಲಾಂತರದಲ್ಲಿ ಸಾವಳಗಿಗೆ ಬಂದವರಾಗಿರಬೇಕು. ಹೀಗಾಗಿ ಅವರ ಮನೆತನಕ್ಕೆ ಜತ್ತಿ ಅವರ ಮನೆತನ ಎಂಬುದಾಗಿ ರೂಢಿಯಲ್ಲಿ ಬಂದಿತು. ನ್ಯಾಯಮೂರ್ತಿ ಮಹಾಜನ ಆಯೋಗದ ವರದಿಯಲ್ಲಿ ಜತ್ತಿ ಕರ್ನಾಟಕಕ್ಕೆ ಸೇರಬೇಕು ಎಂದು ಹೇಳಲಾಗಿದೆ.

ದಾನಪ್ಪ ಜತ್ತಿ ಅವರಿಗೆ ಮೂವರು ಹೆಣ್ಣು ಮಕ್ಕಳು ಮೂವರು ಗಂಡು ಮಕ್ಕಳು. ಗಂಡು ಮಕ್ಕಳಲ್ಲಿ ಬಸಪ್ಪ ಹಿರಿಯವರು. ದಾನಪ್ಪ ಅವರು ಅಂದು ಸಾವಳಗಿಯಲ್ಲಿದ್ದ ಮರಾಠಿ ಶಾಲೆಯಲ್ಲಿ ಏಳನೇಯ ವರ್ಗದ ವರೆಗೆ ಓದಿದ್ದರು. ಬಡತನದಿಂದಾಗಿ ಶಾಲಾಂತ (ಮುಲ್ಕಿ) ಪರೀಕ್ಷೆಗೆ ಕಟ್ಟಲಾಗದೆ ಓದು ಅಲ್ಲಿಯೇ ನಿಂತಿತು.

ಬರಗಾಲ - ಕಾಮಗಾರಿ ಕೆಲಸ ನಡೆದಿತ್ತು. ಅಲ್ಲಿ ಕೂಲಿಕಾರರ ಲೆಕ್ಕ ಪತ್ರ ಬರೆದು ಪ್ರತಿವಾರ ಅವರ ಕೂಲಿ ಹಣವನ್ನು ಹಂಚುವ ಕೆಲಸ ದೊರೆಯಿತು. ತಿಂಗಳಿಗೆ ಮೂರು

ರೂಪಾಯಿ ಎಂಟಾಣೆ (ಐವತ್ತು ಪೈಸೆ) ಸಂಬಳ. ಒಂದು ವರುಷ ಜೀವನ ಸಾಗಿತು, ಮರು ವರುಷ ಅವರ ಸ್ನೇಹಿತರಾದ ತಮ್ಮಣ್ಣಪ್ಪ ಸಾಂದ್ರೇಕರ ಅವರ ಟೋಲ್‌ನಾಕಾ ಗುತ್ತಿಗೆಯಲ್ಲಿ ಪಾಲುದಾರರಾದರು. ಆದರಿಂದ ಆ ವರುಷ ಅವರಿಗೆ ಎರಡು ನೂರು ರೂಪಾಯಿ ಬಂದಿತು. ಆದರಿಂದ ಒತ್ತೆಯಲ್ಲಿ ಬಿದ್ದ ಪಿತ್ರಾರ್ಜಿತ ಆಸ್ತಿ ಒಂದು ಮನೆ ಹಾಗೂ 14 ಎಕರೆ ಭೂಮಿಯನ್ನು ಬಿಡಿಸಿಕೊಂಡರು. ಅದೇ ಹೊತ್ತಿಗೆ ಅವರ ಸಹೋದರಿ ಶಿವಗಂಗವ್ವ ವಿಧವೆಯಾಗಿ ಸಹೋದರನ ಆಶ್ರಯದಲ್ಲಿ ಬಂದರು. ಜೀವನೋಪಾಯಕ್ಕೆ ಉಭಯತರು ವಿಚಾರಿಸಿ ಒಂದು ಚಿಕ್ಕ ಕಿರಾಣಿ ಅಂಗಡಿಯನ್ನು ತೆರೆದರು. ಆದಕ್ಕೆ ಮನೆಯಲ್ಲಿದ್ದ ಆಭರಣದ ಮೇಲೆ 60 ರೂಪಾಯಿ ಸಾಲ ಮಾಡಿದರು.

ಅಕ್ಕ - ತಮ್ಮ ಪ್ರಾಮಾಣಿಕರಾಗಿ ದುಡಿದರು. ಹಣಕಾಸಿನ ಪರಿಸ್ಥಿತಿ ಸುಧಾರಿಸಹತ್ತಿತು ದಾನಪ್ಪ ಮದುವೆಯಾದರು ಅವರ ಪತ್ನಿ ಭಾಗ್ಯವ್ವ ಹತ್ತಿರದ ಕುರುಗೋಡಿನವರು, ಅದೊಂದು ಚಿಕ್ಕ 25 - 30 ಮನೆಗಳ ಹಳ್ಳಿ. ಕೃಷಿಕರ ಮನೆಯಲ್ಲಿ ಹುಟ್ಟಿದ ಭಾಗ್ಯವ್ವ ಓದು - ಬರಹ ಕಲಿತಿರಲಿಲ್ಲ. ದಂಪತಿಗಳಿಗೆ ಮೊದಲ ಸಂತಾನ ಹೆಣ್ಣು ಮಗು ಅವಳ ಹೆಸರು ನೀಲವ್ವ, ನೀಲವ್ವಳ ಬೆನ್ನ ಮೇಲೆ ಹುಟ್ಟಿದ ಮಗು ಬಸಪ್ಪ.

ಬಸಪ್ಪ ಸಾವಳಗಿಯಲ್ಲಿಯ ಪ್ರಾಥಮಿಕ ಶಾಲೆಯಲ್ಲಿ ಓದಿದರು. ಮನೆತನದ ಪರಿಸ್ಥಿತಿ ಸಾಕಷ್ಟು ಸುಧಾರಿಸಿತ್ತು, ಸಾಲಗಳನ್ನೆಲ್ಲ ಮುಟ್ಟಿಸಿ ಅವರ ತಂದೆ ಮತ್ತೆ ಎರಡು ಹೊಲಗಳನ್ನು ಖರೀದಿಸಿ ಭಾವಿ ತೋಡಿಸಿ ಒಕ್ಕಲುತನ ನಡೆಸುತ್ತಿದ್ದರು. ನಾಲ್ಕು ಎತ್ತಿನ ಒಕ್ಕಲುತನವಾಗಿತ್ತು. ಇತ್ತ ವ್ಯಾಪಾರವೂ ಚೆನ್ನಾಗಿ ನಡೆಯಿತು. ಬಡತನದಿಂದಾಗಿ ತಮಗೆ ಓದಲು ಸಾಧ್ಯವಾಗದ್ದನ್ನು ನೆನಪಿಟ್ಟ ದಾನಪ್ಪ ಮಕ್ಕಳ ವಿದ್ಯಾಭ್ಯಾಸಕ್ಕೆ ವಿಶೇಷ ಗಮನ ಕೊಟ್ಟರು.

ಆಗೆಲ್ಲ ಬಾಲವಿವಾಹ ರೂಢಿಯಲ್ಲಿತ್ತು, ಬಾಲಕ ಬಸಪ್ಪ ನಾಲ್ಕನೇಯ ವರ್ಗದಲ್ಲಿದ್ದಾಗ ಅವರಿಗೆ 10 ವರುಷ 5 ವರುಷದ ಸಂಗಮ್ಮನೊಂದಿಗೆ ಮದುವೆಯಾಯಿತು. ಅವರ ತವರೂರು ವಿಜಾಪುರ ತಾಲೂಕಿನ ಬಾಬಾನಗರ. ತಂದೆ ತಾಯಿಗಳಿಗೆ ಒಬ್ಬಳೆ ಮಗಳು. ಮದುವೆಯಾದ ಆನಂತರ ಅವರು ಓದಿದ್ದು ಕನ್ನಡ 5ನೇಯ ವರ್ಗದ ವರೆಗೆ ಮಾತ್ರ.

ಬಸಪ್ಪ ಸಾವಳಗಿಯಲ್ಲಿ 5 ನೇ ತರಗತಿ ವರೆಗೆ ಓದಿ ಮುಂದಿನ ಶಿಕ್ಷಣಕ್ಕೆ ಬಿಜಾಪುರಕ್ಕೆ ಬಂದರು. ಅಲ್ಲಿಯ ಶ್ರೀ ಸಿದ್ದೇಶ್ವರ ಹೈಸ್ಕೂಲಿನಲ್ಲಿ ಓದಿ 1929 ರಲ್ಲಿ ಮೆಟ್ರಿಕ್ (ಇಂದಿನ ಎಸ್.ಎಸ್.ಎಲ್.ಸಿ) ಪರೀಕ್ಷೆ ಪಾಸಾದರು. ಬಸಪ್ಪ ಅವರಿಗೆ ಬಾಲ್ಯದಿಂದ ಮಲ್ಲಕಂಬ, ಕುಸ್ತಿಗಳಲ್ಲಿ ವಿಶೇಷ ಆಸಕ್ತಿ, ಹೈಸ್ಕೂಲಿನಲ್ಲಿ ಕುಸ್ತಿ ಪಂದ್ಯಾಟದಲ್ಲಿ ಮೊದಲ ಬಹುಮಾನ ಅವರಿಗೆ. ಮೆಟ್ರಿಕ್ ಆನಂತರ ಅವರ ಮುಂದಿನ ಅಭ್ಯಾಸ ಕೊಲ್ಲಾಪುರದ ರಾಜಾರಾಮ ಕಾಲೇಜಿನಲ್ಲಿ ನಡೆಯಿತು. 1934 ರಲ್ಲಿ ಬಿ.ಎ. ಪಾಸಾದರು. ಅಲ್ಲಿದ್ದಾಗ ಕನ್ನಡ ವಿದ್ಯಾರ್ಥಿಗಳ ಸಂಘವನ್ನು ಕಟ್ಟಿ ಅದರ ಕಾರ್ಯದರ್ಶಿಯಾಗಿ ಕೆಲಸ ಮಾಡಿದರು. ಅದರ ಹೆಸರು 'ಬಸವನ ಬಳಗ '.

ಕಾಲೇಜಿನಲ್ಲಿದ್ದಾಗ ಕನ್ನಡ ಪುಸ್ತಕಗಳನ್ನು ಓದುತ್ತಿದ್ದರು. ಬಿ.ಎ. ಪರೀಕ್ಷೆಗೆ ಇಂಗ್ಲೀಷ ಮತ್ತು ಕನ್ನಡ ವಿಷಯಗಳನ್ನು ತೆಗೆದುಕೊಂಡಿದ್ದರು. ಅವರು ಓದಿದ ಅನೇಕ ಪುಸ್ತಕಗಳಲ್ಲಿ ಬಸವಣ್ಣನವರ ಚರಿತ್ರೆ ಮತ್ತು ಅವರ ವಿಚಾರಗಳ ಬಗ್ಗೆ ವಿಶೇಷ ಆಸಕ್ತಿ ಹುಟ್ಟಿತ್ತು. ಅಲ್ಲಿದ್ದಾಗಲೇ ಅವರು ಸಣ್ಣ ಕತೆ ಕವನಗಳನ್ನು ರಚಿಸಿ ತಿಂಗಳ ಪತ್ರಿಕೆಗಳಿಗೆ ಕಳಿಸುತ್ತಿದ್ದರು. ಒಂದು ಸಲ 'ಕನ್ನಡಿಗರ ಏಳು ಬೀಳು' ಕುರಿತು ಮಾತನಾಡಿ ಚರ್ಚಾ ಸ್ಪರ್ಧೆಯಲ್ಲಿ ಮೊದಲ ಸ್ಥಾನವನ್ನು ಗಳಿಸಿದರು. ಬಿ.ಎ. ಪಾಸಾದ ನಂತರ 1935 ರಲ್ಲಿ ಎಮ್.ಎ. ಮತ್ತು ಎಲ್.ಎಲ್.ಬಿ. ಎರಡೂ ಪರೀಕ್ಷೆಗಳಿಗೂ ಓದಹತ್ತಿದರು. ಈ ಮಧ್ಯ ದಿನಾಂಕ 29-1-1936 ರಂದು ಅವರ ತಂದೆಯವರು ಶಿವಾಧೀನರಾಗಿದ್ದರಿಂದ ಅರ್ಧಕ್ಕೆ ಅಭ್ಯಾಸ ನಿಲ್ಲಿಸಿ ಮನೆಯ ಭಾರವನ್ನು ಹೊರಬೇಕಾಯಿತು. ಮಗ ವಕೀಲನಾಗಬೇಕೆಂದು ತಂದೆಯವರ ಇಚ್ಛೆಯಾಗಿತ್ತು.

ವ್ಯಾಪಾರ ಮತ್ತು ಹೊಲ ಮನೆಗಳ ಕೆಲಸಗಳನ್ನು ನೋಡಿಕೊಳ್ಳುವಾಗ ಹಳ್ಳಿಯಲ್ಲಿಯ ಜನ ಸಂಪರ್ಕ ವೃದ್ಧಿಯಾಯಿತು ಪಂಚಾಯಿತಿಯನ್ನು ಸ್ಥಾಪಿಸಿ ಅದರ ಕಾರ್ಯಕಾರಿ ಮಂಡಳದ ಚೇರಮನ್‌ರಾದರು. ಊರಲ್ಲಿಯ ರಸ್ತೆ ದುರಸ್ತಿ, ಖುಲ್ಲಾ ಗಟಾರ ಮತ್ತು ಊರಲ್ಲಿಯ ಗುಡಿ ಗುಂಡಾರಗಳ ದುರಸ್ತಿ ಇತ್ಯಾದಿ ಸಾರ್ವಜನಿಕ ಕಲ್ಯಾಣದ ಕಾಮಗಾರಿಗಳನ್ನು ಅಚ್ಚುಕಟ್ಟಾಗಿ ಮಾಡಿದರು. ಅದನ್ನು ಕಾಣಲು ಬಂದ ಅಂದಿನ ಪೋಲಿಟಿಕಲ್ ಏಜೆಂಟನು ಮನಸಾರೆ ಹೊಗಳಿದನು. ಸಂಸ್ಥಾನಿಕರ ಒತ್ತಡಕ್ಕೂ ಮಣಿಯದೆ ಅವರು ತಮ್ಮ ಎಂದಿನ ಧೋತರ, ನೆಹರು ಅಂಗಿ ಮತ್ತು ಗಾಂಧಿ ಟೊಪ್ಪಿಗೆಯ ವೇಷಗಳಲ್ಲೆ ಪೋಲಿಟಿಕಲ್ ಏಜೆಂಟನನ್ನು ಬರಮಾಡಿಕೊಂಡದ್ದು ಅವರ ಸ್ವಾಭಿಮಾನ - ಸ್ವದೇಶಾಭಿಮಾನಕ್ಕೆ ಸಂದ ಗೌರವವಾಗಿತ್ತು. ಸೂಟು - ಬೂಟು ಅಂದಿನ ರೂಢಿಯಾಗಿತ್ತು.

ತಮ್ಮಂದಿರು ದೊಡ್ಡವರಾಗಿ ಓದು ನಿಲ್ಲಿಸಿದಾಗ ಒಬ್ಬರಿಗೆ ಕಿರಾಣಿ ವ್ಯಾಪಾರವನ್ನು ಇನ್ನೊಬ್ಬರಿಗೆ ಹೊಲ ಕೆಲಸವನ್ನು ವಹಿಸಿಕೊಟ್ಟರು. ತಂದೆಯವರ ಇಚ್ಛೆಯನ್ನು ಪೂರ್ತಿಗೊಳಿಸಲು ಕಾನೂನು ಅಭ್ಯಾಸ ಮುಂದುವರಿಸಲು ಕೊಲ್ಲಾಪುರಕ್ಕೆ ಹೋದರು. 1940 ರಲ್ಲಿ ಎಲ್.ಎಲ್.ಬಿ. ಪಾಸಾದರು. ತಾಯಿಯ ಆದೇಶದಂತೆ ಜಮಖಂಡಿಯಲ್ಲಿ ವಕೀಲ ವೃತ್ತಿಯನ್ನು ಪ್ರಾರಂಭಿಸಿದರು.

ವಕೀಲ ವೃತ್ತಿ ಪ್ರಾರಂಭಿಸಿದ 3 ವರ್ಷಗಳಲ್ಲಿ ಜಮಖಂಡಿಯ ಜನರ ಸಂಪರ್ಕ ಸಾಕಷ್ಟಾಗಿತ್ತು. ಆ ವರ್ಷದ ನಗರ ಸಭೆಯ ಚುನಾವಣೆಯಲ್ಲಿ ಆಯ್ಕೆಯಾದುದ್ದಲ್ಲದೆ ದಿನಾಂಕ 5-1-1943 ರಂದು ಜಮಖಂಡಿ ನಗರ ಸಭೆಯ ಚೇರಮನ್ನರಾದರು. ಅವರ ಅವಧಿಯಲ್ಲಿ ಮಾರುಕಟ್ಟೆಯ ಸುತ್ತಮುತ್ತಲೂ ಚಿಕ್ಕ - ಚಿಕ್ಕ ಅಂಗಡಿಗಳನ್ನು ಕಟ್ಟಿ ಬಾಡಿಗೆ ಕೊಟ್ಟರು. ನಗರ ಸಭೆಗೆ ನಿಯಮಿತ ಆದಾಯ ಬರುವಂತೆ ಮಾಡಿದರು.

1942 ರ ಚಲೇಜಾವ ಚಳುವಳಿಯಲ್ಲಿ ಭಾಗ ವಹಿಸಿದ ಜತ್ತಿಯವರಿಗೆ ಅಂದಿನ ಬೆಳಗಾಂವ ಜಿಲ್ಲಾ ಕಾಂಗ್ರೆಸ ನಾಯಕರ ಸಂಪರ್ಕ ಬಂದಿತ್ತು. ಸಂಸ್ಥಾನದಲ್ಲಿ ಚಳುವಳಿಯನ್ನು

ಯಶಸ್ವಿಯಾಗಿ ನಡೆಸಿ ಸಂಸ್ಥಾನದಲ್ಲಿ ಪ್ರಜಾಸತ್ತಾತ್ಮಕ ರಾಜ್ಯ ಬರುವಂತೆ ಒತ್ತಾಯಿಸಿದರು. ಸಂಸ್ಥಾನಿಕರು ಒಪ್ಪಿ ದ್ವಿದಳ ರಾಜ್ಯ ಪದ್ಧತಿಯನ್ನು ಕೊಡಲು ಒಪ್ಪಿದರು. ಈ ಸಮಯದಲ್ಲಿಯ ಅವರ ಪ್ರಾಮಾಣಿಕ ಕೆಲಸವನ್ನು ಕಂಡ ಅಂದಿನ ಕಾಂಗ್ರೆಸ ನಾಯಕರುಗಳಾದ ಶ್ರೀಯುತರಾದ ವಾಮನರಾವ ಬಿದರಿ, ವೆಂಕಟರೆಡ್ಡಿ ಹೂಲಿ, ಶಿವನಗೌಡ ಪಾಟೀಲ, ಅಣ್ಣು ಗುರೂಜಿ ಮೊದಲಾದವರು ಜತ್ತಿಯವರನ್ನು ಮೆಚ್ಚಿಕೊಂಡರು ಹೂಲಿ ವೆಂಕಟರೆಡ್ಡಿಯವರು ಜತ್ತಿಯವರನ್ನು ಕಾಂಗ್ರೆಸ ಸದಸ್ಯರನ್ನಾಗಿ ಸೇರಿಸಿಕೊಂಡರು. ಅಂದಿನಿಂದ ಹೂಲಿಯವರು ಜತ್ತಿಯವರ ರಾಜಕೀಯ ಗುರುಗಳಾದರು. ಜಮಖಂಡಿಯಲ್ಲಿ ಶ್ರೀ ಸಾಬಡೆ ಅವರು ಅವರಿಗೆ ರಾಜಕೀಯದಲ್ಲಿ ಮುಖಂಡರು. ಅನಂತರದ ಪ್ರಜಾಪರಿಷತ್ತಿನ ಸದಸ್ಯರಲ್ಲಿ ಮಂತ್ರಿಗಳನ್ನು ಆಯ್ಕೆ ಮಾಡುವಾಗ ಶ್ರೀ ಸಾಬಡೆ ಅವರು ಜತ್ತಿ ಅವರನ್ನೆ ಮಂತ್ರಿಯಾಗಲು ಸೂಚಿಸಿದರು. ದಿನಾಂಕ 18-4-1945 ರಂದು ಜತ್ತಿ ಅವರು ಜಮಖಂಡಿ ಸಂಸ್ಥಾನದ ಮಂತ್ರಿಗಳಾಗಿ ಅಧಿಕಾರ ಪ್ರಮಾಣ ವಚನ ಸ್ವೀಕರಿಸಿದರು.

ಜಮಖಂಡಿ ಸಂಸ್ಥಾನದ ಮಹಾರಾಜರು ಮರಾಠಿ ಮೂಲದ ಪಟವರ್ಧನರು. ಹೀಗಾಗಿ ಮರಾಠಿ ಭಾಷೆಯ ಪ್ರಾಬಲ್ಯ ಅಧಿಕವಾಗಿತ್ತು. ಜತ್ತಿಯವರು ವಿದ್ಯಾ ಇಲಾಖೆಯ ಮಂತ್ರಿಗಳಾಗಿದ್ದಾಗ ಕನ್ನಡ ಭಾಷೆಗೆ ಚಾಲನೆಕೊಟ್ಟರು. ಅದರಿಂದಾಗಿ ಕನ್ನಡದ ಜಮಖಂಡಿಯಲ್ಲಿ ಮತ್ತೆ ಕನ್ನಡಕ್ಕೆ ಉಸಿರು ಬಂದಿತು. ಒಂದು ವರುಷ ಮಂತ್ರಿಗಳಾಗಿದ್ದ ಜತ್ತಿ ಅವರು ಮರು ವರುಷ ಸಂಸ್ಥಾನದ ಮುಖ್ಯಮಂತ್ರಿಗಳಾದರು. ಈ ಅವಧಿಯಲ್ಲಿ ಹಲವಾರು ಉಪಯುಕ್ತ ಕಾಮಗಾರಿಗಳನ್ನು ಮಾಡಲಾಯಿತು. ಆಹಾರ ಧಾನ್ಯದ ಅಭಾವದಲ್ಲಿ ಆಮದು ಮಾಡಿಕೊಂಡ ಆಹಾರಧಾನ್ಯಗಳ ಸಮರ್ಪಕ ವಿತರಣೆ ಮತ್ತು ಘಟಪ್ರಭಾ ಯೋಜನೆಯ ಅಡಿಯಲ್ಲಿ ಬರುವ ಕಾಲುವೆಗಳನ್ನು ಜಮಖಂಡಿ ಸಂಸ್ಥಾನದಲ್ಲಿ ತೋಡುವುದು. ಇವು ಪ್ರಮುಖವಾಗಿದ್ದವು. ಅದರಿಂದಾಗಿ ಇಂದು ಜಮಖಂಡಿ ತಾಲೂಕಿನಲ್ಲಿ ಸಹಸ್ರಾರು ಎಕರೆ ಭೂಮಿಗೆ ನೀರಾವರಿ ಸೌಲಭ್ಯ ದೊರಕಿದೆ. ಈ ಮಧ್ಯ ಆಗಸ್ಟ, 1947 ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ದೊರೆಯಿತು. ಅನಂತರ ದಿನಾಂಕ 8-3-1948 ರಂದು ಜಮಖಂಡಿ ಸಂಸ್ಥಾನವು ಸ್ವತಂತ್ರ ಭಾರತದಲ್ಲಿ ವಿಲೀನವಾಯಿತು.

ಮುಂದಿನ ಸುಮಾರು 20 ತಿಂಗಳು ಜತ್ತಿ ಅವರು ತಮ್ಮ ವಕೀಲ ವೃತ್ತಿಯಲ್ಲಿದ್ದರು. ಈ ಅವಧಿಯಲ್ಲಿ ಅವರ ವೃತ್ತಿ ಚೆನ್ನಾಗಿ ನಡೆದಿದ್ದರಿಂದ, ಸಾವಳಗಿಯಲ್ಲೊಂದು ಮನೆ ಮತ್ತು ಎರಡು ಹೊಲಗಳನ್ನು ಕೊಂಡರು. ಪಾಲುದಾರಿಕೆಯಲ್ಲಿ ಹತ್ತಿ ಅರೆಯುವ ಗಿರಣಿಯನ್ನು ಪ್ರಾರಂಭಿಸಿದರು. ಜೊತೆಗೆ ಒಂದು ಚಿಕ್ಕ ಮುದ್ರಣಾಲಯ ಮತ್ತು ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಪ್ರಾರಂಭದಲ್ಲಿ ನೂತನವಾಗಿ ನಿರ್ಮಾಣವಾದ ಸಾಂಗ್ಲಿ ಜಿಲ್ಲೆಯಲ್ಲಿ ಜಮಖಂಡಿ ತಾಲೂಕು ಸೇರ್ಪಡೆಯಾಯಿತು. ಅಲ್ಲಿ ಸಾಂಗ್ಲಿ ಜಿಲ್ಲಾ ಅಭಿವೃದ್ಧಿ ಮಂಡಳದ ಕಾರ್ಯದರ್ಶಿಯಾಗಿ 18 ತಿಂಗಳು ಕೆಲಸ ಮಾಡಿದರು. ಜೊತೆಗೆ ವಕೀಲ ವೃತ್ತಿಯೂ ನಡೆದಿತ್ತು.

ಆಗಿನ ಮುಂಬಯಿ ಸರಕಾರ ಮತ್ತು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮೀಟಿಯು ಅಲ್ಲಿ ಜತ್ತಿ ಅವರನ್ನು ಅಂದಿನ ಮುಂಬಯಿ ರಾಜ್ಯದ ವಿಧಾನ ಸಭೆಯ ಸದಸ್ಯರನ್ನಾಗಿ ನಾಮಕರಣ ಮಾಡಿದರು. ದಿನಾಂಕ 9-9-1949 ರಂದು ವಿಧಾನ ಸಭಾ ಸದಸ್ಯರಾದರು. ಮುಂದಿನ ಒಂದು ತಿಂಗಳಲ್ಲಿ ಅಂದಿನ ಮುಂಬಯಿ ರಾಜ್ಯದ ಮುಖ್ಯ ಮಂತ್ರಿಗಳಾದ ಶ್ರೀ ಬಿ.ಜಿ.ಖೇರ್ ಅವರು ಜತ್ತಿ ಅವರನ್ನು ಸಂಸದೀಯ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಿದರು. ಆಗ ಅವರ ಸಂಬಳ 450 ರೂಪಾಯಿ, ಆದರೆ ವಕೀಲ ಗಳಿಕೆ ತಿಂಗಳಿಗೆ ಒಂದು ಸಾವಿರದಷ್ಟಿತ್ತು. ಮುಖ್ಯಮಂತ್ರಿಗಳೊಡನೆ ಕೆಲಸ ಮಾಡುವ ಅನುಭವ ಮತ್ತು ಗಣ್ಯ ವ್ಯಕ್ತಿಗಳ ಸಂಪರ್ಕದಿಂದ ಜತ್ತಿ ಅವರು ಅಂದಿನಿಂದ ಪೂರ್ಣಪ್ರಮಾಣದ ರಾಜಕಾರಣದಲ್ಲಿ ತೊಡಗಿದರು. ಆಗ ಮುಂಬಯಿ ಮಂತ್ರಿ ಮಂಡಲದಲ್ಲಿ ಶ್ರೀ ಯುತರುಗಳಾದ ಕೆ. ಎಫ್. ಪಾಟೀಲ, ಎಸ್. ಆರ್. ಕಂಠಿ, ಎಸ್.ಪಿ. ಗಾವಕರ, ವೈ. ಟಿ. ಚವ್ಹಾಣ, ಬಾಬೂಭಾಯಿ ಪಟೇಲ, ಡಿ. ಕೆ. ಕುಂಟೆ, ಬಿ. ಡಿ. ದೇಶಮುಖ, ಘಖಿ ಮತ್ತು ಇಂದುಮತಿ ಸೇಠ ಮುಂತಾದವರಿದ್ದರು.

**ಚುನಾಯಿತ ಶಾಸಕ :**

ಭಾರತವು ಗಣರಾಜ್ಯವಾದ ಮೇಲೆ 1952 ರ ಮಾರ್ಚ ತಿಂಗಳಲ್ಲಿ ಪ್ರಥಮ ಸಾರ್ವತ್ರಿಕ ಚುನಾವಣೆಗಳನ್ನು ನಡೆಸಲಾಯಿತು. ಶ್ರೀ ಜತ್ತಿ ಅವರು ಕಾಂಗ್ರೆಸ್ ಪಕ್ಷದ ಉಮೇದುವಾರರಾಗಿ ಜಮಖಂಡಿ ಮತದಾರ ಕ್ಷೇತ್ರದಿಂದ ವಿಧಾನ ಸಭೆಯ ಸದಸ್ಯತ್ವಕ್ಕೆ ಸ್ಪರ್ಧಿಸಿದರು. ಆ ಚುನಾವಣೆಯಲ್ಲಿ ಜಮಖಂಡಿ ತಾಲೂಕಿನ ಕಾಂಗ್ರೆಸ್ ಪಕ್ಷದ ಕಾರ್ಯಕರ್ತರು ಶ್ರದ್ಧೆಯಿಂದ ಕೆಲಸ ಮಾಡಿ ಶ್ರೀ ಜತ್ತಿ ಅವರನ್ನು ಬಹು ಮತದಿಂದ ಆರಿಸಿ ತಂದರು. ಆ ಚುನಾವಣೆಯಲ್ಲಿ ಮುಂಬಯಿ ರಾಜ್ಯದಲ್ಲೂ ಕಾಂಗ್ರೆಸ್ ಪಕ್ಷಕ್ಕೆ ಬಹುಮತ ದೊರೆಯಿತು. ಶ್ರೀ ಖೇರರು ಚುನಾವಣೆಗೆ ಸ್ಪರ್ಧಿಸಿರಲಿಲ್ಲ. ಶ್ರೀ ಮುರಾರ್ಜಿ ದೇಸಾಯಿಯವರು ಚುನಾವಣೆಯಲ್ಲಿ ಸ್ಪರ್ಧಿಸಿ ಸೋತಿದ್ದರು. ಅವರ ಎದುರಾಳಿ ಶ್ರೀ ಅಮುಲ್ ದೇಸಾಯಿ ಎಂಬುವರು ಗೆದ್ದಿದ್ದರು.

ಕಾಂಗ್ರೆಸ್ ಪಕ್ಷದ ಚುನಾಯಿತ ಸದಸ್ಯರ ಸಭೆಯನ್ನು ಕರೆಯಲಾಯಿತು. ಆ ಸಭೆಯಲ್ಲಿ ಶ್ರೀ ಮುರಾರ್ಜಿ ದೇಸಾಯಿ ಅವರು ಪಕ್ಷದ ನಾಯಕರಾಗಬೇಕೆಂಬ ಸಲಹೆ ಬಂದಿತು. ಶ್ರೀ ದೇಸಾಯಿ ಅವರು ತಮ್ಮನ್ನು ಸರ್ವಾನುಮತದಿಂದ ಆರಿಸಿದರೆ ಮಾತ್ರ ನಾಯಕರಾಗಲು ಒಪ್ಪಿಕೊಂಡರು. ಮರಾಠಿಯ ಶ್ರೀ ಭಾವೂಸಾಹೇಬ ಹಿರೆ ಎಂಬುವರು ಪಕ್ಷದ ನಾಯಕರಾಗಬೇಕೆಂದು ಆಸೆ ಪಟ್ಟಿದ್ದರು. ಆದರೆ ಸಭೆಯಲ್ಲಿ ಒಬ್ಬರು ಶ್ರೀ ದೇಸಾಯಿ ಅವರ ಹೆಸರನ್ನು ಸೂಚಿಸಿದರು. ಆ ಸೂಚನೆಗೆ ಸರ್ವರೂ ಅನುಮೋದನೆಯನ್ನು ಕೊಟ್ಟರು. ಇನ್ನೊಬ್ಬರ ಹೆಸರನ್ನು ಸೂಚಿಸುವ ಸಂದರ್ಭವೇ ಬರಲಿಲ್ಲ. ಶ್ರೀ ಮುರಾರ್ಜಿ ದೇಸಾಯಿ ಅವರು ಪಕ್ಷದ ನಾಯಕರಾಗಿ ಮುಂಬಯಿ ರಾಜ್ಯದ ಮುಖ್ಯಮಂತ್ರಿಗಳಾದರು. ಆನಂತರದ

ಕೆಲ ದಿನಗಳಲ್ಲಿ ಅವರು ವಿಧಾನ ಪರಿಷತ್ತಿನ ಸದಸ್ಯರಾಗಿ ಆಯ್ಕೆಗೊಂಡರು. ಆದಾದ ಒಂದೆರಡು ತಿಂಗಳುಗಳಲ್ಲಿ ತೆರವಾದ ಒಂದು ವಿಧಾನ ಸಭೆಯ ಸ್ಥಳಕ್ಕೆ ಸ್ಪರ್ಧಿಸಿ ಚುನಾಯಿತರಾದರು.

ಪಕ್ಷದ ನಾಯಕರ ಚುನಾವಣೆಯ ಅನಂತರ ಮುಂಬಯಿ ಕರ್ನಾಟಕ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಕಾಂಗ್ರೆಸ ಸದಸ್ಯರ ಸಭೆಯಲ್ಲಿ, ಮುಂಬರುವ ಮಂತ್ರಿಮಂಡಲದಲ್ಲಿ ಮುಂಬಯಿ ಕರ್ನಾಟಕದಿಂದ ಇಬ್ಬರು ಮಂತ್ರಿಗಳನ್ನು ತೆಗೆದುಕೊಳ್ಳಬೇಕೆಂದು ನಿರ್ಣಯ ತೆಗೆದುಕೊಳ್ಳುವಾಗ ಹಾಗೆ ಶರತ್ತು ಹಾಕುವುದು ಸರಿಯಲ್ಲ ಎಂದು ಶ್ರೀ ಜತ್ತಿಯವರು ವಾದಿಸಿದ್ದರು. ಆದರೆ ಅವರ ವಾದವನ್ನು ಗಣಿಸದೆ ಇಬ್ಬರು ಮಂತ್ರಿಗಳನ್ನು ತೆಗೆದುಕೊಳ್ಳಬೇಕೆಂದು ನಿರ್ಣಯಿಸಲಾಗಿತ್ತು ಮತ್ತು ವಿಧಾನ ಪರಿಷತ್ತಿಗೆ ಶ್ರೀ ರಾಮರಾವ ಹುಕ್ಕೆರಿಕರ ಅವರನ್ನು ಅಧ್ಯಕ್ಷನ್ನಾಗಿ ಮಾಡಲಾಯಿತು.

ಶ್ರೀ ಮುರಾರ್ಜಿ ದೇಸಾಯಿ ಅವರು ದೆಹಲಿಯ ಹೈಕಮಾಂಡಿನ ಒಪ್ಪಿಗೆಯನ್ನು ಪಡೆದು ಮಂತ್ರಿಮಂಡಲವನ್ನು ಪ್ರಕಟಿಸಿದಾಗ ಅದರಲ್ಲಿ ಕರ್ನಾಟಕ್ಕೆ ಒಂದೇ ಸ್ಥಾನವನ್ನು ಕೊಡುವ ಏರ್ಪಾಡಾಗಿತ್ತು. ಅನಂತರ ಶ್ರೀ ಜತ್ತಿಯವರ ಮಧ್ಯಸ್ಥಿಕೆಯಿಂದ ಇನ್ನೊಬ್ಬರನ್ನು ತೆಗೆದುಕೊಳ್ಳಲು ಶ್ರೀ ಮುರಾರ್ಜಿ ದೇಸಾಯಿಯವರು ಒಪ್ಪಿಕೊಂಡರು. ಸರ್ವ ಶ್ರೀ ಕೆ. ಎಫ್. ಪಾಟೀಲ ಮತ್ತು ಎಂ.ಪಿ. ಪಾಟೀಲರು ಮಂತ್ರಿಗಳಾದರು. ಆ ಮಂತ್ರಿ ಮಂಡಳದಲ್ಲಿ ಶ್ರೀ ಜತ್ತಿಯವರು ಉಪ ಮಂತ್ರಿಯಾದರು. ಶ್ರೀ ಎಸ್.ಆರ್. ಕಂಠಿಯವರು ಉಪ ಸಭಾಪತಿಗಳಾದರು.

ಶ್ರೀ ಜತ್ತಿಯವರು ಮುಂಬಯಿ ರಾಜ್ಯದ ಆರೋಗ್ಯ ಮತ್ತು ಕಾರ್ಮಿಕ ಇಲಾಖೆಯ ಸಚಿವರಾಗಿ ನಿಯುಕ್ತಗೊಂಡ ಶ್ರೀ ಶಾಂತಿಲಾಲ ಶಹ ಅವರ ಉಪಮಂತ್ರಿಯಾದರು. ಶ್ರೀ ಶಹ ಅವರು ಅತ್ಯಂತ ಮೇಧಾವಿ ಮತ್ತು ಸಮರ್ಥ ಆಡಳಿತಗಾರರಾಗಿದ್ದರು. ಪ್ರಾರಂಭದಲ್ಲಿ ಆರೋಗ್ಯ ಇಲಾಖೆಯ ಶೆ. 25 ರಷ್ಟು ಫೈಲುಗಳನ್ನು ನೋಡುತ್ತಿದ್ದ ಶ್ರೀ ಜತ್ತಿಯವರ ಕಾರ್ಯವೈಖರಿಯನ್ನು ನೋಡಿದ ಶ್ರೀ ಶಹ ಅವರು ಮೂರು ತಿಂಗಳಲ್ಲಿ ಶೇಕಡಾ 50 ಕ್ಕೆ ಏರಿಸಿದರು. ಒಂದು ವರ್ಷ ಕಳೆಯುವಷ್ಟರಲ್ಲಿ ಶ್ರೀ ಜತ್ತಿಯವರು ಆರೋಗ್ಯ ಇಲಾಖೆಯ ಎಲ್ಲ ಫೈಲುಗಳನ್ನು ನೋಡುವುದರೊಂದಿಗೆ ಇಲಾಖೆಗೆ ಸಂಬಂಧಪಟ್ಟ ಪ್ರಶ್ನೆಗಳಿಗೆ ವಿಧಾನ ಸಭೆ ಮತ್ತು ಪರಿಷತ್ತುಗಳಲ್ಲಿ ಅವರೆ ಉತ್ತರ ಕೊಡುವಷ್ಟು ಪರಿಣತರಾದರು. ಗೊತ್ತುವಳಿಗಳನ್ನು ಮಂಡಿಸಿ ಚರ್ಚೆಗೆ ಉತ್ತರವನ್ನು ಕೊಡಹತ್ತಿದರು. ಶ್ರೀ ಶಹ ಅವರು ನೀಡಿದ ತರಬೇತಿಯನ್ನು ಅವರು ನೆನಪಿಸಿಕೊಳ್ಳುತ್ತಾರೆ.

ಆರೋಗ್ಯ ಇಲಾಖೆಯ ಉಪಮಂತ್ರಿಗಳಿದ್ದಾಗಿನ ಒಂದೆರಡು ಪ್ರಸಂಗಗಳನ್ನು ಹೇಳಬೇಕು. ಮಣಿಪಾಲದಲ್ಲಿ ಮೆಡಿಕಲ್ ಕಾಲೇಜು ಪ್ರಾರಂಭ ಮಾಡುವ ಪ್ರಸ್ತಾಪ ಬಂದಿತು. ವಾಸ್ತವದಲ್ಲಿ ಅದಾಗ ಮದ್ರಾಸ ಪ್ರಾಂತದಲ್ಲಿತ್ತು. ಸದರಿ ಕಾಲೇಜನ್ನು ಕರ್ನಾಟಕದ

ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಪ್ರಾರಂಭಿಸಬೇಕಾಗಿತ್ತಾದ್ದರಿಂದ ಪ್ರಸ್ತಾವನೆಯನ್ನು ಮುಂಬಯಿ ರಾಜ್ಯಕ್ಕೆ ಸಲ್ಲಿಸಲಾಗಿತ್ತು. ಈ ವಿಷಯಕ್ಕೆ ಸಂಬಂಧ ಪಟ್ಟ ಫೈಲನ್ನು ಅಂದಿನ ಲೋಕೋಪಯೋಗಿ ಇಲಾಖೆಯನ್ನು ವಹಿಸಿಕೊಂಡಿದ್ದ ಡಾ|| ಜೀವರಾಜ ಮೆಹತಾ ಅವರ ಕಡೆಗೆ ಆರೋಗ್ಯ ಮಂತ್ರಿಗಳಾದ ಶ್ರೀ ಶಾಂತಿಲಾಲ ಶಹ ಅವರು ಕಳಿಸಿಕೊಟ್ಟಿದ್ದರು. ಡಾ|| ಮೆಹತಾ ಅವರು ಫೈಲನ್ನು ಓದಿ, ಅಲ್ಲಿ ಕಟ್ಟಡಗಳಿಲ್ಲಾ, ಸಲಕರಣೆಗಳಿಲ್ಲಾ ಇತ್ಯಾದಿಯಾಗಿ ಕೆಲವು ಕಾರಣಗಳನ್ನು ಮುಂದು ಮಾಡಿ ಅಲ್ಲಿ ಮೆಡಿಕಲ್ ಕಾಲೇಜನ್ನು ಪ್ರಾರಂಭ ಮಾಡಲು ಅನುಮತಿಯನ್ನು ಕೊಡಬಾರದೆಂದು ಬರೆದಿದ್ದರು. ಆ ಫೈಲು ಶ್ರೀ ಜತ್ತಿಯವರ ಕಡೆಗೆ ಬಂದಿತು. ಅವರು ಅದನ್ನು ಓದಿ, ಕಾಲೇಜನ್ನು ಪ್ರಾರಂಭ ಮಾಡಬಾರದು ಎಂಬುದಕ್ಕೆ ಕೊಟ್ಟ ಕಾರಣಗಳನ್ನು ಸರಿಯಲ್ಲ ವಾಸ್ತವದಲ್ಲಿ ಮಣಿಪಾಲದಲ್ಲಿ ಕಾಲೇಜಿಗಾಗಿ ಕಟ್ಟಿದ ಕಟ್ಟಡಗಳ ಫೋಟೋಗಳನ್ನು ಡಾ|| ಟಿ.ಎಮ್.ಎ. ಪೈ ಅವರು ಒದಗಿಸಿದ್ದಾರೆ. ಅದ್ದರಿಂದ ಕಾಲೇಜನ್ನು ಪ್ರಾರಂಭಮಾಡಲು ಒಪ್ಪಿಗೆಯನ್ನು ಕೊಡಬೇಕೆಂದು ಬರೆದು ಶ್ರೀ ಜತ್ತಿಯವರು ಫೈಲನ್ನು ಶ್ರೀ ಶಾಂತಿಲಾಲ ಶಹ ಅವರೆಡೆಗೆ ಕಳಿಸಿಕೊಟ್ಟರು. ಅವರು ಶ್ರೀ ಜತ್ತಿಯವರನ್ನು ಕರೆದು 'ಕೆಬಿನೆಟ್ ಮಂತ್ರಿಗಳ ಟಿಪ್ಪಣಿಗೆ ಪ್ರತಿಯಾಗಿ ಉಪಮಂತ್ರಿಯಾದ ನೀವು ಬರೆಯಬಾರದಾಗಿತ್ತು. ಈಗ ಏನು ಮಾಡಬೇಕು?' ಎಂದರು. ಅದಕ್ಕೆ ಶ್ರೀ ಜತ್ತಿಯವರು ಡಾ|| ಮೆಹತಾ ಅವರು ಆರೋಗ್ಯ ಇಲಾಖೆಗೆ ಸಂಬಂಧಪಟ್ಟವರಲ್ಲಾ ಅವರು ಸರಿಯಾದ ಮಾಹಿತಿ ಇಲ್ಲದ್ದಕ್ಕೆ ಬರೆದದ್ದು ಗೊತ್ತಾಗಿ ನಾನು ಬರೆದೆ, ಇಷ್ಟಾಗಿಯೂ ಇದು ವಿದ್ಯಾ ಇಲಾಖೆಗೆ ಸಂಬಂಧಪಟ್ಟದ್ದು, ಅವರೊಂದಿಗೆ ಚರ್ಚಿಸಬೇಕೆಂದು ಹೇಳಿದರು. ಅನಂತರ ವಿದ್ಯಾ ಇಲಾಖೆಯ ಮಂತ್ರಿಗಳಾದ ಶ್ರೀ ದಿನಕರ ಭಾಯಿ ದೇಸಾಯಿ ಅವರೊಂದಿಗೆ ಚರ್ಚಿಸಿ ಒಂದು ಕಮೀಟಿಯನ್ನು ನೇಮಿಸುವ ನಿರ್ಣಯವಾಯಿತು. ಆ ಕಮೀಟಿ ಪ್ರತ್ಯಕ್ಷ ನೋಡಿಕೊಂಡು ಬಂದು ಕಾಲೇಜನ್ನು ಪ್ರಾರಂಭಿಸಲು ಅನುಮತಿಯನ್ನು ಕೊಡಬಹುದೆಂದು ಹೇಳಿತು. ಅದರಿಂದ ಶ್ರೀ ಜತ್ತಿಯವರು ಫೈಲಿನಲ್ಲಿ ಬರೆದ ಅಭಿಪ್ರಾಯ ಸರಿ ಇದೆ ಎಂದು ಎಲ್ಲರಿಗೂ ಗೊತ್ತಾಯಿತು.

ಇನ್ನೊಂದು ಪ್ರಸಂಗ, ಅಂದು ಕೇಂದ್ರ ಸರಕಾರದಲ್ಲಿ ಆರೋಗ್ಯ ಇಲಾಖೆಯ ಮಂತ್ರಿಗಳಾಗಿದ್ದ ಶ್ರೀಮತಿ ರಾಜಕುಮಾರಿ ಅಮೃತ ಕೌರ ಅವರು ಅಂದಿನ ಮುಂಬಯಿ ರಾಜ್ಯದ ಮುಖ್ಯ ಮಂತ್ರಿ ಶ್ರೀ ಮುರಾರ್ಜಿ ದೇಸಾಯಿಯವರಿಗೆ ಪತ್ರ ಬರೆದು ಮೆಡಿಕಲ್ ಕಾಲೇಜಿನಲ್ಲಿ ಒಂದು ಸೀಟು ಕೊಡಿಸಲು ಕೇಳಿಕೊಂಡಿದ್ದರು. ಅದನ್ನು ಮುಖ್ಯ ಮಂತ್ರಿಗಳು ಆರೋಗ್ಯ ಇಲಾಖೆಯ ಕಾರ್ಯದರ್ಶಿಗೆ ಕಳುಹಿಸಿದ್ದರು. ಕಾರ್ಯದರ್ಶಿಗಳಾಗಿದ್ದ ಶ್ರೀ ಬಂಬುವಾಲಾ ಐ.ಸಿ.ಎಸ್. ಅವರು ಒಂದು ಫೈಲನಲ್ಲಿ ಪತ್ರದ ವಿಷಯವನ್ನು ನಮೂದಿಸಿ ಒಂದು ಸೀಟನ್ನು ಕೊಡಲು ಶಿಫಾರಸ್ಸು ಮಾಡಿ ಫೈಲನ್ನು ಶ್ರೀ ಜತ್ತಿ ಅವರ ಹತ್ತಿರ ಸ್ವತಃ ತೆಗೆದುಕೊಂಡು ಬಂದರು. ಆದರೆ ನೇಮಗಳಿಗೆ ಅನುಸಾರವಾಗಿ ಹಾಗೆ ಸೀಟು ಕೊಡಲು ಬರುವುದಿಲ್ಲಾ ಎಂದು ಶ್ರೀ ಜತ್ತಿಯವರು ಸ್ಪಷ್ಟವಾಗಿ ಹೇಳಿದರು ಮತ್ತು ಮುಖ್ಯ ಮಂತ್ರಿಗಳಿಗೆ ಹಾಗೆ ತಿಳಿಸಿರಿ ಎಂದರು. ಅದರಂತೆ ತಿಳಿಸಿದಾಗ ಮುಖ್ಯಮಂತ್ರಿಗಳು ಶ್ರೀ ಜತ್ತಿಯವರನ್ನು

ತಮ್ಮ ಚೆಂಬರಿಗೆ ಕರೆಸಿಕೊಂಡು ಚರ್ಚಿಸಿದರು. ಆಗಲೂ ಶ್ರೀ ಜತ್ತಿಯವರು ಇಲಾಖೆಯ ನಿಯಮಗಳಂತೆ ಕೊಡಲು ಬರುವುದಿಲ್ಲಾ ನೀವು ಬೇಕಿದ್ದರೆ ಏನು ಮಾಡಬೇಕೆಂಬುದನ್ನು ಹೇಳಿ ಎಂದರು. ಆಗ ಶ್ರೀ ಮುರಾರ್ಜಿ ದೇಸಾಯಿಯವರು ಕಾರಣವನ್ನು ನಮೂದಿಸಿ ಕೇಂದ್ರ ಸಚಿವರಿಗೆ ತಿಳಿಸಿ ಬಿಡಿರಿ ಎಂದರು. ಅಂದಿನ ದಿನಗಳಲ್ಲಿ ಸರಕಾರದಲ್ಲಿ ಕಾನೂನಿಗನುಸಾರವಾಗಿ ಕೆಲಸ ಮಾಡಲು ಸಂಪೂರ್ಣ ಅವಕಾಶವಿತ್ತು ಎಂದು ಶ್ರೀ ಜತ್ತಿಯವರು ತಮ್ಮ ಆತ್ಮಕಥನದಲ್ಲಿ ನಮೂದಿಸಿದ್ದಾರೆ.

ಶ್ರೀ ಜತ್ತಿಯವರು ಚುನಾಯಿತರಾದದ್ದು ಜಮಖಂಡಿ ಮತಕ್ಷೇತ್ರದಿಂದ. ಅಲ್ಲಿಯ ಅಭಿವೃದ್ಧಿಗೆ ಗಮನ ಕೊಡುವುದು ಸಹಜವಾಗಿತ್ತು. ರಬಕವಿ, ಬನಹಟ್ಟಿ ಮತ್ತು ಹೊಸೂರುಗಳು ಹತ್ತಿರ - ಹತ್ತಿರ ಇದ್ದ ನಗರ ಹಳ್ಳಿಗಳು. ರಬಕವಿ, ಬನಹಟ್ಟಿಗಳಲ್ಲಿ ನಗರಸಭೆಗಳಿದ್ದರೆ ಹೊಸೂರಿನಲ್ಲಿ ಗ್ರಾಮ ಪಂಚಾಯಿತಿ ಇತ್ತು, ಮೂರನ್ನು ಕೂಡಿ ಒಂದೇ ನಗರಸಭೆಯನ್ನಾಗಿ ಪರಿವರ್ತಿಸಿದರೆ ಆ ಪ್ರದೇಶದ ಅಭಿವೃದ್ಧಿಗೆ ಅನುಕೂಲವಾಗುವುದೆಂದು ಶ್ರೀ ಜತ್ತಿಯವರು ಯತ್ನಿಸಿದರು. ನಗರಸಭೆ - ಪಂಚಾಯಿತಿಗಳು ಅವರ ಸೂಚನೆಯನ್ನು ಒಪ್ಪಿದರಾದರೂ ಅಲ್ಲಿಯ ಕೆಲವು ಜನರು ಅದನ್ನು ವಿರೋಧಿಸಿದರು. ನಗರಾಡಳಿತ ಸಚಿವರಾದ ಶ್ರೀ ಎಂ.ಪಿ. ಪಾಟೀಲ ಅವರು ಜನರ ವಿರೋಧ ಇದೆ ಆದ್ದರಿಂದ ಬೇಡ ಎಂದರು. ಆದರೆ ಶ್ರೀ ಜತ್ತಿಯವರು ಪಟ್ಟು ಬಿಡಲಿಲ್ಲ. ಮುಂಬರುವ ಚುನಾವಣೆಗಳಲ್ಲಿ ಅದು ಅವರಿಗೆ ಮಾರಕವಾಗಬಹುದೆಂದು ಹೇಳಿದರೂ, ಒಂದು ಒಳ್ಳೆಯ ಕೆಲಸಕ್ಕೆ ಚುನಾವಣೆಯಲ್ಲಿ ಸೋತರೂ ಚಿಂತೆಯಿಲ್ಲ ಎಂದರು. ಮತಕ್ಷೇತ್ರದ ಚುನಾಯಿತ ಪ್ರತಿನಿಧಿಯ ಸೂಚನೆಯಂತೆ ರಬಕವಿ, ಬನಹಟ್ಟಿ ಹೊಸೂರುಗಳನ್ನು ಸೇರಿಸಿ ಒಂದೆ ನಗರಸಭೆಯನ್ನಾಗಿ ಪರಿವರ್ತಿಸಲಾಯಿತು. ಶ್ರೀ ಜತ್ತಿಯವರಿಗೆ ಅದರಿಂದ ಮಾರಕವೇನೂ ಆಗಲಿಲ್ಲ. ಅವರು ಮತ್ತೆ ಅದೇ ಕ್ಷೇತ್ರದಿಂದ ಚುನಾಯಿತರಾದರು, ನಗರಸಭೆ ಚೆನ್ನಾಗಿ ನಡೆಯಿತು ಪ್ರದೇಶದ ಅಭಿವೃದ್ಧಿಯೂ ಆಯಿತು. ಅದೇ ಅವಧಿಯಲ್ಲಿ ಜಮಖಂಡಿ ಮತ್ತು ವಿಜಾಪುರದ ಮಧ್ಯ ಪಡಿಸಲಗಿಯ ಹತ್ತಿರ ಕೃಷ್ಣಾ ನದಿಗೆ ಸೇತುವೆ ಮತ್ತು ಜಮಖಂಡಿ ಬಿಜಾಪುರ ರಸ್ತೆಗಳು ನಿರ್ಮಾಣವಾದವು.

**ಭಾಷಾವಾರು ರಾಜ್ಯ ರಚನೆ :**

ಭಾಷಾವಾರು ರಾಜ್ಯಗಳ ರಚನೆಯ ಕುರಿತು ನಡೆದ ಅನೇಕ ವರುಷಗಳ ಚಳುವಳಿಯ ಪರಿಣಾಮವಾಗಿ ಭಾರತ ಸರಕಾರವು 1956 ರ ನವೆಂಬರ 1 ರಂದು ಭಾಷಾವಾರು ರಾಜ್ಯಗಳ ರಚನೆಯನ್ನು ಪ್ರಕಟಿಸಿತು. ಕನ್ನಡ ಭಾಷೆಯ ಪ್ರದೇಶಗಳನ್ನೆಲ್ಲ ಒಂದು ಗೂಡಿಸಿ ಹೊಸ ಮೈಸೂರು ರಾಜ್ಯವನ್ನು ರಚಿಸುವುದಾಗಿ ಪ್ರಕಟಿಸಲಾಯಿತು. ಮುಂಬಯಿ ಕರ್ನಾಟಕದಲ್ಲಿಯ ಕಾರವಾರ, ಧಾರವಾಡ, ಬಿಜಾಪುರ ಮತ್ತು ಬೆಳಗಾವಿ ಜಿಲ್ಲೆಗಳನ್ನು ಹೊಸದಾಗಿ ನಿರ್ಮಿಸಲಾಗುವ ಮೈಸೂರು ರಾಜ್ಯದಲ್ಲಿ ಸೇರಿಸುವುದೆಂದು ನಿಶ್ಚಯವಾಯಿತು. ಅದರಿಂದಾಗಿ ಮುಂಬಯಿ ಸರಕಾರದವರು ಹೊಸ ಮೈಸೂರು ಸರಕಾರಕ್ಕೆ ಒಪ್ಪಿಸಬೇಕಾದ ಸಿಬ್ಬಂದಿ ಮತ್ತು ಹಣವನ್ನು ನಿಗದಿಪಡಿಸಲು ಶ್ರೀ ಜತ್ತಿ ಮತ್ತು ಶ್ರೀ ಶಾಂತಿಲಾಲ ಶಹ ಅವರುಗಳಿಗೆ ನೋಡಲು

ಹೇಳಿದರು. ಆದಕ್ಕೂ ಮೊದಲೆ ಶ್ರೀ ಜತ್ತಿ, ಶ್ರೀ ಚೆನ್ನಬಸಪ್ಪ ಅಂಬಲಿ, ಶ್ರೀ ಹಳ್ಳಿಕೇರಿ ಮತ್ತು ಕೆಲವರು ಕೂಡಿಕೊಂಡು ಅಂದಿನ ಮೈಸೂರು ಸಂಸ್ಥಾನದ ಮಹಾರಾಜರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ ಅವರನ್ನು ಕಂಡು ಅವರ ಅಭಿಪ್ರಾಯವನ್ನು ಕೇಳಲು ಹೋಗಿದ್ದರು. ಮಹಾರಾಜರು 'ಆದಷ್ಟು ಬೇಗ ಹೊಸ ಮೈಸೂರು ರಾಜ್ಯ ರಚನೆಯಾಗಬೇಕು ಹರಿದು ಹಂಚಿಹೋದ ಕನ್ನಡ ಜನ ಒಂದೆಡೆ ಸೇರಬೇಕು ' ಎಂದು ಹಾರೈಸಿದ್ದರು.

ಮುಂಬಯಿ ಕರ್ನಾಟಕದ ವಿಧಾನ ಸಭೆ ಮತ್ತು ವಿಧಾನ ಪರಿಷತ ಸದಸ್ಯರು ಮುಂಬಯಿನಲ್ಲಿಯ ಒಂದು ದೊಡ್ಡ ಹೋಟಲಿನಲ್ಲಿ ಸೇರಿ ಸಭೆ ನಡೆಸಿದರು. ಅಲ್ಲಿ ಹೊಸ ಮೈಸೂರು ರಾಜ್ಯದ ಮುಖ್ಯ ಮಂತ್ರಿ ಸ್ಥಾನಕ್ಕೆ ಶ್ರೀ ಎಸ್ ನಿಜಲಿಂಗಪ್ಪ ಅವರನ್ನು ಚುನಾಯಿಸಬೇಕೆಂದು ನಿರ್ಣಯಿಸಿದರು. 1956 ರ ನವೆಂಬರ 1 ರಂದು ಹೊಸ ಮೈಸೂರು ರಾಜ್ಯ ರಚನೆಯಾಯಿತು. ಶ್ರೀ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರು ಹೊಸರಾಜ್ಯದ ಮುಖ್ಯಮಂತ್ರಿಗಳಾಗಿ ಅವಿರೋಧವಾಗಿ ಆಯ್ಕೆಯಾದರು. ಮುಂಬಯಿ ರಾಜ್ಯದಲ್ಲಿ ಕರ್ನಾಟಕದ ಪರವಾಗಿ ಸರ್ವ ಶ್ರೀ ಕೆ.ಎಫ್. ಪಾಟೀಲ ಮತ್ತು ಶ್ರೀ ಬಿ.ಡಿ. ಜತ್ತಿ ಅವರು ಉಪಮಂತ್ರಿಗಳಾಗಿ ಕೆಲಸ ಮಾಡುತ್ತಿದ್ದರು. ಶ್ರೀ ಎಸ್.ಆರ್. ಕಂಠಿ ಅವರು ಉಪಸಭಾಪತಿಗಳಾಗಿದ್ದರು. ಹೊಸ ಮೈಸೂರು ರಾಜ್ಯದ ಮಂತ್ರಿ ಮಂಡಳದಲ್ಲಿ ಶ್ರೀ ಎಸ್.ಆರ್. ಕಂಠಿ ಅವರು ಮಾತ್ರ ಸಭಾಪತಿಗಳಾದರು, ಉಳಿದ ಇಬ್ಬರನ್ನು ಕೈಬಿಡಲಾಯಿತು.

1956 ನವೆಂಬರ 1ರಿಂದ ಮಾರ್ಚ್ 1957 ರ ವರೆಗೆ ಶ್ರೀ ನಿಜಲಿಂಗಪ್ಪನವರು ಹೊಸ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದರು. ಆ ಅವಧಿಯಲ್ಲಿ ಶ್ರೀ ಬಿ.ಡಿ ಜತ್ತಿಯವರು ಶಾಸಕರಾಗಿ ಉಳಿದು ಜಮಖಂಡಿಯಲ್ಲಿಯೆ ಇದ್ದುಕೊಂಡು ಸಾರ್ವಜನಿಕ ಕೆಲಸ ಮತ್ತು ತಮ್ಮ ವಕೀಲ ವೃತ್ತಿಯನ್ನು ಮುಂದುವರೆಸಿದ್ದರು.

1957 ರ ಮಾರ್ಚ್ ತಿಂಗಳಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆದವು. ಹೊಸ ಮೈಸೂರು ರಾಜ್ಯದ ವಿಧಾನ ಸಭೆಗೆ ಶ್ರೀ ಜತ್ತಿಯವರು ಜಮಖಂಡಿ ಮತಕ್ಷೇತ್ರದಿಂದ ಕಾಂಗ್ರೆಸ ಪಕ್ಷದ ಉಮೆದುವಾರರಾಗಿ ಸ್ಪರ್ಧಿಸಿ ಆರಿಸಿ ಬಂದರು. ಚುನಾವಣೆಯ ಆನಂತರ ಶ್ರೀ ನಿಜಲಿಂಗಪ್ಪನವರೆ ಮತ್ತೆ ಮುಖ್ಯ ಮಂತ್ರಿಗಳಾದರು. ಆ ಸಲದ ಮಂತ್ರಿ ಮಂಡಳದಲ್ಲೂ ಶ್ರೀ ಜತ್ತಿಯವರಿಗೆ ಸ್ಥಾನ ದೊರಕಲಿಲ್ಲ. ಆದರೆ ಕೆಲವು ದಿನಗಳ ಆನಂತರ ಅವರಿಗೆ ಲೋಕ ಸೇವಾ ಆಯೋಗದ ಸದಸ್ಯರಾಗಲು ಕರೆ ಬಂದಿತು. ಶ್ರೀ ಜತ್ತಿಯವರು ಅದನ್ನು ಸ್ವೀಕರಿಸಲಿಲ್ಲ ಶಾಸಕರಾಗಿದ್ದುಕೊಂಡರು.

### ಭೂ ಸುಧಾರಣಾ ಅಧ್ಯಕ್ಷತೆ :

ಹೊಸ ಮೈಸೂರು ರಾಜ್ಯದ ಕಂದಾಯ ಮಂತ್ರಿಗಳಾಗಿದ್ದ ಶ್ರೀ ಎಂ. ಪಿ. ಪಾಟೀಲರು ಶ್ರೀ ಜತ್ತಿಯವರಿಗೆ ಭೂ ಸುಧಾರಣಾ ಸಮಿತಿಯ ಅಧ್ಯಕ್ಷರಾಗಲು ಕೇಳಿಕೊಂಡರು. ಒಳ್ಳೆಯ ಕೆಲಸವೆಂದು ಅವರು ಅದನ್ನು ಒಪ್ಪಿಕೊಂಡರು. ಅದಕ್ಕಾಗಿ ಸಂಬಳವನ್ನು ತೆಗೆದುಕೊಳ್ಳುವದಿಲ್ಲಾ

ಎಂದರು. ಅವರ ಅಧ್ಯಕ್ಷತೆಯ ಸಮಿತಿಯಲ್ಲಿ ಸರ್ವ ಶ್ರೀ ಬಿ. ಬಸವಲಿಂಗಪ್ಪ, ಎಮ್.ಆರ್.ಪಾಟೀಲ, ಬಿ.ಆರ್. ಕರ್ಕೆರಾ, ಬಿ.ವ್ಹಿ. ದೇಸಾಯಿ, ಹುಚ್ಚಮಾಸ್ತಿಗೌಡ, ಮಲ್ಲಿಕಾರ್ಜುನಪ್ಪ ಗೌಡ, ಸಿ.ಎ. ಮಾದಣ್ಣ ಮತ್ತು ಎಂ. ರಾಮಪ್ಪ ಇದ್ದರು. ಐ.ಎ.ಎಸ್. ಅಧಿಕಾರಿಗಳಾದ ಶ್ರೀ ಕೆ. ಬಾಲಸುಬ್ರಮಣ್ಯಂ ಅವರು ಕಾರ್ಯದರ್ಶಿಗಳಾಗಿದ್ದರು. ಸಮಿತಿಯ ವೆಚ್ಚಕ್ಕಾಗಿ 27,000-00 ರೂಪಾಯಿಗಳನ್ನು ಮಂಜೂರು ಮಾಡಿ ಅದರಲ್ಲಿ ಅರ್ಧದಷ್ಟು ಹಣ 13,500-00 ರೂಪಾಯಿಗಳನ್ನು ಬಿಡುಗಡೆ ಮಾಡಿದ್ದರು.

ಶ್ರೀ ಜತ್ತಿಯವರು ಸಮಿತಿಯ ಸದಸ್ಯರು ಮತ್ತು ಕಾರ್ಯದರ್ಶಿಗಳೊಡನೆ ಹೊಸ ಮೈಸೂರು ರಾಜ್ಯವನ್ನೆಲ್ಲಾ ತಿರುಗಾಡಿದರು. ಊಳುವವನೆ ಒಡೆಯ ಎಂಬ ತತ್ವವನ್ನು ಆಧರಿಸಿ ರಾಜ್ಯದ ಬಹುತೇಕ ಭೂ ಮಾಲೀಕರನ್ನು, ಗೇಣಿದಾರರನ್ನು ಕಂಡು ನಿಜ ಪರಿಸ್ಥಿತಿಯನ್ನು ಅರಿತುಕೊಂಡರು. ಸರಕಾರವು ನಿಗದಿ ಮಾಡಿದ ಅವಧಿ ಒಳಗಾಗಿ ಅಂದರೆ 10-9-1957 ರಂದು ತಮ್ಮ ವರದಿಯನ್ನು ಸರಕಾರಕ್ಕೆ ಒಪ್ಪಿಸಿದರು ಮತ್ತು ಈ ಕೆಲಸಕ್ಕಾಗಿ ಮೊದಲು ಬಿಡುಗಡೆ ಮಾಡಿದ 13.500-00 ರೂಪಾಯಿಗಳಷ್ಟನ್ನೆ ಖರ್ಚು ಮಾಡಿದರು. ಇನ್ನರ್ಧ ನಿಗದಿಯಾದ ಹಣವನ್ನು ಸರಕಾರಕ್ಕೆ ಹಿಂತಿರುಗಿಸಿದರು, ಅದೊಂದು ದಾಖಲೆಯ ಅವಧಿಯಲ್ಲಿ ಕಡಿಮೆ ವೆಚ್ಚದಲ್ಲಿ ಒಪ್ಪಿಸಿದ ವರದಿಯಾಗಿತ್ತು.

**ಹೊಸ ಮೈಸೂರು ರಾಜ್ಯದ ರಾಜಕೀಯ ರಂಗದಲ್ಲಿ :**

1956 ರ ನವೆಂಬರ 1 ರಂದು ಭಾಷಾವಾರು ಪ್ರಾಂತ್ಯಗಳು ರಚನೆಯಾಗಿ ಹೊಸ ಮೈಸೂರು ರಾಜ್ಯದ ಪ್ರಥಮ ಮುಖ್ಯ ಮಂತ್ರಿಗಳಾಗಿ ಸಿದ್ಧವ್ವನಹಳ್ಳಿ ಶ್ರೀ ನಿಜಲಿಂಗಪ್ಪನವರು ಕಾರ್ಯನಿರ್ವಹಿಸುತ್ತಿದ್ದರು. ತುಸು ದಿನಗಳಲ್ಲಿ ಕಾರಾಣಾಂತರಗಳಿಂದ ಕಾಂಗ್ರೆಸ ಪಕ್ಷದಲ್ಲಿ ಒಡಕು ಹುಟ್ಟಿತು. ಅದನ್ನು ಸರಿಪಡಿಸಲು ಹೈಕಮಾಂಡಿನ ಪರವಾಗಿ ಅಂದಿನ ಎ.ಐ.ಸಿ.ಸಿ. ಕಾರ್ಯದರ್ಶಿಗಳಾದ ಶ್ರೀಮನ್ ನಾರಾಯಣರು ದೆಹಲಿಯಿಂದ ಬೆಂಗಳೂರಿಗೆ ಬಂದರು. ಅವರು ಕಾಂಗ್ರೆಸ ಪಕ್ಷದ ವಿಧಾನ ಸಭೆಯ ಸದಸ್ಯರನ್ನು ಬಿಡಿ ಬಿಡಿಯಾಗಿ ಕರೆಯಿಸಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿದಾಗ ಶ್ರೀ ನಿಜಲಿಂಗಪ್ಪನವರು ಬಹುಮತವನ್ನು ಕಳೆದುಕೊಂಡಿದ್ದಾರೆಂದು ತಿಳಿಯಿತು. ಅವರ ನಿರ್ಣಯದಂತೆ ಶ್ರೀ ನಿಜಲಿಂಗಪ್ಪನವರು ಮುಖ್ಯಮಂತ್ರಿ ಪದಕ್ಕೆ ರಾಜಿನಾಮೆ ಸಲ್ಲಿಸಿದರು. ಮಾರನೇಯ ದಿನ ನಡೆದ ಪಕ್ಷದ ಸದಸ್ಯರ ಚುನಾವಣೆಯಲ್ಲಿ ಶ್ರೀ ಬಿ. ಡಿ. ಜತ್ತಿಯವರಿಗೆ ಬಹುಮತ ದೊರೆತು ಕಾಂಗ್ರೆಸ ಪಕ್ಷದ ನಾಯಕರೆಂದು ಚುನಾಯಿತರಾದರು. ದಿನಾಂಕ 16-5-1958 ರಂದು ಹೊಸ ಮೈಸೂರು ರಾಜ್ಯದ ಎರಡನೆ ಮುಖ್ಯಮಂತ್ರಿಯಾಗಿ ಪ್ರಮಾಣ ವಚನವನ್ನು ಸ್ವೀಕರಿಸಿದರು.

ಅನಂತರ ದೆಹಲಿಗೆ ಹೋಗಿ ಅನುಮತಿ ಪಡೆದು 14 ಮಂತ್ರಿಗಳ ಚಿಕ್ಕ ಗಾತ್ರದ ಮಂತ್ರಿಮಂಡಳವನ್ನು ರಚಿಸಿದರು. ಶ್ರೀ ಬಿ. ಡಿ. ಜತ್ತಿಯವರು ಮುಖ್ಯಮಂತ್ರಿಗಳು, ಸರ್ವ ಶ್ರೀ ಟಿ. ಸುಬ್ರಮಣ್ಯಂ, ಕಡಿದಾಳ ಮಂಜಪ್ಪ, ಪಿ. ಮರಿಯಪ್ಪ, ಕೆ, ಎಫ್.

ಪಾಟೀಲ, ಡಾ।। ಹೆಗಡೆ, ಮಾಲಿಮರಿಯಪ್ಪ, ಅಣ್ಣಾರಾವ ಗಣಮುಖಿ ಮತ್ತು ರಾಚಯ್ಯನವರು ಮಂತ್ರಿಗಳು ಹಾಗೂ ಬಿ. ಬಸವಲಿಂಗಪ್ಪ, ಶಂಷುದ್ದೀನ, ಲಿಂಗಾರೆಡ್ಡಿ, ಶ್ರೀಮತಿ ಗ್ರೇಸ್ ಟಕ್ಕರ ಮತ್ತು ಶ್ರೀಮತಿ ಲೀಲಾವತಿ ಮಾಗಡಿ ಅವರುಗಳು ಉಪಮಂತ್ರಿಗಳಾಗಿದ್ದರು.

ಅವರು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ಚಿಕ್ಕ ದೊಡ್ಡ ಕೈಗಾರಿಕೆಗಳನ್ನು ಪ್ರಾರಂಭ ಮಾಡಲಾಯಿತು. ಅವುಗಳಲ್ಲಿ ಕೆಲವು ಶರಾವತಿ ವಿದ್ಯುತ್ ಯೋಜನೆ, ಭದ್ರಾವತಿ ಉಕ್ಕಿನ ಕಾರ್ಖಾನೆಯನ್ನು ಸ್ಪೇಶಲ ಸ್ಟೀಲ ಉತ್ಪಾದನೆಗೆ ಪರಿವರ್ತನೆ, ಮಂಡ್ಯ ಸಕ್ಕರೆ ಕಾರ್ಖಾನೆಯ ಬಗಾಸನ್ನು ಉಪಯೋಗಿಸಿ ಮೈಸೂರಿನಲ್ಲಿ ಕಾಗದ ಕಾರ್ಖಾನೆ, ಮೈಸೂರು ಎಸಿಟೆಟ ಕಾರ್ಖಾನೆ, ಬೆಂಗಳೂರಿನಲ್ಲಿ ಎಚ್.ಎಂ.ಟಿ ವಾಚ್ ಕಾರ್ಖಾನೆ ಇತ್ಯಾದಿಗಳು. ಇವುಗಳಲ್ಲದೆ ಎನ್.ಜಿ.ಇ.ಎಫ್. ಸಂಕೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಬಳ್ಳಾರಿಯಲ್ಲಿ ಮೆಡಿಕಲ ಕಾಲೇಜು ಬಾಗಲಕೋಟೆಯಲ್ಲಿ ಸಹಕಾರಿ ನೂಲಿನ ಗಿರಣಿಗಳನ್ನು ಪ್ರಾರಂಭಿಸಲಾಯಿತು.

1962 ರಲ್ಲಿ ಮಹಾಚುನಾವಣೆ ನಡೆಯಿತು. ಅದರಲ್ಲಿ ಶ್ರೀ ಬಿ.ಡಿ ಜತ್ತಿಯವರು ಮತ್ತೆ ಜಮಖಂಡಿ ಮತಕ್ಷೇತ್ರದಿಂದ ಮೈಸೂರು ರಾಜ್ಯ ವಿಧಾನ ಸಭೆಗೆ ಆರಿಸಿ ಬಂದರು. ಶ್ರೀ ಎಸ್. ನಿಜಲಿಂಗಪ್ಪನವರು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಿಂದ ಚುನಾವಣೆಗೆ ನಿಂತು ಸೋತರು, ಆದರೆ ಕಾಂಗ್ರೆಸ ಪಕ್ಷಕ್ಕೆ ಬಹುಮತ ದೊರಕಿತು. ಕಾಂಗ್ರೆಸ ಪಕ್ಷದ ಶಾಸಕರ ಸಭೆಯಲ್ಲಿ ಶ್ರೀ ಜತ್ತಿಯವರ ಸ್ನೇಹಿತರಾದ ಶ್ರೀ ಎಸ್.ಆರ್. ಕಂಠಿಯವರನ್ನು ನಾಯಕನ್ನಾಗಿ ಆಯ್ಕೆ ಮಾಡಲಾಯಿತು. ಶ್ರೀ ಜತ್ತಿಯವರು ಶಾಸಕರಾಗಿದ್ದುಕೊಂಡು ತಮ್ಮ ಮತಕ್ಷೇತ್ರದ ಜಮಖಂಡಿಯಲ್ಲಿ ಕಾಲೇಜನ್ನು ತೆರೆಯುವ ಬಗ್ಗೆ ಶ್ರಮಿಸಿದರು.

ಮುಂದಿನ ಮೂರು ತಿಂಗಳಲ್ಲಿ ಶ್ರೀ ನಿಜಲಿಂಗಪ್ಪನವರು ಬಾಗಲಕೋಟೆ ಮತಕ್ಷೇತ್ರದಿಂದ ಆರಿಸಿ ಬಂದು ಮುಖ್ಯ ಮಂತ್ರಿಗಳಾದರು. ಅವರ ಮಂತ್ರಿಮಂಡಳದಲ್ಲಿ ಶ್ರೀ ಜತ್ತಿಯವರು ಅರ್ಥ ಮಂತ್ರಿಗಳಾದರು. ದಿನಾಂಕ 2-6-1962 ರಂದು ಮೈಸೂರು ರಾಜ್ಯದ ಹಣಕಾಸು ಮಂತ್ರಿಗಳಾಗಿ ಪ್ರಮಾಣ ವಚನ ಸ್ವೀಕರಿಸಿದರು. ಅನಂತರ 1965 ರ ಬರಗಾಲದಲ್ಲಿ ರಾಜ್ಯದ ಆಹಾರ ಮಂತ್ರಿಗಳಾದರು. ಈ ಮಧ್ಯ ದೇಶ ವಿದೇಶಗಳಲ್ಲಿ ಬಸವ ತತ್ವ ಪ್ರಚಾರಕ್ಕಾಗಿ 'ಬಸವ ಸಮಿತಿ' ಯನ್ನು ಸ್ಥಾಪಿಸುವಲ್ಲಿ ಬಹು ಮುಖ್ಯ ಪಾತ್ರ ವಹಿಸಿದರು ಮತ್ತು ಬಸವ ಸಮಿತಿಯ ಅಧ್ಯಕ್ಷರಾದರು.

1967 ರ ಚುನಾವಣೆಯಲ್ಲಿ ಶ್ರೀ ಜತ್ತಿಯವರು ಜಮಖಂಡಿ ಮತದಾನ ಕ್ಷೇತ್ರದಿಂದ ಸ್ಪರ್ಧಿಸಿ ಆಯ್ಕೆಯಾದರು, ಮತ್ತೆ ರಚಿತವಾದ ಶ್ರೀ ನಿಜಲಿಂಗಪ್ಪನವರ ಮಂತ್ರಿಮಂಡಳದಲ್ಲಿ ಆಹಾರ ಮಂತ್ರಿಗಳಾದರು. 1968 ರ ಮಧ್ಯದಲ್ಲಿ ಶ್ರೀ ನಿಜಲಿಂಗಪ್ಪನವರು ಅಖಿಲ ಭಾರತ ಕಾಂಗ್ರೆಸ ಸಮಿತಿಯ ಅಧ್ಯಕ್ಷರಾದರು. ಅವರ ಸ್ಥಳದಲ್ಲಿ ಶ್ರೀ ವಿರೇಂದ್ರ ಪಾಟೀಲರು ರಾಜ್ಯದ ಮುಖ್ಯ ಮಂತ್ರಿಗಳಾದರು. ಅದೇ ವರುಷ ಜತ್ತಿ ಅವರು ಪಾಂಡೀಚೆರಿಯ ಲೆಫ್ಟಿನೆಂಟ ಗೌವರ್ನರ ಎಂದು ನಿಯುಕ್ತಿಯಾದರು, ಅದಾಗ ಪಾಂಡಿಚೇರಿಯಲ್ಲಿ ರಾಷ್ಟ್ರಾಧ್ಯಕ್ಷರ ಆಳಿಕೆ

ಜಾರಿಯಲ್ಲಿತ್ತು. ದಿನಾಂಕ 14-10-1968 ರಂದು ಶ್ರೀ ಜತ್ತಿಯವರು ಪಾಂಡಿಚೇರಿಯಲ್ಲಿ ರಾಜ್ಯಪಾಲ ಎಂದು ಪ್ರತಿಜ್ಞಾವಿಧಿಯನ್ನು ಸ್ವೀಕರಿಸಿದರು. ಮುಂದಿನ ಆರು ತಿಂಗಳುಗಳಲ್ಲಿ ವಿಧಾನ ಸಭೆಯ ಚುನಾವಣೆ ನಡೆಸುವ ಏರ್ಪಾಡು ಮಾಡಿದರು. ಪಾಂಡಿಚೇರಿಯಲ್ಲಿದ್ದಾಗ ಶ್ರೀ ಜತ್ತಿಯವರಿಗೆ ಮಹರ್ಷಿ ಅರವಿಂದರ ತತ್ವಜ್ಞಾನದತ್ತ ಒಲವು ಬೆಳೆಯಿತು. ಆಗಾಗ ಅರವಿಂದಾಶ್ರಮಕ್ಕೆ ಹೋಗಿ ಶ್ರೀ ಮಾತೆಯವರ ದರ್ಶನ ಪಡೆಯುತ್ತಿದ್ದರು.

ನಾಲ್ಕು ವರುಷ ಪಾಂಡಿಚೇರಿಯಲ್ಲಿ ರಾಜ್ಯಪಾಲರಾಗಿದ್ದು ಶ್ರೀ ಜತ್ತಿಯವರು ದಿನಾಂಕ 8-11-1972 ರಂದು ಓರಿಸ್ಸಾದ ರಾಜ್ಯಪಾಲರಾಗಿ ಅಧಿಕಾರ ಸ್ವೀಕರಿಸಿದರು. ಎರಡು ವರ್ಷಗಳ ಅನಂತರ 1974 ಆಗಸ್ಟ 31 ರಂದು ಭಾರತದ ಉಪರಾಷ್ಟ್ರಪತಿಯಾಗಿ ಪ್ರತಿಜ್ಞಾವಿಧಿಯನ್ನು ಸ್ವೀಕರಿಸಿದರು. ಭಾರತದ ಉಪರಾಷ್ಟ್ರಪತಿಗಳು ರಾಜ್ಯಸಭೆಯ ಅಧ್ಯಕ್ಷರು ಆಗಿದ್ದರಿಂದ ಶ್ರೀ ಜತ್ತಿಯವರು ರಾಜ್ಯ ಸಭೆಯ ಅಧ್ಯಕ್ಷರಾಗಿಯೂ ಕೆಲಸ ನಿರ್ವಹಿಸಿದರು. ಇದಲ್ಲದೆ ಭಾರತದ ಉಪರಾಷ್ಟ್ರಪತಿಗಳಿಗೆ ಇನ್ನು ಕೆಲವು ಕೆಲಸಗಳಿವೆ ಅವುಗಳಲ್ಲಿ,

1) ರಾಜಧಾನಿ ದೆಹಲಿಯಲ್ಲಿ ಎಲ್ಲ ವಿದೇಶ ಮಿತ್ರರಾಷ್ಟ್ರಗಳ ರಾಯಭಾರಿ ಕಛೇರಿಗಳಿರುತ್ತವೆ. ಪ್ರತಿಯೊಂದು ರಾಷ್ಟ್ರದ ರಾಯಭಾರಿಗಳು ತಂತಮ್ಮ ದೇಶಗಳ ರಾಷ್ಟ್ರೀಯ ಹಬ್ಬಗಳನ್ನು ಆಚರಿಸುತ್ತಾರೆ. ಈ ಎಲ್ಲ ಹಬ್ಬಗಳಿಗೆ ಭಾರತ ದೇಶದ ಪರವಾಗಿ ಉಪರಾಷ್ಟ್ರಪತಿಗಳು ಹೋಗಬೇಕು.

2) ರಾಷ್ಟ್ರಪತಿಗಳ ಗೈರುಹಾಜರಿಯಲ್ಲಿ ಹಂಗಾಮಿ ರಾಷ್ಟ್ರಪತಿಗಳಾಗಿ ಸಂವಿಧಾನದತ್ತ ಕೆಲಸಗಳನ್ನು ಮಾಡುವುದು.

3) ಅವಶ್ಯಕತೆಗೆ ಅನುಸರಿಸಿ ವಿದೇಶಗಳಿಗೆ ಹೋಗಿ ಸ್ನೇಹ - ಸೌಹಾರ್ದಗಳನ್ನು ಬೆಳೆಸುವುದು.

4) ದಿಲ್ಲಿ - ಪಂಜಾಬ ಮತ್ತು ಹೈದರಾಬಾದ ವಿಶ್ವವಿದ್ಯಾನಿಲಯಗಳ ಕುಲಪತಿಗಳಾಗಿ ಆಡಳಿತ ನೋಡುವುದು.

ದಿನಾಂಕ 11-2-1977 ರಂದು ಅಂದಿನ ಭಾರತದ ರಾಷ್ಟ್ರಪತಿಗಳಾಗಿದ್ದ ಶ್ರೀ ಫಕ್ರುದ್ದಿನ ಅಲಿ ಅಹಮ್ಮದ ಅವರು ಆಕಸ್ಮಿಕವಾಗಿ ಹೃದಯಾಘಾತದಿಂದ ನಿಧನರಾದರು. ಅಂದೇ ಶ್ರೀ ಬಿ.ಡಿ ಜತ್ತಿಯವರು ಭಾರತದ ಹಂಗಾಮಿ ರಾಷ್ಟ್ರಪತಿಗಳಾಗಿ ಅಧಿಕಾರ ವಹಿಸಿಕೊಂಡರು. ಅದಾಗ ರಾಷ್ಟ್ರದಲ್ಲಿ ತುರ್ತು ಪರಿಸ್ಥಿತಿ ಜಾರಿಯಲ್ಲಿತ್ತು. ಅನಂತರ ನಡೆದ ಚುನಾವಣೆಯಲ್ಲಿ ಆಯ್ಕೆಯಾದ ಪ್ರಥಮ ಕಾಂಗ್ರೆಸ್ಸೇತರ ಸರಕಾರದ ಪ್ರಧಾನ ಮಂತ್ರಿಯಾಗಿ ಶ್ರೀ ಮುರಾರ್ಜಿ ದೇಸಾಯಿ ಅವರು ನಿಯುಕ್ತರಾದರು. ದಿನಾಂಕ 24-3-1977 ರಂದು ಅವರಿಗೆ ಪ್ರಧಾನ ಮಂತ್ರಿ ಪದ ಪ್ರಮಾಣ ವಚನವನ್ನು ಶ್ರೀ ಜತ್ತಿಯವರು ಬೋಧಿಸಿದರು. ಅನಂತರದ ರಾಷ್ಟ್ರಪತಿಗಳ ಚುನಾವಣೆಯಲ್ಲಿ ಶ್ರೀ ನಿಲಂ ಸಂಜೀವರೆಡ್ಡಿಯವರು

ರಾಷ್ಟ್ರಪತಿಗಳೆಂದು ಆಯ್ಕೆಯಾದರು. ಅವರಿಗೆ ಅಧಿಕಾರ ವಹಿಸಿಕೊಟ್ಟು ಶ್ರೀ ಜತ್ತಿಯವರು ಮತ್ತೆ ಉಪರಾಷ್ಟ್ರಪತಿಗಳಾಗಿ ಕೆಲಸವನ್ನು ಮುಂದುವರೆಸಿದರು.

ದಿನಾಂಕ 31-8-1979 ರಂದು ಶ್ರೀ ಬಿ. ಡಿ. ಜತ್ತಿಯವರು ಉಪರಾಷ್ಟ್ರಪತಿ ಯಿಂದ ನಿವೃತ್ತರಾಗಿ, ಅವರು ಬೆಂಗಳೂರಿಗೆ ಬಂದು ನೆಲೆಸಿದರು. ಆನಂತರದ ವಿಶ್ರಾಂತಿ ಜೀವನದಲ್ಲಿ ಅವರು ಸಾಹಿತ್ಯಿಕ, ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ಆಧ್ಯಾತ್ಮಿಕ, ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಿಕೊಂಡು ಸಂತೃಪ್ತ ಜೀವನವನ್ನು ನಡೆಸುತ್ತಿದ್ದರು. ದಿನಾಂಕ 7-6-2002ರಂದು ವಿಧಿವಶರಾದರು.

ಈ ಸಂಬಂಧದಲ್ಲಿ ದಿ. 8-7-2002ರಂದು ರಾಜ್ಯದ ಉಭಯ ಸದನಗಳಲ್ಲಿ ಅನೇಕ ಗಣ್ಯರು ಶ್ರದ್ಧಾಂಜಲಿಯನ್ನು ಅರ್ಪಿಸಿದರು.

## ಭಾಗ -2

## ಮುಂಬಯಿ ರಾಜ್ಯದಲ್ಲಿ ಶಾಸಕರಾಗಿ ಮಂತ್ರಿಗಳಾಗಿ ಕಾರ್ಯ ನಿರ್ವಹಣೆ

ಶ್ರೀ ಬಿ.ಡಿ. ಜತ್ತಿಯವರು ಕರ್ನಾಟಕ ರಾಜ್ಯ ನಿರ್ಮಾಣ ಆಗುವ ಮೊದಲೆ ಮುಂಬಯಿ ರಾಜ್ಯದಲ್ಲಿ ಶಾಸಕರಾಗಿದ್ದರು. ಮಂತ್ರಿಗಳಾಗಿದ್ದರು. ಕರ್ನಾಟಕ ರಾಜ್ಯ ನಿರ್ಮಾಣದೊಂದಿಗೆಯೇ ಅಂದಿನ ವಿಶಾಲ ಮೈಸೂರು - ರಾಜ್ಯದಲ್ಲಿ ಪ್ರಾರಂಭದಲ್ಲಿ ರಾಜ್ಯ ಭೂಸುಧಾರಣಾ ಆಯೋಗದ ಅಧ್ಯಕ್ಷತೆಯನ್ನು ವಹಿಸಿದ್ದರು. ಅನಂತರ ಎರಡು ವರ್ಷಗಳಲ್ಲಿ 1958 ರಲ್ಲಿ ರಾಜ್ಯದ ಮುಖ್ಯಮಂತ್ರಿಗಳಾದರು. ವಿಭಿನ್ನ ಸಂಸ್ಕೃತಿಯ ಅರಸೊತ್ತಿಗೆಯ ಅಧೀನದಲ್ಲಿದ್ದ ಮೈಸೂರು, ಹೈದರಾಬಾದ ಮತ್ತು ಚಿಕ್ಕಪುಟ್ಟ ಸಂಸ್ಥಾನಗಳ ಪ್ರಜೆಗಳು ಮುಂಬಯಿ ಮದ್ರಾಸಿನ ಕರ್ನಾಟಕಗಳಲ್ಲಿ ಬ್ರಿಟಿಷ್ ಆಡಳಿತದಲ್ಲಿದ್ದ ಕನ್ನಡ ಪ್ರಜೆಗಳೆಲ್ಲಾ ಒಂದೆಡೆ ವಿಶಾಲ ಮೈಸೂರು ರಾಜ್ಯದಲ್ಲಿ ಸೇರಿದಾಗ ಹಲವಾರು ಸಮಸ್ಯೆಗಳಿದ್ದವು. ಭಾಷೆಯಿಂದ ಮೊದಲ್ಗೊಂಡು ಶಿಕ್ಷಣ, ಮದುವೆ, ಇಲ್ಲಿಯ ನೆಲ, ಜಲ ಎಲ್ಲವುಗಳ ಬಗ್ಗೆ ಆಯಾ ಭಾಗಗಳ ಪ್ರಜೆಗಳ ಹಿತದೃಷ್ಟಿಯನ್ನು ಕಾಯ್ದುಕೊಂಡು ರಾಜ್ಯವನ್ನು ಮುನ್ನಡೆಸಬೇಕಾಗಿತ್ತು. ಈ ಕುರಿತ ಮುಂಬಯಿ ಮತ್ತು ಮೈಸೂರು ರಾಜ್ಯ ವಿಧಾನ ಸಭೆಗಳಲ್ಲಿ ಅವರು ಮಂಡಿಸಿದ ಕೆಲವು ವಿಚಾರಗಳು ಇಂತಿವೆ.

## ಶಿಕ್ಷಣ

ಮುಂಬಯಿ ರಾಜ್ಯ ವಿಧಾನ ಸಭೆಯಲ್ಲಿ ದಿನಾಂಕ 26-9-1949 ರಂದು ಪ್ರಾಥಮಿಕ ಶಿಕ್ಷಣದ ಕುರಿತು ಶಾಸಕರಾಗಿ ಹೇಳಿದ್ದು.

ಅಧ್ಯಕ್ಷ ಮಹಾಶಯರೇ, ಮಾನ್ಯ ಮುಖ್ಯಮಂತ್ರಿಯವರು ಈಗ ತಂದಿರುವ 1947ನೇಯ ಇಸವಿಯ ಮುಂಬಯಿ ಪ್ರಾಥಮಿಕ ಶಿಕ್ಷಣದ ಕಾಯ್ದೆಯ ತಿದ್ದುಪಡಿಯ ಮಸೂದೆಗೆ ಬೆಂಬಲಕೊಟ್ಟು ಮಾತನಾಡಲು ನಾನು ನಿಂತಿರುತ್ತೇನೆ. ಈ ಮಸೂದೆಯ ಬಗ್ಗೆ ಅವಶ್ಯವಿರುವ ಒಂದೆರಡು ಸೂಚನೆಗಳನ್ನು ಮಾಡಲು ನಾನು ಬಯಸುತ್ತೇನೆ. ನಮ್ಮ ಭಾರತವು ಸ್ವಾತಂತ್ರ್ಯವನ್ನು ಪಡೆದ ನಂತರ ಇಲ್ಲಿಯ ಅನೇಕ ಸಂಸ್ಥಾನಗಳು ಹಿಂದುಸ್ಥಾನದ ಒಕ್ಕೂಟದಲ್ಲಿ ವಿಲೀನವಾಗಿವೆ. ಹಲವು ಸಣ್ಣ - ಸಣ್ಣ ಸಂಸ್ಥಾನಗಳು ಭಾರತದ ಒಕ್ಕೂಟದಲ್ಲಿಯ ಜಿಲ್ಲೆಗಳಲ್ಲಿ ಸೇರ್ಪಡೆ ಹೊಂದಿವೆ. ಇಂಥ ವಿಲೀನವಾದ ಸಂಸ್ಥಾನಗಳ ಆಡಳಿತೆಯನ್ನು ಭಾರತ ಸರಕಾರ ಮತ್ತು ಪ್ರಾಂತಿಕ ಸರಕಾರವು ವಹಿಸಿಕೊಂಡಿದೆ. ಮುಂಬಯಿ ಪ್ರಾಂತದಲ್ಲಿ ವಿಲೀನವಾದ ಸಂಸ್ಥಾನಗಳಿಗೆ ಸನ್ 1942ನೇ ಇಸವಿಯ ಮುಂಬಯಿಯ ಪ್ರಾಥಮಿಕ ಶಿಕ್ಷಣದ ಕಾಯಿದೆಯು ಅನ್ವಯ ಆಗಿದೆ. ಈ ವಿಲೀನವಾದ ಪ್ರದೇಶದಲ್ಲಿ, ಪ್ರಾಥಮಿಕ ಶಿಕ್ಷಣದ ಕಾಯಿದೆಯ ತಿದ್ದುಪಡಿಯನ್ನು ಜಾರಿಯಲ್ಲಿ ತರುವ ಸಂಬಂಧದ ವಿಷಯದಲ್ಲಿ ಕೆಲವು ಸೂಚನೆ ಮಾಡುವುದು ಅವಶ್ಯವೆನಿಸುತ್ತದೆ. ಕೆಲವು ಸಂಸ್ಥಾನಗಳ ಉತ್ಪನ್ನವು ಕಡಿಮೆ ಇದ್ದುದರಿಂದ ಇಲ್ಲಿಯವರೆಗೆ ಪ್ರಾಥಮಿಕ ಶಿಕ್ಷಣದ ಬಗ್ಗೆ ಹೆಚ್ಚು ಹಣವನ್ನು ಖರ್ಚು ಮಾಡಲು ಅವಕಾಶವಿದ್ದಿರಲಿಲ್ಲ. ಆದುದರಿಂದ ಈ ಪ್ರದೇಶದಲ್ಲಿ ಪ್ರಾಥಮಿಕ ಶಿಕ್ಷಣದ ಬಗ್ಗೆ ಸಾಕಷ್ಟು ಪ್ರಗತಿಯು ಇಲ್ಲಿಯು ವರೆಗೆ ಆಗಿಲ್ಲ. ಈಗ ಸಂಸ್ಥಾಗಳೆಂಬ ಭೇದ ಭಾವವು ಉಳಿದಿಲ್ಲವಾದ್ದರಿಂದ ಮುಂಬಯಿ ಪ್ರಾಂತದಲ್ಲಿರುವ ಎಲ್ಲಾ ಸವಲತ್ತುಗಳು ಈ ವಿಲೀನವಾದ ಪ್ರದೇಶಕ್ಕೆ ದೊರೆಯುವಂತೆ ಮಾಡುವುದು ಅವಶ್ಯವಿದೆ. ಸಾಕಷ್ಟು ಶಾಲೆಗಳು, ಶಾಲೆಯ ಇಮಾರತಿಗಳು ಮತ್ತು ಶಿಕ್ಷಕರು ಇರುವಂತೆ ಅನುಕೂಲತೆಯನ್ನು ಒದಗಿಸಿ ಕೊಡಬೇಕೆಂದು ನನ್ನ ಸೂಚನೆಯಾಗಿದೆ.

ಮುಂಬಯಿ ಪ್ರಾಥಮಿಕ ಶಿಕ್ಷಣದ ಕಾಯಿದೆಯ 18 ನೇಯ ಕಲಮಿನ ನಂತರ 18 ಅ (1) ಎಂಬ ಒಂದು ಹೊಸ ಕಲಂನ್ನು ಸೇರಿಸುವ ಬಗ್ಗೆ ಇರುವ ತಿದ್ದುಪಡಿಯ ಕಡೆಯ ವ್ಯಾಕದಲ್ಲಿ ಈ ಪ್ರಕಾರ ಇದೆ.

" If such area has formed part of a district for which a district school board has been constituted, vest in be held by or be under the control of the district school board and in other case, the provincial government."

ಈ ಸಂದರ್ಭದಲ್ಲಿ ನನ್ನದು ಒಂದು ಮಹತ್ವದ ಸೂಚನೆಯು ಇದೆ. ವಿಲೀನವಾದ ಸಂಸ್ಥಾನದ ಪ್ರದೇಶಕ್ಕೆ District School Board ದಲ್ಲಿ ಪ್ರಾತಿನಿಧ್ಯವು ಇರುವುದಿಲ್ಲ. ವಿಲೀನವಾದ ಸಂಸ್ಥಾನಗಳಿಗೆ ಪ್ರಾತಿನಿಧ್ಯವಿರುವುದು ಅವಶ್ಯವಿದೆ. ಉಳಿದ ಒಕ್ಕೂಟದ ಪ್ರದೇಶದಂತೆ, ಈ ವಿಲೀನ ಸಂಸ್ಥಾನಗಳಿಗೂ ಪ್ರಾತಿನಿಧ್ಯವಿರುವ ಏರ್ಪಾಡನ್ನು ಮಾಡಬೇಕು. ಒಕ್ಕೂಟದ ಪ್ರದೇಶ ಮತ್ತು ವಿಲೀನವಾದ ಸಂಸ್ಥಾನದ ಪ್ರದೇಶ ಇವುಗಳಲ್ಲಿ ಯಾವ ತರದ ಭೇದ ಭಾವವು ಇರಕೂಡದು.

ಇಲ್ಲಿಯವರೆಗೆ ಸಂಸ್ಥಾನಗಳಲ್ಲಿ ಪ್ರಾಥಮಿಕ ಶಿಕ್ಷಕರಿಗೆ ಕಡಿಮೆ ಸಂಬಳ ದೊರೆಯುತ್ತಿತ್ತು. ಸಂಸ್ಥಾನ ಪ್ರದೇಶದ ಶಿಕ್ಷಕರು ಮತ್ತು ಒಕ್ಕೂಟ ಪ್ರದೇಶದ ಶಿಕ್ಷಕರು ಒಂದೇ ತರದ ಶಿಕ್ಷಣವನ್ನು ಉಳ್ಳವರಿರುವಾಗ ಇಬ್ಬರಲ್ಲಿಯ ಪಗಾರ (ಸಂಬಳ) ಅಥವಾ ಸ್ಥಾನ (Status) ದಲ್ಲಿ ಯಾವುದೇ ಬಗೆಯ (ಡಿಫರನ್ಸ) ಅಂತರ ಇರಬಾರದು. ಈ ನನ್ನ ಸೂಚನೆಗಳನ್ನು ಮಾನ್ಯ ಮಂತ್ರಿಯವರು ದಯವಿಟ್ಟು ವಿಚಾರಣೆಯಲ್ಲಿ ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ. ಈ ಮಸೂದೆಗೆ ನನ್ನ ಬೆಂಬಲವಿದೆಯೆಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

ಆರೋಗ್ಯ :

ಮುಂಬಯಿ ರಾಜ್ಯದ ಉಪ ಆರೋಗ್ಯ ಮಂತ್ರಿಗಳಾಗಿದ್ದಾಗ ದಿನಾಂಕ 10-3-1955 ರಂದು ರಾಜ್ಯ ಆಯುವ್ಯಯದ ಸಾಮಾನ್ಯ ಚರ್ಚೆಯಲ್ಲಿ ಭಾಗವಹಿಸುತ್ತ ತಮ್ಮ ಇಲಾಖೆಯ ಕಾರ್ಯಕುರಿತು ಹೇಳಿದರು

ಮಾನ್ಯ ಅಧ್ಯಕ್ಷರೆ, ಸನ್ಮಾನ್ಯ ಸದಸ್ಯರು ಎತ್ತಿದ ಕೆಲವು ವಿಷಯಗಳ ಮೇಲೆ ನಾನೀಗ ಉತ್ತರವನ್ನು ಕೊಡಬಯಸುವೆ.

ಮೊದಲನೇಯದಾಗಿ ಬೆಳಗಾವಿಯ ಸಾರ್ವಜನಿಕ ಆಸ್ಪತ್ರೆಯಲ್ಲಿ ಹಾಸಿಗೆಗಳನ್ನು ಅಧಿಕಗೊಳಿಸುವ ಬಗ್ಗೆ ಹೇಳುವೆ. ಬೆಳಗಾವಿಯ ಆಸ್ಪತ್ರೆಯಲ್ಲಿ 155 ಹಾಸಿಗೆಗಳು ಮಂಜೂರಾದದ್ದು ನಿಜ ಮತ್ತು ಅಲ್ಲಿ ಪ್ರತಿದಿನ ಸರಾಸರಿ 218.9 ಒಳರೋಗಿಗಳು ಬರುವುದೂ ನಿಜ, ಆದರೆ ಇದೊಂದೇ ಆಸ್ಪತ್ರೆಯಲ್ಲಿ ಹಾಸಿಗೆಗಳನ್ನು ಅಧಿಕಗೊಳಿಸುವ ಅವಶ್ಯಕತೆ ಇಲ್ಲ. ಬೇರೆ ಆಸ್ಪತ್ರೆಗಳಲ್ಲೂ ಇದೇ ಪರಿಸ್ಥಿತಿ ಇದೆ. ಆದ್ದರಿಂದ ಸರಕಾರವು ಬೆಳಗಾವಿಯಲ್ಲಿ ಒಂದೇ ಅಲ್ಲ ಬೇರೆ ಊರುಗಳ ಆಸ್ಪತ್ರೆಗಳಲ್ಲೂ ಅವಶ್ಯಕತೆ ಇರುವಲ್ಲೆಲ್ಲ ಹಾಸಿಗೆಗಳನ್ನು ಅಧಿಕಗೊಳಿಸುವುದನ್ನು ವಿಚಾರಿಸುತ್ತಿದೆ.

ಎರಡನೇಯದಾಗಿ ಸನ್ಮಾನ್ಯ ಸದಸ್ಯರೊಬ್ಬಿಬ್ಬರು ಹುಬ್ಬಳ್ಳಿಯ ಮೆಡಿಕಲ ಕಾಲೇಜ ಬಗ್ಗೆ ವಿಷಯವನ್ನು ಎತ್ತಿದ್ದಾರೆ. ಮುಂಬಯಿ ಸರಕಾರವು ಅಹಮದಾಬಾದ ಮತ್ತು ಪುಣೆಗಳಲ್ಲಿ ಆಸ್ಪತ್ರೆ ಮತ್ತು ಮೆಡಿಕಲ ಕಾಲೇಜುಗಳನ್ನು ಕಟ್ಟುವ ಜವಾಬ್ದಾರಿಯನ್ನು ಹೊತ್ತಿದೆ. ಬರೋಡಾ ಸಂಸ್ಥಾನವು ವಿಲೀನವಾದ ಮೇಲೆ ಅಲ್ಲಿಯ ಮೆಡಿಕಲ ಕಾಲೇಜು ಮತ್ತು ಆಸ್ಪತ್ರೆಯನ್ನು ಸುಧಾರಿಸುವ ಜವಾಬ್ದಾರಿಯು ಸರಕಾರದ ಮೇಲಿದೆ. ಇವುಗಳಿಗೆಲ್ಲ ಸರಕಾರವು ಭಾರೀ ಮೊತ್ತದ ಹಣವನ್ನು ವೆಚ್ಚ ಮಾಡಬೇಕಾಗುತ್ತದೆ. ಇವುಗಳಿಗೆ ಈಗಾಗಲೇ ಸುಮಾರು ಮೂರು ಕೋಟಿ ರೂಪಾಯಿಗಳನ್ನು ಖರ್ಚುಮಾಡಿದೆ. ಆದ್ದರಿಂದ ಹುಬ್ಬಳ್ಳಿಯಲ್ಲಿ ಮೆಡಿಕಲ್ ಕಾಲೇಜ ಕಟ್ಟಡವನ್ನಾಗಲೀ ಆಸ್ಪತ್ರೆಯ ಕಟ್ಟಡವನ್ನಾಗಲೀ ಕಟ್ಟುವುದು ಸರಕಾರದಿಂದ ಸಧ್ಯ ಸಾಧ್ಯವಿಲ್ಲ. ಆದ್ದರಿಂದ ಆ ಕೆಲಸವನ್ನು ಮುಂದೂಡಬೇಕಾಗಿದೆ. ಎರಡನೇಯದಾಗಿ ಅಹಮದಾಬಾದ ಮತ್ತು ಪುಣೆಯ ಮೆಡಿಕಲ್ ಕಾಲೇಜುಗಳನ್ನು ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸಲಾಗಿತ್ತು. ಹುಬ್ಬಳ್ಳಿಯ ಮೆಡಿಕಲ್ ಕಾಲೇಜನ್ನು ಆಸ್ಪತ್ರೆಯನ್ನು ಯೋಜನೆಯಲ್ಲಿ ಸೇರಿಸಲಿಲ್ಲ. ಆದ್ದರಿಂದ ಅವುಗಳ ಕಟ್ಟೋಣವನ್ನು ಸರಕಾರವು ಕೈಗೆತ್ತಿಕೊಂಡಿಲ್ಲ.

ಆದರೂ ಹುಬ್ಬಳ್ಳಿಯ ಮೆಡಿಕಲ್ ಕಾಲೇಜಿನ ಬಗ್ಗೆ ಪ್ರಗತಿಯಲ್ಲಿರುವ ವಿಷಯವನ್ನು ಈ ಸಭೆಗೆ ನಾನು ಹೇಳಬಹುದಾದರೆ, ಮುಂಬಯಿ ಸರಕಾರವು 58 ಎಕರೆ 2 ಗುಂಟೆ ಸ್ಥಳವನ್ನು ಹುಬ್ಬಳ್ಳಿಯಲ್ಲಿ ಖರೀದಿಸಿದೆ ಮತ್ತು ಅದರ ಸಂಭಾವ್ಯ ಬೆಲೆ 6,00,000-00 ಗಳದ್ದಾಗಿದೆ. ಇದನ್ನು ಸರಕಾರವು ಪಾವತಿಮಾಡಿದೆ. ಈ ಮೆಡಿಕಲ್ ಕಾಲೇಜಿನ ನೀಲ ನಕ್ಷೆ ಮತ್ತು ಅಂದಾಜು ಪತ್ರಿಕೆಗಳು ಸಿದ್ಧಗೊಳ್ಳುತ್ತಿವೆ. ತುಸುವೆ ಸಮಯದಲ್ಲಿ ಪೂರ್ಣಗೊಳ್ಳುತ್ತವೆ.

ಎರಡನೇಯ ಪಂಚವಾರ್ಷಿಕ ಯೋಜನೆಯಲ್ಲಿ ಈ ಮೆಡಿಕಲ್ ಕಾಲೇಜನ್ನು ಸೇರಿಸಲು ಸೂಚಿಸಿದೆ. ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಸೇರ್ಪಡೆಯಾಗದ್ದರಿಂದ ಆದಕ್ಕಾಗಿ ಹಣವನ್ನು ಖರ್ಚುಮಾಡುವುದು ಸಾಧ್ಯವಾಗುವುದಿಲ್ಲ.

ಮೂರನೇಯದಾಗಿ ಸನ್ಮಾನ್ಯ ಸದಸ್ಯರಾದ ಶ್ರೀ ಶಂಕರಗೌಡರು ತಮ್ಮ ಭಾಷಣದಲ್ಲಿ ಇದೀಗ ಹೇಳಿದಂತೆ ಕರಿಪತ್ ಮತ್ತು ಬಾಲಪ್ರದೇಶಗಳಲ್ಲಿಯಂತೆ ಬೀಳಗಿ ಪೇಠಾದಲ್ಲೂ ಆಗಬೇಕೆಂದರು. ನನಗೆ ಅನಿಸಿದಂತೆ ಬೀಳಗಿ ಪೇಠಾದಲ್ಲಿ ಸುಮಾರು 10 ಹಳ್ಳಿಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಬಹುದು. ಸರಕಾರವು ಆಗಲೇ ಪರಿವೀಕ್ಷಣೆಗಾಗಿ ಕಳುಹಿಸಿದೆ ಮತ್ತು ಇದೀಗ ಪೂರ್ಣಗೊಂಡಿದೆ. ಅದರ ವರದಿ ಬಂದಂತೆಯೇ ಈ ಪ್ರಶ್ನೆಯತ್ತ ಗಮನ ಹರಿಸಿ ಈ ಹತ್ತು ಗ್ರಾಮಗಳಿಗೆ ಕೊಳವೆಗಳ ಮೂಲಕ ನೀರನ್ನು ಪೂರೈಸುವ ಅವಶ್ಯಕ ವ್ಯವಸ್ಥೆಯನ್ನು ಮಾಡಲಾಗುವುದು.

**ಮದುವೆ :**

ದಿನಾಂಕ 22-12-1953 ರಂದು ಮುಂಬಯಿ ವಿಧಾನ ಸಭೆಯಲ್ಲಿ

'ಮುಂಬಯಿ ಪ್ರಾಂತ್ಯದಲ್ಲಿ ಮದುವೆಯ ನೋಂದಣಿ ಮಸೂದೆ 1953' ಮಂಡಿಸುತ್ತ ಮಾತನಾಡಿದರು

ಮಾನ್ಯರೆ, ಕೇವಲ ಇಬ್ಬರು ಸದಸ್ಯರು ಈ ಮಸೂದೆಯ ಕುರಿತಾದ ಚರ್ಚೆಯಲ್ಲಿ ಪಾಲ್ಗೊಂಡರು. ಸನ್ಮಾನ್ಯ ಸದಸ್ಯರಾದ ಶ್ರೀ ಭರೂಚಾ ಅವರು ಮಸೂದೆಯನ್ನು ಬೆಂಬಲಿಸಿದರಾದರೆ ಶ್ರೀ ವಿಠಲರಾವ ಎನ್. ಪಾಟೀಲರು ಕೆಲವು ಸೂಚನೆಗಳನ್ನು ನೀಡಿದರು. ಈ ಮಸೂದೆಯು ತೊಡಕುಗಳನ್ನು ನಿರ್ಮಿಸುವುದೆಂದು ಅವರು ವಾದಿಸಿದರು. ಪ್ರತಿಯಾಗಿ ನನ್ನ ಅಭಿಪ್ರಾಯವೇ ಬೇರೆಯಾಗಿದೆ. ಈಗ ಹಳ್ಳಿಗಳಲ್ಲಿ ಮದುವೆಗಳಾಗುತ್ತವೆ, ಆದರೆ ಅವುಗಳ ನೋಂದಣಿ ಆಗಿರುವುದಿಲ್ಲ. ಆಗ ತಕರಾರುಗಳು ಏನಾದರೂ ಉದ್ಭವಿಸಿದರೆ ಮುಗ್ಧ ಹಳ್ಳಿಗರಿಗೆ ಮದುವೆಯಾದದ್ದನ್ನು ಖಚಿತಪಡಿಸುವುದೇ ಸಾಧ್ಯವಾಗುವುದಿಲ್ಲ. ಈ ತೊಂದರೆಯನ್ನು ನಿವಾರಿಸಲು ಈ ಮಸೂದೆ ಅಗತ್ಯವಾಗಿದೆ. ಪಟ್ಟಣಗಳಲ್ಲಿ ನಾವು ಆಮಂತ್ರಣ ಪತ್ರಿಕೆಗಳನ್ನು ಮುದ್ರಿಸುತ್ತೇವೆ ಮತ್ತು ಮದುವೆಯನ್ನು ಖಚಿತಪಡಿಸುತ್ತೇವೆ, ಆದರೆ ಹಳ್ಳಿಗಳಲ್ಲಿ ಇಂಥ ಪತ್ರಿಕೆಗಳನ್ನು ಮುದ್ರಿಸುವುದಿಲ್ಲ ಆದ್ದರಿಂದ ಇಂಥ ನೋಂದಣಿಗಳು ಅವರಿಗೆ ಉಪಯುಕ್ತವಾಗುತ್ತವೆ.

ಸರಕಾರಕ್ಕೆ ಇಂಥ ಮಸೂದೆಯನ್ನು ಮಂಡಿಸುವ ಅಧಿಕಾರವೇ ಇಲ್ಲ ಎಂಬ ಇನ್ನೊಂದು ವಾದವನ್ನು ಮಂಡಿಸಿದ್ದಾರೆ. ಆದರೆ, ಮಾನ್ಯರೆ ಈ ವಿಷಯವು ಅಗತ್ಯ ಪಟ್ಟಿಯಲ್ಲೇ ಇದೆ. ಕೇವಲ, ಭಾರತ ಸರಕಾರದ ಆಡಳಿತಾತ್ಮಕ ಒಪ್ಪಿಗೆಯನ್ನು ಮಾತ್ರ ಪಡೆಯಬೇಕಾಗಿದೆ. ಅದನ್ನು ಕೂಡ ಮಾಡಲಾಗಿದೆ ಮತ್ತು ಆದ್ದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ.

ಮಸೂದೆಯ ಐದನೇಯ ವಾಕ್ಯಾಂಗದ ಕುರಿತು ಮಾತನಾಡುವಾಗ ಕೆಲ - ಮಾನ್ಯ ಸದಸ್ಯರು ಅದನ್ನು ಬೆಂಬಲಿಸಿದ್ದರೆ ಇನ್ನು ಕೆಲವರು ವಿರೋಧಿಸಿದರು. ವಿರೋಧ ವ್ಯಕ್ತ ಪಡಿಸಿದ ಮಾನ್ಯ ಸದಸ್ಯರು ಎತ್ತಿದ ಕೆಲವ ಅಂಶಗಳಿಗೆ ಸ್ಪಷ್ಟೀಕರಣದ ಅಗತ್ಯವಿದೆ. ನಾನು ಅವುಗಳ ಬಗ್ಗೆ ಮಾತನಾಡುವೆ.

ಇಡೀ ಮಸೂದೆಯನ್ನು ಒಮ್ಮೆಲೆ ಜಾರಿಯಲ್ಲಿ ತರಬಾರದೆಂದು ಒಂದು ಅಂಶವನ್ನು ಎತ್ತಿದ್ದಾರೆ. ಮಸೂದೆಯಲ್ಲಿಯೇ ಅದನ್ನು ಸ್ಪಷ್ಟವಾಗಿ ಹೇಳಿದೆ. ವಾಕ್ಯಾಂಗದ ಮೊದಲ ಭಾಗದ ಹೊರತಾಗಿ ಉಳಿದೆಲ್ಲವುಗಳನ್ನು ಬೇರೆ - ಬೇರೆ ಪ್ರದೇಶಗಳಲ್ಲಿ ಅಗತ್ಯಕ್ಕೆ ತಕ್ಕಂತೆ ಜಾರಿಯನ್ನು ಮಾಡಲಾಗುವುದು ಎಂದು ಹೇಳಿದೆ. ಆದ್ದರಿಂದ ಈ ಕುರಿತು ಎತ್ತಿದ ಆಕ್ಷೇಪಣೆಗೆ ಆಸ್ಪದವೇ ಇಲ್ಲ.

ಇನ್ನು ಎರಡನೇಯ ಆಕ್ಷೇಪಣೆ - ಒಂದು ರೂಪಾಯಿಯ ಶುಲ್ಕದ ಕುರಿತಾಗಿ ಕೆಲವು ಮಾನ್ಯ ಸದಸ್ಯರು ಎತ್ತಿದ್ದಾರೆ. ಇದು ಶುಲ್ಕವೇ ಹೊರತು - ತೆರಿಗೆಯಲ್ಲ. ಈ

ಶುಲ್ಕವನ್ನು ಮದುವೆಗಳ ನೋಂದಣಿ ಇಲಾಖೆಯನ್ನು ನಡೆಸುವ ಕುರಿತಾದ ವೆಚ್ಚಗಳಿಗಾಗಿ ಆಕರಿಸಲಾಗುತ್ತದೆ.

ಅರ್ಜಿ ನಮೂನೆಗಳಲ್ಲಿ ತುಂಬುವ ಕುರಿತು, ಅವುಗಳನ್ನು ಹೇಗೆ ಪೂರೈಸಲಾಗುವುದು ಮತ್ತು ಅವುಗಳನ್ನು ಹೇಗೆ ತುಂಬಬೇಕು ಇತ್ಯಾದಿಗಳ ಬಗ್ಗೆ ಇರುವ ಕಠಿಣತೆಗಳನ್ನು ಮಾನ್ಯ ಸದಸ್ಯರು ಎತ್ತಿ ಹೇಳಿದ್ದಾರೆ. ನಾನು ಅವರಿಗೆ ಹೇಳಬಯಸುವುದೆಂದರೆ 13 ನೇಯ ವಾಕ್ಯಾಂಗದ ಅಡಿಯಲ್ಲಿ ನಿಯಮಗಳನ್ನು ರೂಪಿಸಲಾಗಿದೆ. ಅದರಲ್ಲಿ ಅರ್ಜಿನಮೂನೆಗಳು ಎಲ್ಲಿ ದೊರೆಯುತ್ತವೆ, ಎಲ್ಲಿ ಮತ್ತು ಹೇಗೆ ಅವುಗಳನ್ನು ಕಳಿಸಬೇಕು ಎಂಬ ಬಗ್ಗೆ ಮಾಹಿತಿ ಇದೆ. ಆದ್ದರಿಂದ ಈ ಕುರಿತು ಚಿಂತಿಸುವ ಕಾರಣವಿಲ್ಲ.

ಈಗ ಅರ್ಜಿ ನಮೂನೆಯಲ್ಲಿಯ ವಿವರಗಳನ್ನು ತುಂಬುವ ಕುರಿತಾದ ಕಷ್ಟಗಳು. ಆದರೆ ಅಲ್ಲಿ ಅಂಥಹ ತೊಂದರೆಗಳೇನೂ ಉದ್ಭವಿಸಲಾರವು ಎಂದು ನನಗೆ ಅನಿಸುತ್ತದೆ. ಅಲ್ಲಿರುವ ಒಂದೇ ಒಂದು ತೊಂದರೆ ಎನ್ನಬಹುದಾದರೆ ಸಾಕ್ಷಿಗಳನ್ನು ಹುಡುಕುವುದು ಮತ್ತು ಅವರ ರುಜುಗಳನ್ನು ಹಾಕಿಸುವುದು. ಈ ವಿಷಯುವನ್ನು ಕಡತದಿಂದ ತೆಗೆದುಹಾಕಲಾಗುವುದೆಂದು ನಾನು ಆಗಲೇ ಹೇಳಿರುವೆ. ಹೇಳಬಹುದಾದ ವಿಷಯಗಳೆಂದರೆ ಮದುವೆಯ ಪಕ್ಷಗಳ ಹೆಸರುಗಳು, ತಂದೆಯ ಹೆಸರು, ಅಡ್ಡ ಹೆಸರು, ಯಾವ ಸ್ಥಳದಿಂದ ಬಂದರು, ಮದುವೆಯಾದ ದಿನ ಈ ವಿವರಗಳನ್ನು ನೀಡಲು ಯಾವ ತೊಂದರೆಗಳೂ ಬರಲಾರವೆಂದು ನನಗೆ ಅನಿಸುತ್ತದೆ. ಇವುಗಳು ಅತ್ಯಂತ ಸುಲಭವಾದ ಮತ್ತು ಎಲ್ಲರಿಗೂ ಗೊತ್ತಿರುವ ವಿಷಯಗಳಾಗಿರುತ್ತವೆ. ಆದ್ದರಿಂದ ಈ ವಿವರಗಳನ್ನು ನೀಡುವಲ್ಲಿ ನನಗೆ ಯಾವ ತೊಂದರೆಗಳೂ ಕಾಣುವುದಿಲ್ಲ. ಹಳ್ಳಿಗಳಲ್ಲಿ ಇರುವ ಪಾಟೀಲರು ಮತ್ತು ಕುಲಕರ್ಣಿಗಳು ಅರ್ಜಿ ನಮೂನೆಗಳನ್ನು ತುಂಬುವಲ್ಲಿ ಸಹಾಯ ಮಾಡುತ್ತಾರೆ.

ಐದನೇಯ ವಾಕ್ಯಾಂಗದಲ್ಲಿಯೇ ಮದುವೆಗಳ ನೊಂದಣಿ ರಿಜಿಸ್ಟರನ್ನು ಯಾರು ಬೇಕಾದರೂ ನೋಡುವಂತೆ ಇಡಲಾಗುತ್ತದೆ ಮತ್ತು ಅದಕ್ಕಾಗಿ ಯಾವ ಶುಲ್ಕವನ್ನು ವಿಧಿಸಿಲ್ಲ. ಆದರೆ ಯಾರಿಗಾದರೂ ಅವುಗಳ ನಕಲು ಬೇಕಾದರೆ ಎರಡು ರೂಪಾಯಿ ಶುಲ್ಕವನ್ನು ಭರಿಸಬೇಕಾಗುತ್ತದೆ.

ಶ್ರೀ ಟಿ. ಎಸ್. ಜಾಧವ : 2 ರೂಪಾಯಿ ಶುಲ್ಕ ಯಾಕೆ?

ಶ್ರೀ ಬಿ. ಡಿ. ಜತ್ತಿ : ಯಾರಿಗಾದರೂ ಕೇವಲ ನೋಡಬೇಕು ಎನಿಸಿದರೆ ನೋಡಬಹುದು ಅದಕ್ಕೆ ಶುಲ್ಕವಿಲ್ಲ. ಆದರೆ ಯಾರಿಗಾದರೂ ಅದರ ನಕಲು ಬೇಕಾದರೆ ಮಾತ್ರ 2 ರೂಪಾಯಿಗಳ ಶುಲ್ಕವನ್ನು ಭರಿಸಬೇಕಾಗುತ್ತದೆ. ಮಾನ್ಯ ಸದಸ್ಯರಾದ ಶ್ರೀ ಜಾಧವರಿಗೆ ಎಲ್ಲರೂ ರೂಪಾಯಿಗಳ ಶುಲ್ಕವನ್ನು ಭರಿಸಬೇಕಾಗುತ್ತದೆ ಎಂಬುದಾಗಿ ತಪ್ಪು ಕಲ್ಪನೆ ಆದಂತಿದೆ ಆದರೆ ಹಾಗಿಲ್ಲ.

ದಿನಾಂಕ : 24-12-1953

ಶ್ರೀ ಬಿ.ಡಿ. ಜತ್ತಿ : ಮಾನ್ಯರೆ ಇದು ಕೇವಲ 14 ವಾಕ್ಯಾಂಗಗಳನ್ನೊಳಗೊಂಡ ಒಂದು ಚಿಕ್ಕ ಮಸೂದೆ, ಮಸೂದೆಯ ಮುಖ್ಯ ಉದ್ದೇಶವೆಂದರೆ ಮುಂಬಯಿ ರಾಜ್ಯದಲ್ಲಿ ಜರಗುವ ಅಥವಾ ಪವಿತ್ರ ಬಂಧನದಲ್ಲಿ ಸಿಲುಕುವ ಸಾಧ್ಯವಾದಷ್ಟು ಸರಿಯಾದ ಮತ್ತು ನಿಖರವಾದ ಎಲ್ಲ ಮದುವೆಗಳನ್ನು ದಾಖಲಿಸುವುದೇ ಆಗಿದೆ. ಪ್ರಸ್ತುತ ಕೆಲವು ಮದುವೆಗಳನ್ನು ನೊಂದಣಿ ಆಗುವಂತೆ ಮೂರು ಕಾನೂನುಗಳು ಇವೆ. ಅವುಗಳು (1) ವಿಶೇಷ ಮದುವೆ ಕಾನೂನು 1872 (2) ಭಾರತೀಯ ಕ್ರಿಶ್ಚಿಯನ್ನರ ಮದುವೆ ಕಾನೂನು 1872 ಮತ್ತು (3) ಪಾರ್ಸಿಗಳ ಮದುವೆ ಮತ್ತು ಘಟಸ್ಫೋಟ ಕಾನೂನು 1936. ಉಳಿದೆಲ್ಲಾ ಮದುವೆಗಳು ನೊಂದಣಿಯಾಗಬೇಕೆಂದಿಲ್ಲಾ. ನಾನು ಹೇಳಿದಂತೆ ಮಸೂದೆಯ ಉದ್ದೇಶ ಎಲ್ಲ ಮದುವೆಗಳನ್ನು ಸರಿಯಾಗಿ ದಾಖಲಿಸುವುದಾಗಿದೆ. .......... ಹಲವಾರು ಮಾನ್ಯ ಸದಸ್ಯರು ಮಸೂದೆಯ ಅನುಕೂಲ ಪ್ರತಿಕೂಲಗಳ ಬಗ್ಗೆ ಮಾತನಾಡಿದ್ದಾರೆ ಕೆಲವು ಅನುಕೂಲಗಳು ಇವೆ ಪ್ರತಿಕೂಲಗಳೂ ಇವೆ. ಆದರೆ ನಾನು ಒತ್ತಿ ಹೇಳಬಯಸುವುದೇನೆಂದರೆ ಈ ಮಸೂದೆಯನ್ನು ಮಂಡಿಸುವ ಮುಖ್ಯ ಉದ್ದೇಶ ಮುಂಬಯಿ ರಾಜ್ಯದಲ್ಲಿ ನಡೆಯುವ ಮದುವೆಗಳ ಸರಿಯಾದ ಮತ್ತು ನಿಖರವಾದ ಸಂಖ್ಯೆಗಳನ್ನು ವಿವರಗಳನ್ನು ದಾಖಲಿಸುವುದಾಗಿದೆ.

ಮಾನ್ಯರೆ ಈಗ ನಾನು ಮಾನ್ಯ ಸದಸ್ಯರು ಎತ್ತಿದ ಕೆಲವು ಸೂಚನೆಗಳ ಬಗ್ಗೆ ಅಥವಾ ಆಕ್ಷೇಪಣೆಗಳ ಬಗ್ಗೆ ಉತ್ತರ ಕೊಡಬೇಕೆಂದಿರುವೆ. ಮಸೂದೆಯನ್ನು ಸ್ವಾಗತಿಸಿದ ಮತ್ತು ಬೆಂಬಲಿಸಿದ ಮಾನ್ಯ ಸದಸ್ಯರಿಗೆ ನಾನು ಉತ್ತರ ಕೊಡುವ ಅಗತ್ಯ ಇಲ್ಲ. ಅವರ ಸ್ವಾಗತ ಮತ್ತು ಬೆಂಬಲಗಳಿಗೆ ಕೃತಜ್ಞನಾಗಿರುವೆ. ಅವಶ್ಯವಿದ್ದಲ್ಲಿ ನೊಂದಣಿ ಅಧಿಕಾರಿಗಳನ್ನು ನೇಮಿಸುವುದು ಸರಕಾರಕ್ಕೆ ಭಾರವಾಗುವದಿಲ್ಲವೆ? ಎಂದು ಮಾನ್ಯ ಸದಸ್ಯರಾದ ಪಂಡಿತರು ಕೇಳಿದ್ದಾರೆ ಮದುವೆಗಳನ್ನು ನೊಂದಣಿ ಮಾಡಲು ಪ್ರತ್ಯೇಕ ಅಧಿಕಾರಿಗಳನ್ನು ನೇಮಕ ಮಾಡುವ ಅವಶ್ಯಕತೆ ಇಲ್ಲವೆಂದು ನಾನು ಮಾನ್ಯ ಸದಸ್ಯರಿಗೆ ಹೇಳಬಯಸುವೆ. ತಾಲ್ಲೂಕುಗಳಲ್ಲಿ ಮತ್ತು ಜಿಲ್ಲೆಗಳಲ್ಲಿ ಬೇರೆ ಬೇರೆ ಅಧಿಕಾರಗಳನ್ನೊಳಗೊಂಡ ನೊಂದಣಿ ಅಧಿಕಾರಿಗಳು ಆಗಲೇ ರಾಜ್ಯದಲ್ಲಿ ಇದ್ದಾರೆ. ಸಾಕಷ್ಟು ಕೆಲಸಗಳಿಲ್ಲದೆ ಅಂಥಹ ಅಧಿಕಾರಿಗಳಿಗೆ ಈ ಮದುವೆಗಳ ನೊಂದಣಿ ಮಾಡುವ ಕಾರ್ಯವನ್ನು ವಹಿಸುತ್ತೇವೆ. ಆದ್ದರಿಂದ ಸರಕಾರವು ಅವರಿಗೆ ಇದಕ್ಕೆಂದು ಬೇರೆ ಕೊಡುವ ಅಗತ್ಯವಿಲ್ಲ ಮತ್ತು ಸರಕಾರಕ್ಕೆ ಅಧಿಕ ವೆಚ್ಚದ ಭಾರ ಆಗಲಾರದು ಅದೂ ಅಲ್ಲದೆ ಇತ್ತೀಚಿನ ಕಾನೂನುಗಳಾದ ಸಾಲ ಕೊಡುವ ಕಾನೂನು ಮತ್ತು ಟೆನೆನ್ಸಿ ಕಾನೂನುಗಳಿಂದಾಗಿ ನೊಂದಣಿಯ ಕೆಲಸ ಕಡಿಮೆಯಾಗಿದೆ ಮತ್ತು ಅಧಿಕಾರಿಗಳು ಸುಲಭವಾಗಿ ಈ ಹೆಚ್ಚುವರಿ ನೊಂದಣಿ ಕಾರ್ಯದಲ್ಲಿ ಮಾಡಬಹುದಲ್ಲದೆ ಅವರಿಗೂ ಕಾರ್ಯದಲ್ಲಿ ತೊಡಗಿದಂತಾಗುತ್ತದೆ.

ಎರಡನೇಯದಾಗಿ, ಮಾನ್ಯರೆ ಈ ಕಾನೂನನ್ನು ಎಲ್ಲೆಡೆ ಒಂದೇ ಸಲ ತರುವುದಿಲ್ಲ. ಮೊದಲು ನಗರ ಸಭೆ ವ್ಯಾಪ್ತಿಯಲ್ಲಿ ಜಾರಿಗೆ ತರಬೇಕೆಂಬ ಇರಾದೆ ಸರಕಾರಕ್ಕಿದೆ ಮತ್ತು ದೊಡ್ಡ ನಗರ ಪಟ್ಟಣಗಳಿಗೂ ವಿಸ್ತರಿಸಲಾಗುವುದು. ಅನಂತರ ಜನರು ಇದಕ್ಕೆ ಹೊಂದಿಕೊಂಡಂತೆ ಮತ್ತು ಪತ್ರಿಕೆ - ಘೋಷಣೆಗಳ ಮುಖಾಂತರ ಸಾಕಷ್ಟು ಪ್ರಚಾರ ಮಾಡಿದ ನಂತರ ಹಳ್ಳಿಗಳಿಗೆ ವಿಸ್ತರಿಸಲಾಗುವುದು. ಆಗಲೂ ಕೂಡ ಈ ಕೆಲಸವನ್ನು ಪಾಟೀಲರಿಗೆ ಮತ್ತು ಕುಲಕರ್ಣಿಗಳಿಗೆ ಅಥವಾ ಬೇರೆ ಅಧಿಕಾರಿಗಳಾದ ಸಮುದಾಯ ಯೋಜನಾಧಿಕಾರಿಗಳಿಗೆ ವಹಿಸಿಕೊಡಬಹುದೆ ಎಂಬ ಬಗ್ಗೆ ಸರಕಾರ ಯೋಚಿಸುವುದು. ಅಲ್ಲಿ ನಾವು ಒಂದು ಹೊಸ ಪದ್ಧತಿಯನ್ನು ಜಾರಿಗೆ ತರುತ್ತೇವೆ. ತಲಾಟಿಗಳ ಬದಲಾಗಿ ಹತ್ತು ಹಳ್ಳಿಗಳಿಗೆ ಒಬ್ಬ ಸ್ನಾತಕ ಪದವಿಯ ಅಥವಾ ವಿಶೇಷ ಶಿಕ್ಷಣ ಪಡೆದ ಸಮಾಜ ಸೇವಕನಿಗೆ ಈ ಕೆಲಸವನ್ನು ವಹಿಸಿಕೊಡಬಹುದು. ಅಂಥಲ್ಲಿ ಕೂಡ ಸರಕಾರ ಯಾವ ವೆಚ್ಚವನ್ನು ಮಾಡುವ ಅವಶ್ಯಕತೆ ಇಲ್ಲ. ಈ ಎಲ್ಲ ವಿಷಯಗಳನ್ನು ಹಂತ ಹಂತವಾಗಿ ಈ ಕಾನೂನನ್ನು ಇಡೀ ರಾಜ್ಯಕ್ಕೆ ಅನ್ವಯಿಸಿದ ನಂತರ ವಿಚಾರಿಸಲಾಗುವುದು.

ಒಂದು ರೂಪಾಯಿಯ ಶುಲ್ಕದ ಬಗ್ಗೆ ಹೇಳುವುದಾದರೆ, ನಾನೇ ಒಂದು ಸಣ್ಣ ಹಳ್ಳಿಯಿಂದ ಬಂದವನು. ನಾನೇನು ಮಾನ್ಯ ಸದಸ್ಯರಾದ ಪಂಡಿತರಂತೆ ದೊಡ್ಡ ನಗರ ಅಥವಾ ಪಟ್ಟಣದಿಂದ ಬಂದವನಲ್ಲ. ಅಲ್ಲದೆ ಅತ್ಯಂತ ಸಣ್ಣ ಹಳ್ಳಿಯ ಕಡು ಬಡವನು ಕೂಡ ಮದುವೆಗಳಲ್ಲಿ ಒಂದು ನೂರಕ್ಕಿಂತ ಕಡಿಮೆ ಖರ್ಚು ಮಾಡುವುದಿಲ್ಲ ಎಂಬುದು ನನಗೆ ಗೊತ್ತಿದೆ. ಆದ್ದರಿಂದ ಮದುವೆಯ ನೊಂದಣಿಗಾಗಿ ಒಂದು ರೂಪಾಯಿಯನ್ನು ಖರ್ಚು ಮಾಡುವುದು ಅಷ್ಟೊಂದು ಭಾರವೆನಿಸುವುದಿಲ್ಲ. ಅದೂ ಅಲ್ಲದೆ ಇದನ್ನೊಂದು ದಂಡವೆಂದು ಪರಿಗಣಿಸಬೇಕಾಗಿಲ್ಲ. ಅದು ಶುಲ್ಕ ಮತ್ತು ಸರಕಾರ ಅದನ್ನು ತನ್ನ ಇಲಾಖೆಯ ನಿರ್ವಹಣೆಗಾಗಿ ಆಕರಿಸುತ್ತದೆ. ಅದು ಅವಶ್ಯವಾಗಿದೆ. ಅಲ್ಲದೆ ಇಲಾಖೆ ವಿಸ್ತರಿಸಿದಂತೆ ತನ್ನ ನಿರ್ವಹಣೆಗಾಗಿ ಏನಾದರೊಂದು ಉಪಾಯ ಹುಡುಕಲೇಬೇಕಾಗುತ್ತದೆ. ಅದಕ್ಕಾಗಿ ಹಣ ಸಂಗ್ರಹಿಸಲು ಇದೊಂದು ದಾರಿ - ಅದರಿಂದ ಇಲಾಖೆಯನ್ನು ಅಥವ ಇಲಾಖೆಯಲ್ಲಿಯ ಈ ಶಾಖೆಯನ್ನು ನಿರ್ವಹಿಸಲು ಅವಶ್ಯವಾಗುತ್ತದೆ.

ಇನ್ನು ಎರಡು ರೂಪಾಯಿಗಳ ಶುಲ್ಕದ ಬಗ್ಗೆ, ಮದುವೆಯ ನೊಂದಣಿ ಪತ್ರದ ನಕಲನ್ನು ಪಡೆಯಬೇಕಾದರೆ ಅದನ್ನು ಭರಿಸಬೇಕಾಗುತ್ತದೆ. ಅದು ಅಧಿಕವಾಯಿತೆಂದು ನನಗೇನೂ ಅನಿಸುವುದಿಲ್ಲ. ಆರನೇಯ ಅಧಿನಿಯಮದಲ್ಲಿ ಸ್ಪಷ್ಟವಾಗಿ ಹೇಳಿದೆ. ನೊಂದಣಿ ರಿಜಿಸ್ಟರನ್ನು ನೋಡಲು ಕಾರ್ಯಾಲಯದ ಅವಧಿಯಲ್ಲಿ ತೆರೆದು ಇಡಲಾಗುತ್ತದೆ ಮತ್ತು ಯಾರು ಬೇಕಾದರೂ ಅದನ್ನು ನಿಃಶುಲ್ಕವಾಗಿ ನೋಡಬಹುದು. ಅದಕ್ಕಾಗಿ ಒಂದು ಪೈಸೆಯನ್ನು ಕೊಡಬೇಕಾಗಿಲ್ಲ. ಆದರೆ ಕೋರ್ಟು ಇತ್ಯಾದಿಗಳಲ್ಲಿ ತೋರಿಸಲು ಅದರ ದೃಢೀಕೃತ ನಕಲು ಬೇಕಾದರೆ, ನಕಲು ಪಡೆಯಲು ಎರಡು ರೂಪಾಯಿಗಳನ್ನು ಖರ್ಚುಮಾಡುವುದು ಭಾರವೆನಿಸುತ್ತದೆ ಎಂದು ಆಕ್ಷೇಪಣೆ ಎತ್ತುವುದು ಸಮಂಜಸವಲ್ಲ ಎಂದು ನನಗೆ ಅನಿಸುತ್ತದೆ. ನೋಡಲು ಶುಲ್ಕವನ್ನು ನೀಡಬೇಕಾಗಿಲ್ಲ.

ಇನ್ನು ರೂ. 200 ರ ದಂಡದ ಬಗ್ಗೆ ಕೆಲವು ಮಾನ್ಯ ಸದಸ್ಯರು ದಂಡ ತುಂಬ ಅಧಿಕವಾಯಿತೆಂದೂ - ಭಾರವೆಂದೂ ಹೇಳಿದರು, ಆದರೆ ಅಧಿನಿಯಮದಲ್ಲಿ ಕಾಣಿಸಿದಂತೆ ಇದು ಗರಿಷ್ಟತಮ ದಂಡ. ವಿಚಾರಿಸುತ್ತಿರುವ ನ್ಯಾಯಾಧೀಶರು ಅದನ್ನು ನಿರ್ಧರಿಸುತ್ತಾರೆ. ಅದನ್ನು ನಿರ್ಧರಿಸುವಾಗ ಅವರು ಪಕ್ಷಗಳ ಅಂತಸ್ತನ್ನು ಮತ್ತು ಯಾವ ಸಂದರ್ಭದಲ್ಲಿ ಅವರು ನೊಂದಣಿ ಮಾಡಿಸಲು ಸಾಧ್ಯವಾಗಿಲ್ಲ ಎಂದು ಗಮನಿಸಿ, ಪರಿಸ್ಥಿತಿಯನ್ನು ಅವಲಂಬಿಸಿ ಅವರು ಅಪರಾಧಿಗಳೆಂದು ನಿಶ್ಚಯವಾದರೆ ಸೂಕ್ತ ದಂಡವನ್ನು ರೂ. 1 ರಿಂದ 200 ರ ವರೆಗೆ ವಿಧಿಸಬಹುದು. ರೂ 200 ಗರಿಷ್ಟತಮವಾಗಿದೆ - ಕನಿಷ್ಟ ಅಲ್ಲ. ಆದ್ದರಿಂದ ದಂಡ ಅಧಿಕವಾಯಿತೆಂಬ ಆಕ್ಷೇಪಣೆ ಸಲ್ಲ.

ಮದುವೆಯ ಮುನ್ನವೆ ತಮ್ಮ ಅಂತಸ್ತನ್ನು ತಿಳಿಸುವುದು ಒಳ್ಳೆಯದೆಂದು ಮಾನ್ಯ ಸದಸ್ಯರಾದ ಶ್ರೀ ಪಂಡಿತ ಅವರು ಹೇಳಿದ್ದಾರೆ. ಆದರೆ ಹಾಗೆ ಮದುವೆಯ ಪಕ್ಷಗಳನ್ನು ಕೇಳುವುದು ಸಾಧ್ಯವಿಲ್ಲ. ಆದಾಗ್ಯೂ 8 ನೇಯ ಅಧಿನಿಯಮದ ಅಡಿಯಲ್ಲಿ ಮುನ್ನೆಚ್ಚರಿಕೆ ಇದೆ. 5 ನೇಯ ಅಧಿನಿಯಮದ ಅಡಿಯಲ್ಲಿ ಹೇಳಿದಂತೆ ಮದುವೆಯ ಪಕ್ಷದವರು ನೀಡಬೇಕಾದ ವಿವರಗಳನ್ನು ನೀಡದಿದ್ದಲ್ಲಿ ದಂಡವನ್ನು ವಿಧಿಸಲಾಗುತ್ತದೆ. ಅವರು ಸರಿಯಾದ ವಿವರಗಳನ್ನು ಕೊಡಲು ಇದಿಷ್ಟು ಸಾಕು. ಅವರು ಒಂದು ವೇಳೆ ಉದ್ದೇಶ ಪೂರ್ವಕವಾಗಿ ವಿವರಗಳನ್ನು ಕೊಡದಿದ್ದಲ್ಲಿ ಅವರನ್ನು ಶಿಕ್ಷಿಸಲಾಗುತ್ತದೆ, ಆದ್ದರಿಂದ ಪಕ್ಷಗಳಿಗೆ ಸರಿಯಾದ ವಿವರಗಳನ್ನು ಕೊಡುವಂತೆ ಮಾಡಲು ಈ ಮುನ್ನಚ್ಚರಿಕೆ ಸಾಕೆಂದು ಎನಿಸುತ್ತದೆ, ಆದ್ದರಿಂದ ಸೂಚನೆಯನ್ನು ಸ್ವೀಕರಿಸಬೇಕೆಂದು ನನಗೆ ಅನಿಸುವುದಿಲ್ಲ.

ಮಾನ್ಯ ಸದಸ್ಯರೊಬ್ಬರು, ಮುಂಬಯಿ ಸರಕಾರವು ಈ ಕಾನೂನನ್ನು ತರಲು ಆತುರ ತೋರುತ್ತಿದೆ ಎನಿಸುತ್ತದೆ. ನಿಜವಾಗಿ ಇದು ಅಖಿಲ ಭಾರತಮಟ್ಟದಲ್ಲಿ ತೆಗೆದುಕೊಳ್ಳುವಂಥ ವಿಚಾರವಾಗಿದೆ ಎಂದು ಹೇಳಿದರು, ಆದರೆ ಮುಂಬಯಿ ಸರಕಾರವು ತನ್ನ ರಾಜ್ಯದ ಹಿತ ದೃಷ್ಟಿಯಿಂದ ಅನೇಕ ಕಾನೂನುಗಳನ್ನು ತರುವಲ್ಲಿ ಮುಂದಾಗಿದೆ. ಹಾಗೆ ಭಾರತ ಸರಕಾರವಾಗಲೀ ಇನ್ನಿತರ ರಾಜ್ಯಗಳಾಗಲೀ ಮಾಡಿಲ್ಲ. ಮುಂಬಯಿ ಸರಕಾರವು ಈ ಕಾನೂನನ್ನು ಜಾರಿಯಲ್ಲಿ ತಂದಾಗ ಉಳಿದ ರಾಜ್ಯಗಳೂ ಅದರ ನಕಲನ್ನು ಮಾಡಿ ಮುಂಬಯಿ ಮಾದರಿಯನ್ನು ಅನುಸರಿಸುತ್ತದೆ ಎಂದು ನಾನು ಹೇಳಬಯಸುವೆ. ಸರಕಾರವು ತುಸು ಕಾಲ ತಡೆಯಬೇಕೆಂದೂ ಲೋಕ ಸಭೆಯಲ್ಲಿ ಇಂಥದೊಂದು ಮಸೂದೆಯು ಮಂಡನೆಯಾಗುತ್ತದೆಂದೂ ಹೇಳಲಾಯಿತು. ಈ ಮಸೂದೆಯ ವಿಷಯ ರಾಜ್ಯ ಅಧಿಕಾರ ವ್ಯಾಪ್ತಿಯಲ್ಲೇ ಬರುತ್ತದೆಂದು ನಾನು ಸಭೆಗೆ ಹೇಳಲಿಚ್ಛಿಸುತ್ತೇನೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳೆರಡೂ ಇಂಥ ಮಸೂದೆಗಳನ್ನು ಮಂಡಿಸಬಹುದು. ಆಗಲೇ ಸಾಕಷ್ಟು ಸಮಯ ನಾವು ಕಾದಿದ್ದೇವೆ. ಈ ಮಸೂದೆಯು ಶಾಸನವಾಗಿ ಬಹಳ ದಿನಗಳಾಗಬೇಕಿತ್ತು. 1948 ಮತ್ತು ಅದಕ್ಕಿಂತ ಮೊದಲೇ ಈ ಕುರಿತು ಚರ್ಚೆ ನಡೆದಿತ್ತು. ನಾವು ಆಗಲೇ ತುಂಬ

ತಡವಾಗಿದ್ದೇವೆ. ವಿವಿಧ ವರ್ಗದ ಜನರ ಅಭಿಪ್ರಾಯಗಳನ್ನು ನಾವು ಪಡೆದಿದ್ದೇವೆ ಮತ್ತು ಮಸೂದೆಯನ್ನು ಸ್ವಾಗತಿಸುತ್ತಾರೆ - ಎಂದೇ ಈ ಮಸೂದೆಯನ್ನು ತಂದಿದ್ದೇವೆ. ಆದ್ದರಿಂದ ಲೋಕಸಭೆಯಲ್ಲಿ ಮಂಡಿಸಿ - ಸ್ವೀಕಾರ ಆಗುವವರೆಗೆ ನಾವು ಕಾಯುವ ಅಗತ್ಯವಿಲ್ಲ.

ವಯೋಮಾನದ ಕುರಿತು ಅದು 18 ಅಥವಾ 21 ಎಂಬ ಬಗ್ಗೆ ಚರ್ಚೆಯಾಯಿತು ಈಗ, ಮಾನ್ಯ ಸದಸ್ಯರೆ, ಮದುವೆಯ ನೊಂದಣಿಗಾಗಿ 18 ವಯದವರನ್ನು ಪ್ರಾಪ್ತವಯಸ್ಕರೆಂದು ಪರಿಗಣಿಸಬಹುದು ಯಾಕೆಂದರೆ ಪಕ್ಷಗಳ ತಮ್ಮ ಮದುವೆಗಳನ್ನು ಆ ವಯದಲ್ಲಿ ನೊಂದಣಿ ಮಾಡಬೇಕೋ ಬೇಡವೋ ಎಂಬುದು ಗೊತ್ತಾಗುತ್ತದೆ. ಪಾಲನಾ ಕಾನೂನಿನಲ್ಲಿ ಮಾತ್ರ 21 ವಯಸ್ಸೆಂದು ಹೇಳಲಾಗಿದೆ. ಇಲ್ಲವಾದಲ್ಲಿ ಉಳಿದೆಲ್ಲ ಉದ್ದೇಶಗಳಿಗೆ 18 ವರುಷ ಪ್ರಾಪ್ತ ವಯಸ್ಸೆಂದೇ ಪರಿಗಣಿಸಲಾಗಿದೆ. ಆದ್ದರಿಂದ ಈ ಮಸೂದೆಯಲ್ಲಿ ಪ್ರಾಪ್ತವಯಸ್ಸನ್ನು 21 ಕ್ಕೆ ಏರಿಸುವ ಅಗತ್ಯವಿಲ್ಲ.

ಮಾನ್ಯರೆ, ನಾನು ಈ ಸಭೆಯಲ್ಲಿಯ ಬಹುತೇಕ ಎಲ್ಲ ಆಕ್ಷೇಪಣೆಗಳಿಗೂ ಉತ್ತರಿಸಲು ಪ್ರಯತ್ನಿಸಿರುವೆನೆಂದು ಭಾವಿಸಿರುವೆ ಮತ್ತು ಈಗ ಸಭೆಯು ಸರ್ವಾನುಮತದಿಂದ ಈ ಮಸೂದೆಯನ್ನು ಸ್ವೀಕರಿಸುತ್ತದೆ ಎಂದು ತಿಳಿದಿರುವೆ.

ಪ್ರಶ್ನೆಯನ್ನು ಮಂಡಿಸಿತು ಮತ್ತು ಒಪ್ಪಿತು.

******

## ಭಾಗ - 3

### ನೆಲ

**11ನೇ ಮಾರ್ಚ್ 1959**

**ಮುಂಬಯಿ ಮತ್ತು ಮೈಸೂರು ರಾಜ್ಯಗಳ ಗಡಿ ವಿವಾದ.**

ಪ್ರಶ್ನೆ - 213 ಶ್ರೀ ಜೇ. ಬಿ. ಮಲ್ಲಾರಾಧ್ಯ (ನಂಜನಗೂಡು)

ಸರಕಾರ ಈ ಕುರಿತು ಹೇಳಬಹುದೆ?

ಅ) ರಾಜ್ಯಪಾಲರ ಭಾಷಣದ ಮೇಲೆ ಮಾತನಾಡುತ್ತ ಮುಂಬಯಿ ರಾಜ್ಯ ವಿಧಾನ ಸಭೆಯಲ್ಲಿ ಆ ರಾಜ್ಯದ ಮುಖ್ಯಮಂತ್ರಿಗಳು ಇತ್ತೀಚಿಗೆ ಚರ್ಚೆಗೆ ಉತ್ತರ ಕೊಡುತ್ತ ಮುಂಬಯಿ ಮತ್ತು ಮೈಸೂರು ರಾಜ್ಯಗಳ ಗಡಿ ವಿವಾದ ಸ್ಥಗಿತಗೊಂಡಿದೆ ಎಂದು ಹೇಳಿದ್ದು ಗಮನಕ್ಕೆ ಬಂದಿದೆಯೆ?

ಬ) ಉಭಯ ರಾಜ್ಯಗಳ ಮಧ್ಯ ಗಡಿವಿವಾದವೇನಾದರೂ ಇದೆಯೆ?

ಕ) ಮೈಸೂರು ರಾಜ್ಯದ ಮುಖ್ಯಮಂತ್ರಿಗಳು ಈ ಕುರಿತು ಕೆಲವು ಪ್ರಸ್ತಾವಗಳನ್ನು ಕಳಿಸಲು ಒಪ್ಪಿದ್ದಾರೆ ಎಂಬುದು ನಿಜವೆ? ಹಾಗಿದ್ದರೆ ಸರಕಾರೀ ಮಟ್ಟದಲ್ಲಿ ಅಂತಿಮ ನಿರ್ಣಯ ತೆಗೆದುಕೊಳ್ಳುವ ಮುನ್ನ ಆ ಪ್ರಸ್ತಾವಗಳನ್ನು ಶಾಸನ ಸಭೆಯ ಸದಸ್ಯರಿಗೆ ದೊರೆವಂತೆ ಮಾಡಬಹುದೆ?

ಶ್ರೀ ಬಿ.ಡಿ. ಜತ್ತಿ (ಮುಖ್ಯ ಮಂತ್ರಿಗಳು)

ಅ) ಸರಕಾರಕ್ಕೆ ಈ ಕುರಿತು ಅಧಿಕೃತವಾಗಿ ತಿಳಿದು ಬಂದಿಲ್ಲ. ಸುದ್ದಿಮಾಧ್ಯಮ ಪತ್ರಿಕೆಗಳಲ್ಲಿ ಹೇಳಿದಂತೆ, ತನ್ನ ಪ್ರಸ್ತಾವಗಳು ಮೈಸೂರು ರಾಜ್ಯಕ್ಕೆ ಒಪ್ಪಿಗೆಯಾಗಿಲ್ಲವೆಂದು ಮುಂಬಯಿ ಸರಕಾರದ ಮುಖ್ಯಮಂತ್ರಿಗಳು ಹೇಳಿದ್ದು ಸತ್ಯವಾಗಿದೆ.

ಬ) ಕೆಲವು ಪ್ರದೇಶಗಳ ಕುರಿತು.

ಕ) ಮುಖ್ಯ ಮಂತ್ರಿಗಳು ತಮ್ಮ ಕೆಲವು ಸೂಚನೆಗಳನ್ನು ಕೇಂದ್ರ ಗೃಹ ಸಚಿವರೆದುರು ಕಳಿಸಲಾಗುತ್ತದೆ. ಆ ಅಭಿಪ್ರಾಯಗಳನ್ನು ಈ ಹಂತದಲ್ಲಿ ಹೇಳಲು ಸಾಧ್ಯವಿಲ್ಲ.

ಶ್ರೀ ಜೆ. ಬಿ. ಮಲ್ಲಾರಾಧ್ಯ :

ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರ ಹೇಳಿಲ್ಲ. ಈ ವಿಚಾರದಲ್ಲಿ ಒಂದು ತೀರ್ಮಾನಕ್ಕೆ ಬಂದಿರುವುದು ಸರಕಾರದ ಗಮನಕ್ಕೆ ಬಂದಿದೆಯೆ? ಹೊಸದೇನು ವ್ಯಾಜ್ಯ ಇದೆ, ವ್ಯಾಜ್ಯ ಉಳಿದಿದೆ?

ಶ್ರೀ ಬಿ. ಡಿ. ಜತ್ತಿ :

ಮೈಸೂರು ಮತ್ತು ಬೊಂಬಾಯಿ ಸ್ಟೇಟು ಎಂದು ಸಪರೇಟು ಸ್ಟೇಟುಗಳು ಆಗಿ ಹೋಗಿವೆ. ಲೋಕ ಸಭೆಯ ಕಾನೂನಿನಂತೆ ಚಿಕ್ಕ ಗಡಿ ವಿವಾದಗಳನ್ನು ಓಪನ್ ಮಾಡುವುದಕ್ಕೆ ಅವಕಾಶ ಇದೆಯೆಂದು ಯುನಿಯನ್ ಹೋಂ ಮಿನಿಸ್ಟರ ಹೇಳಿದ್ದಾರೆ.

* ಶ್ರೀ ಜೇ. ಬಿ. ಮಲ್ಲಾರಾಧ್ಯ : ರೀ ಆರ್ಗನೈಜ ಸ್ಟೇಟ ಆದಮೇಲೆ ಡಿಸ್‌ಪ್ಯೂಟಗಳನ್ನು ಓಪನ್ ಮಾಡುವುದಕ್ಕೆ ಅವಕಾಶವಿದೆಯೆ?

* ಶ್ರೀ ಬಿ. ಡಿ. ಜತ್ತಿ : ಇಲ್ಲ. ವ್ಯಾಜ್ಯ ಮಾಡುವುದಕ್ಕೆ ನಾನು ಪ್ರಾರಂಭ ಮಾಡಿಲ್ಲ. ಮಾಡುವ ಇಚ್ಛೆಯೂ ಇಲ್ಲ.

* ಶ್ರೀ ಜೇ. ಬಿ. ಮಲ್ಲಾರಾಧ್ಯ : ಜೋನಲ್ ಕಮಿಟಿಯಲ್ಲಿ ಗಡಿ ವಿವಾದವನ್ನು ಬಗೆಹರಿಸಿಕೊಳ್ಳಬಹುದೆಂದು ಕಾನೂನಿನಲ್ಲಿ ಅವಕಾಶ ಇದೆ ಎಂಬುದು ಸನ್ಮಾನ್ಯ ಮುಖ್ಯ ಮಂತ್ರಿಗಳಿಗೆ ಗೊತ್ತಿದೆಯೆ?

* ಶ್ರೀ ಬಿ.ಡಿ ಜತ್ತಿ : ಅದು ಚಿಕ್ಕ ಪುಟ್ಟ ಗಡಿ ವಿವಾದಗಳನ್ನು ಬಗೆಹರಿಸಬಹುದು ಮತ್ತು ಅದಕ್ಕೆ ಎರಡೂ ಬದಿಯವರು ಒಪ್ಪಿಕೊಳ್ಳಬೇಕು ಅನಂತರ ಪ್ರಶ್ನೆಯನ್ನು ಲೋಕಸಭೆಯಲ್ಲಿ ತೆಗೆದುಕೊಳ್ಳಬಹುದು.

2 ಘಂಟೆ

* ಶ್ರೀ ವಿ.ಎಸ್. ಪಾಟೀಲ : ಪ್ರಶ್ನೆಯ 'ಬ' ದಲ್ಲಿ ಕೇಳಿದಂತೆ ಯಾವ ಪ್ರದೇಶಗಳೆಂದು ನಾನು ತಿಳಿದುಕೊಳ್ಳಬಹುದೆ?

* ಶ್ರೀ ಬಿ.ಡಿ. ಜತ್ತಿ : ಅದಿನ್ನೂ ಖಚಿತವಾಗಿಲ್ಲ. ಅದನ್ನು ಹೇಳಿಯೇ ಇಲ್ಲ. ಅದಕ್ಕೆಂದೇ ಉಭಯ ಸರಕಾರಗಳ ಮಧ್ಯ ಕೆಲವು ಚರ್ಚೆ ನಡೆದಿದೆ. ಭಾರತ ಸರಕಾರದೊಂದಿಗೆ ಸಹ ನಡೆದಿದೆ.

* ಶ್ರೀ ವಿ.ಎಸ್. ಪಾಟೀಲ : ಪ್ರಶ್ನೆ ಇರುವುದು, ಯಾವ ಪ್ರದೇಶವನ್ನು ಮುಂಬಯಿ ಸರಕಾರ ಕೇಳುತ್ತಿದೆ ಮತ್ತು ಮೈಸೂರು ಸರಕಾರ ಯಾವ ಪ್ರದೇಶವನ್ನು ಕೇಳುತ್ತಿದೆ?

* ಶ್ರೀ ಬಿ. ಡಿ. ಜತ್ತಿ : ಅದನ್ನೆಲ್ಲೂ ಹೇಳಿಲ್ಲ ಮಾನ್ಯರೆ, ಮುಂಬಯಿ ಸರಕಾರವು ಮೈಸೂರು ರಾಜ್ಯದಲ್ಲಿಯ ಕೆಲವು ಪ್ರದೇಶಗಳನ್ನು ಕೇಳಿರಬಹುದು ಅದರಂತೆ ಮೈಸೂರು ಸರಕಾರವೂ ಮುಂಬಯಿ ರಾಜ್ಯದಲ್ಲಿನ ಪ್ರದೇಶಗಳನ್ನು ಕೇಳಿರಬಹುದು, ಆದರೆ ಅಂತಿಮವಾಗಿ ಉಭಯ ರಾಜ್ಯಗಳೂ ಒಪ್ಪಿದ ಅತಿ ಚಿಕ್ಕ ಪುಟ್ಟ ಗಡಿ ವಿವಾದಗಳು.

* ಶ್ರೀ ಜೇ. ಬಿ. ಮಲ್ಲಾರಾಧ್ಯ : ಯಾವ ನಿಶ್ಚಿತ ಹಳ್ಳಿಗಳ ಕುರಿತಾಗಿ ವಿವಾದ ಇದೆ ಎಂಬುದನ್ನಾದರೂ ಮಾನ್ಯ ಮುಖ್ಯ ಮಂತ್ರಿಗಳು ದಯವಿಟ್ಟು ಹೇಳಬಹುದೆ? ಇಡೀ

ಸಂಗತಿಯನ್ನು ಕತ್ತಲೆಯಲ್ಲಿ ಇಟ್ಟಂತಾಗಿದೆ. ಯಾವ ಹಳ್ಳಿಗಳ ಕುರಿತಾಗಿ ಈ ಚಿಕ್ಕ ಪುಟ್ಟ ಹೊಂದಾಣಿಕೆ ಎಂಬುದನ್ನು ನಾನು ಕೇಳುತ್ತಿರುವೆ.

* ಶ್ರೀ ಬಿ.ಡಿ. ಜತ್ತಿ : ಉಭಯ ರಾಜ್ಯ ಸರಕಾರಗಳೂ ನಿರ್ಣಯಕ್ಕೆ ಬಂದಿಲ್ಲ. ನಾನು ನನ್ನ ಅಭಿಪ್ರಾಯಗಳನ್ನು ಕೇಂದ್ರ ಗೃಹ ಮಂತ್ರಿಗಳ ಮುಖಾಂತರ ಮುಂಬಯಿ ಸರಕಾರಕ್ಕೆ ಕಳಿಸಿರುವೆ ಮುಂಬಯಿಯಿಂದಾಗಲೀ, ಕೇಂದ್ರದಿಂದಾಗಲೀ ನನಗೆ ನಿಶ್ಚಿತ ಉತ್ತರ ಬಂದಿಲ್ಲ.

**4 ನೇ ಮಾರ್ಚ್ 1960**

**ಹೊರರಾಜ್ಯಗಳಲ್ಲಿ ಕನ್ನಡ ಮಾತನಾಡುವ ಪ್ರದೇಶಗಳನ್ನು ಮೈಸೂರು ರಾಜ್ಯದಲ್ಲಿ ಸೇರ್ಪಡೆ ಕುರಿತು.**

ಪ್ರಶ್ನೆ **260** : ಶ್ರೀ ಎಂ. ಎಂ. ಪಾಟೀಲ (ಹಡಗಲಿ) : ಸರಕಾರ ಈ ಕುರಿತು ಹೇಳಬಹುದೆ?

ಅ) ಸರಕಾರವು (1) ಆಂಧ್ರ (2) ಕೇರಳ (3) ಮದ್ರಾಸ ಮತ್ತು (4) ಮುಂಬಯಿ ಸರಕಾರಗಳೊಂದಿಗೆ ಸೇರ್ಪಡೆಯಾಗದೆ ಉಳಿದ ಕನ್ನಡ ಹಳ್ಳಿಗಳ ಕುರಿತು ಗಡಿ ವಿವಾದವನ್ನು ಬಗೆಹರಿಸಲು ಪತ್ರ ವ್ಯವಹಾರವನ್ನು ಮಾಡುತ್ತಿದೆಯೆ?

ಬ) ಮೊದಲಿನ ಬಳ್ಳಾರಿ ಜಿಲ್ಲೆಯ ಮೂರು ತಾಲೂಕುಗಳಾದ ಆದೋನಿ, ಆಲೂರು ಮತ್ತು ರಾಯದುರ್ಗ, ಅನಂತಪೂರ ಜಿಲ್ಲೆಯ ಮಡಕಶಿರಾ, ಮುನ್ನಿನ ದಕ್ಷಿಣ ಕನ್ನಡ ಜಿಲ್ಲೆಯ ಕಾಸರಗೋಡು, ಹೊಸೂರು, ಸೊಲ್ಲಾಪೂರ ಜಿಲ್ಲೆಯ ಅಚ್ಚ ಕನ್ನಡ ಪ್ರದೇಶಗಳನ್ನು ಸೇರಿಸಿಕೊಳ್ಳುವ ಪ್ರಶ್ನೆಯನ್ನು ಸರಕಾರ ಎಷ್ಟರ ಮಟ್ಟಿಗೆ ಚಿಂತಿಸುತ್ತಿದೆ ಮತ್ತು ಈ ಪ್ರದೇಶಗಳ ಬಗ್ಗೆ ಅದರ ನಿಲುವೇನು?

ಶ್ರೀ ಬಿ.ಡಿ. ಜತ್ತಿ (ಮುಖ್ಯ ಮಂತ್ರಿಗಳು)

ಅ) ಸಂಬಂಧ ಪಟ್ಟ ರಾಜ್ಯಗಳೊಂದಿಗೆ ಭಾಷಾವಾರು ತಳಹದಿಯ ಮೇಲೆ ಗಡಿ ಹೊಂದಾಣಿಕೆಯ ಕುರಿತು ಚರ್ಚೆ ನಡೆದಿದೆ.

ಬ) ವಿಷಯವು ಇನ್ನೂ ಚರ್ಚೆಯ ಹಂತದಲ್ಲಿದೆ. ಸಾರ್ವಜನಿಕ ಹಿತಾಸಕ್ತಿಯ ದೃಷ್ಟಿಯಿಂದ ಈ ಹಂತದಲ್ಲಿ ವಿವರಗಳನ್ನು ಬಹಿರಂಗಗೊಳಿಸುವುದು ಸಾಧುವಲ್ಲ.

* ಶ್ರೀ ಎಂ.ಎಂ. ಪಾಟೀಲ : ಮೊದಲಿನ ಬಳ್ಳಾರಿ ಜಿಲ್ಲೆಯ ಆದವಾನಿ, ಆಲೂರು ಮತ್ತು ರಾಯದುರ್ಗ ಈ ಮೂರು ತಾಲ್ಲೂಕುಗಳು ಕೇಳಕರ್ ಸಮಿತಿಯ ವರದಿಯ ಪ್ರಕಾರ ಕನ್ನಡ ಪ್ರದೇಶವೆಂದು ಗೊತ್ತು ಮಾಡಿರುವುದು ನಿಜವೆ?

* ಶ್ರೀ ಬಿ.ಡಿ. ಜತ್ತಿ : ಯಾವ ವರದಿಯ ಪ್ರಕಾರ ಹಾಗೆ ಮಾಡಿದೆ ಎಂಬುದು ನನಗೆ ಗೊತ್ತಿಲ್ಲ.

* ಶ್ರೀ ಎಂ.ಎಂ. ಪಾಟೀಲ : ಆಂಧ್ರ ಆಕ್ಟಿನ ಪ್ರಕಾರ ಜಸ್ಟಿಸ್ ವಾಂಛೂ ಅವರು ಕೇಳಕರ ವರದಿಗೆ ಅನುಗುಣವಾಗಿ ತಮ್ಮ ವರದಿಯನ್ನು ಕೊಟ್ಟಿದ್ದಾರೆ ಎಂಬುದು ಸರಕಾರದ ಗಮನದಲ್ಲಿ ಇದೆಯೆ?

* ಶ್ರೀ ಬಿ.ಡಿ. ಜತ್ತಿ : ಹೌದು ಸರ್.

* ಶ್ರೀ ಎಂ.ಎಂ. ಪಾಟೀಲ : ಬಳ್ಳಾರಿಯ ಈ ಕನ್ನಡ ಪ್ರದೇಶದಲ್ಲಿ ಕನ್ನಡ ಮಾತನಾಡ ತಕ್ಕಂಥ ಈ ಇಡಿಯ ಬಳ್ಳಾರಿ ಜಿಲ್ಲೆಯಲ್ಲಿ, ಕನ್ನಡ ಮಾತನಾಡತಕ್ಕಂಥ ಜನರ ಸಂಖ್ಯೆಯು ಕೇವಲ ಅಧಿಕಾರಿಗಳ ಕೈವಾಡದಿಂದ ಕಡಿಮೆಯಾಗುತ್ತಿರುವುದರಿಂದ ಬಳ್ಳಾರಿ ಜಿಲ್ಲೆಯನ್ನು ವಿಭಾಗ ಮಾಡುವಾಗ್ಗೆ ಹತ್ತು ವರುಷಗಳ ಅನಂತರ ಪುನಃ ಈ ವಿಷಯವನ್ನು ಪರಿಶೀಲಿಸಬೇಕೆಂದು ಕೇಳಕರ್ ವರದಿಯಲ್ಲಿ ಹೇಳಿರುವುದು ಸರಕಾರದ ಗಮನದಲ್ಲಿ ಇದೆಯೋ?

* ಶ್ರೀ ಬಿ.ಡಿ. ಜತ್ತಿ : ಅದು ಆರ್ಗನಾಯಿಜೇಶನ್‌ನ ವಿಷಯ ಕೇಳಕರ್ ಅವಾರ್ಡ ಬಗ್ಗೆ ನನಗೆ ಗೊತ್ತಿಲ್ಲ. ನನಗೆ ರಾಜ್ಯ ಪುನರ್ವಿಂಗಡನಾ ಕಾನೂನು ಗೊತ್ತು. ಅದಕ್ಕನುಗುಣವಾಗಿ ಏನಾದರೂ ಮಾಡಬೇಕಿದ್ದರೆ ಭಾರತ ಸರಕಾರದ ಸಲಹೆಯೊಂದಿಗೆ ಮಾಡಬೇಕು.

* ಶ್ರೀ **ಡಾ॥ ಆರ್. ನಾಗನಗೌಡ** : ಈ ಪ್ರಶ್ನೆ ಎಷ್ಟು ಬೇಗ ಪರಿಹಾರವಾಗಬಹುದೆಂಬುದನ್ನು ನನಗೆ ಗೊತ್ತಾಗಬಹುದೆ?

* ಶ್ರೀ ಬಿ.ಡಿ. ಜತ್ತಿ : ಕಾಲಮಿತಿಯನ್ನು ಹಾಕಲು ಸಾಧ್ಯವಿಲ್ಲ!

* ಶ್ರೀ ಎಂ.ಸಿ. ನರಸಿಂಹನ್ : ರಾಜ್ಯಪಾಲರ ಭಾಷಣದಲ್ಲಿ ರಾಜ್ಯ ಪುನರ್ವಿಂಗಡನಾ ಆಕ್ಟಿನನ್ವಯ ನಿರ್ಧಾರಿತ ಗಡಿಯನ್ನು ಬದಲಾಗಿಸಲಾರದು ಅದನ್ನು ಗಣನೆಗೆ ತೆಗೆದುಕೊಂಡಾಗ ಸಧ್ಯದ ಪ್ರಶ್ನೆ ಹೇಗೆ ಉದ್ಭವಿಸುತ್ತದೆ? ಅದು ಅಸಂಗತ ಎನಿಸುವುದಿಲ್ಲವೆ?

* **ಸಭಾಧ್ಯಕ್ಷರು** : ನಿಮ್ಮ ಈ ಅಭಿಪ್ರಾಯವು, ನೀವು ರಾಜ್ಯಪಾಲರ ಭಾಷಣದ ಕುರಿತು ಮಾತನಾಡುವಾಗ ಸಂಗತವೆನಿಸುತ್ತದೆ.

* **ಡಾ॥ ಆರ್. ನಾಗನಗೌಡ** : ಅವಶ್ಯಕತೆ ಇದ್ದಲ್ಲಿ ಸಣ್ಣ ಪುಟ್ಟ ಹೊಂದಾಣಿಕೆಯನ್ನು ಮಾಡಿಕೊಳ್ಳುವುದು ಸರಕಾರದ ಧೋರಣೆಯಾಗಿಲ್ಲವೆ?

* ಶ್ರೀ ಬಿ.ಡಿ. ಜತ್ತಿ : ಹಲವಾರು ಸಲ ನಾನು ಹೇಳಿದಂತೆ ಉಭಯ ರಾಜ್ಯಗಳು ಒಪ್ಪಿದರೆ ಸಣ್ಣ - ಪುಟ್ಟ ಹೊಂದಾಣಿಕೆಗಳನ್ನು ಮಾಡಿಕೊಳ್ಳಲು ಅವಕಾಶವಿದೆ.

* ಶ್ರೀ ವೈ ಮಂಜಯ್ಯಶೆಟ್ಟಿ : ಕಾಸರಗೋಡು ತಾಲ್ಲೂಕು ಮೈಸೂರು ರಾಜ್ಯದಲ್ಲಿ ಸೇರ್ಪಡೆಯಾಗುವುದಕ್ಕಾಗಿ ಸರಕಾರದವರು ಯಾವ ಕ್ರಮವನ್ನು ತೆಗೆದುಕೊಂಡಿದ್ದಾರೆ.

* ಶ್ರೀ ಬಿ.ಡಿ. ಜತ್ತಿ : ಒಮ್ಮತದ ವಿಚಾರ ವಿನಿಮಯ ನಡೆದಿದೆ ಸರ್.

* **ಶ್ರೀ ಜಿ. ವೆಂಕಟೇಗೌಡ** : ಮೈಸೂರು ರಾಜ್ಯಕ್ಕೆ ಸೇರದೇ ಇರತಕ್ಕಂಥ ಮತ್ತು ಮೈಸೂರು ರಾಜ್ಯಕ್ಕೆ ಅಂಥ ಕನ್ನಡ ಪ್ರದೇಶವು ಬರಬೇಕಾಗಿರತಕ್ಕಂಥ ಪ್ರದೇಶಗಳ ಬಗ್ಗೆ ಕ್ರಮ ತೆಗೆದುಕೊಳ್ಳಬೇಕೆಂದು ಯಾರು ಯಾರು ಅರ್ಜಿಗಳನ್ನು ಹಾಕಿಕೊಂಡಿದ್ದಾರೆ?

* **ಶ್ರೀ ಬಿ.ಡಿ. ಜತ್ತಿ** : ಸಾಹಿತ್ಯ ಪರಿಷತ್ತಿನ ಪರವಾಗಿ ಅರ್ಜಿ ಬಂದಿದೆ.

* **ಶ್ರೀ ವಿ.ಎಸ್. ಪಾಟೀಲ** : ಮುಖ್ಯಮಂತ್ರಿಗಳು ಹೇಳುತ್ತಿರುವ ಚಿಕ್ಕ - ಪುಟ್ಟ ಹೊಂದಾಣಿಕೆ ಎಂಬ ಶಬ್ದಗಳ ತೊಡಕು ಏನೆಂಬುದನ್ನು ಹೇಳಬಹುದೆ?

* **ಶ್ರೀ ಬಿ.ಡಿ. ಜತ್ತಿ** : ಎರಡು ರಾಜ್ಯಗಳ ಮಧ್ಯ ಪ್ರಶ್ನೆಯನ್ನು ಚರ್ಚಿಸುತ್ತಿರುವಾಗ ಯಾವುದು ಮೈನರ, ಯಾವುದು ಮೇಜರ್ ಎಂಬುದು ಹೊರಬೀಳುತ್ತದೆ.

* **ಶ್ರೀ ವಿ.ಎಸ್. ಪಾಟೀಲ್** : ಹಾಗೆಂದರೆ, ತಾಲೂಕು, ಹೊಬಳಿ ಅಥವ ಜಿಲ್ಲೆ ಎಂದಾದೀತೆ?

* **ಸಭಾಧ್ಯಕ್ಷರು** : ಯಾವುದು ಮೈನರ್ ಯಾವುದು ಮೇಜರ್ ಎಂಬುದನ್ನು ಅನಂತರ ನಿರ್ಧರಿಸಲಾಗುವುದೆಂದು ಅವರು ಆಗಲೆ ಹೇಳಿದ್ದಾರೆ.

* **ಶ್ರೀ ವಿ.ಎಸ್. ಪಾಟೀಲ** : ರಾಜ್ಯಪಾಲರ ಭಾಷಣದಲ್ಲಿ ಮತ್ತು ಈ ಸದನದಲ್ಲಿ ಕೇವಲ ಚಿಕ್ಕ - ಪುಟ್ಟ ಹೊಂದಾಣಿಕೆಗಳನ್ನು ಮಾತ್ರ ನಿರ್ಧರಿಸಲಾಗುವುದೆಂದು ಖಚಿತವಾಗಿ ಹೇಳಲಾಗಿದೆ, ಆದ್ದರಿಂದ ಮೈನರ್ ಶಬ್ದದ ಅರ್ಥ ಏನು ಎಂಬುದು ತಿಳಿಯಬಲ್ಲೆನೆ?

* **ಶ್ರೀ ಬಿ.ಡಿ. ಜತ್ತಿ** : ಅದು ಒಂದು ಮೈಲೋ ಅಥವ ಎರಡು ಮೈಲುಗಳೋ ಎಂಬುದನ್ನು ಚರ್ಚಿಸಿ ನಿರ್ಧರಿಸಬೇಕು ಅದರ ಅರ್ಥ ಇಡೀ ತಾಲೂಕು ಅಥವ ಜಿಲ್ಲೆ ಅಲ್ಲ.

* **ಶ್ರೀ ಬಿ.ಆರ್. ಸುಂಠಣಕರ** : ಮುಂಬಯಿ ರಾಜ್ಯದಲ್ಲಿಯ ಬಹು ಜನ ಕನ್ನಡ ಮಾತನಾಡುವ ಹಳ್ಳಿಗಳನ್ನು ಮುಂಬಯಿ ಸರಕಾರವು ಟ್ರಾನ್ಸಫರ್ ಮಾಡಲು ಇಚ್ಛೆಯನ್ನು ತೋರಿದ್ದಾರೆಯೆ?

* **ಶ್ರೀ ಬಿ.ಡಿ. ಜತ್ತಿ** : ಈ ವಿಷಯ ಮುಂಬಯಿ ಸರಕಾರಕ್ಕೆ ಗೊತ್ತು.

* **ಶ್ರೀ ಬಿ.ಆರ್. ಸುಂಠಣಕರ** : ಮುಂಬಯಿ ರಾಜ್ಯದಲ್ಲಿಯ ಕನ್ನಡ ಪ್ರದೇಶಗಳಿಗಾಗಿಈ ರಾಜ್ಯವು ಒತ್ತಾಯಿಸುತ್ತಿಲ್ಲ ಯಾಕೆಂದರೆ ಅದು ತನ್ನ ರಾಜ್ಯದಲ್ಲಿಯ ಮರಾಠಿ ಭಾಷೆಯ ಪ್ರದೇಶವನ್ನು ಒಪ್ಪಿಸಬೇಕಾಗುತ್ತದೆ ಅಲ್ಲವೆ?

* **ಶ್ರೀ ಬಿ.ಡಿ. ಜತ್ತಿ** : ಒಪ್ಪಿಸುವ ಅಥವಾ ಗೆಲ್ಲುವ ಪ್ರಶ್ನೆಯೇ ಅಲ್ಲಿ ಇಲ್ಲ. ಇದು ಪರಸ್ಪರ ಹೊಂದಾಣಿಕೆ ಮತ್ತು ತಿಳುವಳಿಕೆ.

* **ಶ್ರೀ ಬಿ.ಆರ್. ಸುಂಠಣಕರ** : ಪಾಟಸ್ಕರ ಅವಾರ್ಡಿನ ಸೂತ್ರಗಳನ್ನು ಸರಕಾರ ಒಪ್ಪಲು ಸಾಧ್ಯವಿದೆಯೇ?

* ಶ್ರೀ ಬಿ.ಡಿ. ಜತ್ತಿ : ಪಾಟಸ್ಕರ ಅವಾರ್ಡು ಮುಂಬಯಿ - ಮೈಸೂರು ರಾಜ್ಯಗಳ ಮಧ್ಯದ ಗಡಿ ವಿವಾದಕ್ಕೆ ಅನ್ವಯಿಸಲು ಬರುವುದಿಲ್ಲ ಎಂಬುದು ಸನ್ಮಾನ್ಯ ಸದಸ್ಯರು ಕಾಳಜಿ ಪೂರ್ವಕ ಅಭ್ಯಸಿಸಿದರೆ ತಿಳಿಯುತ್ತದೆ. ಎರಡು ರಾಜ್ಯಗಳ ಮಧ್ಯ ವಿವಾದವಿದ್ದಾಗ ಸರಕಾರವು ಪಾಟಸ್ಕರ ಅವರನ್ನು ನೇಮಿಸಿತು. ಆಂಧ್ರ ರಾಜ್ಯ ನಿರ್ಮಾಣವಾಗುವ ಸಮಯದಲ್ಲಿ ಒಂದು ಕರಾರನ್ನು ಹಾಕಲಾಗಿತ್ತು. ಕೇವಲ ನಿರ್ವಿವಾದ ಪ್ರದೇಶಗಳನ್ನಷ್ಟೆ ಪುನರ್ನಿರ್ಮಾಣ ರಾಜ್ಯದಲ್ಲಿ ಸೇರಿಸಬೇಕು ಎಂಬುದಾಗಿತ್ತು ಹಾಗಾಗಿ ವಿವಾದಕ್ಕೆಡೆಯಾದ ಪ್ರದೇಶಗಳನ್ನು ಬಿಡಲಾಯಿತು. ಆ ಸಮಯದಲ್ಲಿ ವಿವಾದಕ್ಕೊಳಗಾದ ಪ್ರದೇಶಗಳ ಬಗ್ಗೆ ಉಭಯ ರಾಜ್ಯ ಸರಕಾರಗಳು (1) ಮಧ್ಯಸ್ಥಿಕೆ (2) ಪ್ರತಿಶತ 51 ರಷ್ಟು ಒಂದೆ ಭಾಷೆಯನ್ನಾಡುವ ಪ್ರದೇಶ ಮತ್ತು (3) ಸಂಪರ್ಕ ಈ ವಿಷಯಗಳಲ್ಲಿ ಪರಸ್ಪರ ಒಪ್ಪಿಗೆ ತೋರಿಸಿದ್ದವು ಮತ್ತು ವಿವಾದಗ್ರಸ್ಥ ಪ್ರದೇಶಗಳ ಬಗ್ಗೆ ಪರಸ್ಪರ ಒಪ್ಪಿದವು. ಅಲ್ಲಿ ಈ ಸೂತ್ರವನ್ನು ಅನ್ವಯಿಸಲಾಗಿತ್ತು. ನಮ್ಮ ರಾಜ್ಯದಲ್ಲಿ ಆ ಸೂತ್ರ ಅನ್ವಯ ಆಗುವುದಿಲ್ಲ.

* ಶ್ರೀ ಎಂ. ಮಲ್ಲಿಕಾರ್ಜುನ ಸ್ವಾಮಿ : ಕರ್ನಾಟಕದ ಗಡಿಯಲ್ಲಿರುವ ತಾಳವಾಡಿಯ ಜನರ ಮನವಿಗೆ ಸರಕಾರ ಯಾವ ಕ್ರಮ ಕೈಗೊಂಡಿದೆ? ಅದನ್ನು ಚಿಕ್ಕ - ಪುಟ್ಟ ಹೊಂದಾಣಿಕೆಯ ಅಡಿಯಲ್ಲಿಯೆ ಕ್ರಮ ತೆಗೆದುಕೊಳ್ಳಬಹುದೇ?

* ಶ್ರೀ ಬಿ.ಡಿ. ಜತ್ತಿ : ಸಾಧ್ಯತೆ ಇದೆ.

* ಶ್ರೀ ವಿ.ಎಸ್. ಪಾಟೀಲ : ಪಾಟಸ್ಕರ ಅವಾರ್ಡಿನಲ್ಲಿ ನಿರ್ದಿಷ್ಟ ಸೂತ್ರಗಳನ್ನು ಅಳವಡಿಸಿದೆ ಎಂದು ಇದೀಗ ಮುಖ್ಯ ಮಂತ್ರಿಗಳು ಹೇಳಿದರು. ಚರ್ಚೆಯ ಬದಲಾಗಿ ಈ ಪ್ರದೇಶಗಳನ್ನು ಪಡೆದುಕೊಳ್ಳಲು ಒಂದು ಮೂಲ ತತ್ವವನ್ನು ಕಂಡುಕೊಳ್ಳಬಹುದೆ?

* ಶ್ರೀ ಬಿ.ಡಿ. ಜತ್ತಿ : ಮುಖ್ಯ ತತ್ವ - ಅಲ್ಪ ಹೊಂದಾಣಿಕೆ ಅದು ಉಭಯ ರಾಜ್ಯಗಳ ಒಪ್ಪಿಗೆಯೊಂದಿಗೆ.

* ಶ್ರೀ ವಿ.ಎಸ್. ಪಾಟೀಲ : ಹಾಗೆಂದರೆ ಮರಾಠಿಯೆ?

* ಶ್ರೀ ಬಿ.ಡಿ. ಜತ್ತಿ : ಅದು ಮರಾಠಿ ಎಂದಾದರೆ, ಅದು ಕನ್ನಡವೆಂದೂ ಆಗುವುದಿಲ್ಲ.

* ಶ್ರೀ ಜಿ. ವೆಂಕಟೇಗೌಡ : ಭಾಷಾವಾರು ಪ್ರಾಂತ ರಚನೆಯ ವಿಚಾರದಲ್ಲಿ ಯಾವ ಯಾವ ಪ್ರದೇಶವು ವಿವಾದಾಸ್ಪದ ಆಗಿದೆ ಎಂಬುದನ್ನು ನಿರ್ದಿಷ್ಟವಾಗಿ ತಿಳಿಸುತ್ತೀರಾ?

* ಶ್ರೀ ಬಿ.ಡಿ. ಜತ್ತಿ : ಸನ್ಮಾನ್ಯ ಸದಸ್ಯರಿಗೆ ಗೊತ್ತಿದ್ದಂತೆ ಎರಡು ಆಯೋಗಗಳನ್ನು ನೇಮಿಸಲಾಗಿತ್ತು. ಆಯೋಗಗಳ ಮುಂದೆ ವಿವಾದಗಳನ್ನು ಮಂಡಿಸಿತ್ತು. ಸಂಪೂರ್ಣ ಚರ್ಚೆ ಮತ್ತು ವಿವಾದಗ್ರಸ್ಥ ಪ್ರದೇಶಗಳ ಖುದ್ದು ಪರಿಶೀಲನೆಯ ಅನಂತರ ಆಯೋಗವು ವರದಿಯನ್ನು ಒಪ್ಪಿಸಿತು. ಆ ಬಗ್ಗೆ ಲೋಕಸಭೆಯಲ್ಲಿ ಚರ್ಚೆ ನಡೆಯಿತು. ಅನಂತರವೆ ಆ ಮಸೂದೆ ಕಾನೂನು ಆಯಿತು.

* ಶ್ರೀ ಡಿ. ಅಬ್ದುಲ ರಶೀದ : ಅಲ್ಪ ಹೊಂದಾಣಿಕೆ ಅಡಿಯಲ್ಲಿ ಹೊಸೂರನ್ನು ಗಣಿಸಬಹುದೆ?

* ಶ್ರೀ ಬಿ.ಡಿ. ಜತ್ತಿ : ಎರಡು ರಾಜ್ಯಗಳ ಮಧ್ಯ, ಅದೆಲ್ಲವೂ ಉಭಯ ರಾಜ್ಯಗಳ ಉದ್ದೇಶ ಮತ್ತು ಸಂಬಂಧಗಳನ್ನು ಅವಲಂಬಿಸಿದೆ.

ದಿನಾಂಕ : 14-03-1960

ಮುಂಬಯಿ : ಮೈಸೂರು ರಾಜ್ಯಗಳ ಗಡಿ ಹೊಂದಾಣಿಕೆ ಕುರಿತು ಶ್ರೀ ಎಚ್.ಕೆ. ವೀರಣ್ಣಗೌಡರು ತಂದ ವಿಶೇಷ ಗೊತ್ತುವಳಿ ಚರ್ಚೆಯಲ್ಲಿ ಮಾಡಿದ ಭಾಷಣ.

* ಶ್ರೀ ಬಿ.ಡಿ. ಜತ್ತಿ : ಮಾನ್ಯರೆ ಮರಾಠಿ ಮಾತನಾಡುವ ಈ ಸಭೆಯ ಸನ್ಮಾನ್ಯ ಸದಸ್ಯರು ಎತ್ತಿದ ಅಂಶಗಳನ್ನು ನಾನು ಉದ್ಧರಿಸುತ್ತಿದ್ದೇನೆ. ಇಂಥ ವಾದಗಳನ್ನು ಅವರು ಇದೇ ಮೊದಲ ಸಲ ಎತ್ತುತ್ತಿಲ್ಲ ಎಂದು ನಾನು ಹೇಳಿದೆ. ಫಜಲ್ ಅಲಿ ಆಯೋಗದ ಮುಂದೆಯೂ ಇಂಥ ಅಂಶಗಳನ್ನು ಎತ್ತಲಾಗಿತ್ತು. ಈ ಎಲ್ಲ ಅಂಶಗಳನ್ನು ಫಜಲ ಅಲಿ ಆಯೋಗವು ಗಮನಿಸಿದೆ. ಕರ್ನಾಟಕ ಪ್ರದೇಶದ ಸದಸ್ಯರು ಈ ಅಂಶಗಳಿಗೆ ಪರಿಣಾಮಕಾರಿಯಾದ ಉತ್ತರವನ್ನು ಕೊಟ್ಟಿದ್ದಾರೆ ಮತ್ತು ಈ ವಾದ - ವಿವಾದಗಳನ್ನು ಆಲಿಸಿದ ಮೇಲೆಯೇ, ಚಂದಗಡದ ಹೊರತಾಗಿ ಉಳಿದೆಲ್ಲ ಬೆಳಗಾವಿ ಜಿಲ್ಲೆಯು ಹೊಸ ಮೈಸೂರು ರಾಜ್ಯ ಅಥವ ಕರ್ನಾಟಕದಲ್ಲಿಯೇ ಉಳಿಯಬೇಕೆಂಬ ಇತ್ಯರ್ಥಕ್ಕೆ ಫಜಲ ಅಲಿ ಆಯೋಗವು ಬಂದಿತು. ಈ ಅಂಶಗಳ ಕುರಿತಾಗಿ ವಾದಿಸುವುದರಿಂದ ಯಾವ ಉದ್ದೇಶವೂ ಈಡೇರದೆಂದು ನನಗೆ ಅನಿಸುತ್ತದೆ. ಉಭಯ ಬಣಗಳೂ ಪರಿಣಾಮಕಾರಿಯಾಗಿ ತಂತಮ್ಮ ವಾದಗಳನ್ನು ಮಂಡಿಸಿದ್ದಾರೆ.

ಮಾನ್ಯರೆ, ವಿಸ್ತಾರವಾಗಿ ಹೇಳಲು ಹೋಗದೆ, ನಾನು ನಾಲ್ಕು ಅಥವ ಐದು ಅಂಶಗಳ ಬಗ್ಗೆ ಹೇಳಬಯಸುತ್ತೇನೆ. ಮಾನ್ಯರೆ, ಕರ್ನಾಟಕ ನಿರ್ಮಾಣದ ಬಗ್ಗೆ ನಡೆದ ಚಳುವಳಿ ಹೊಸದೇನೂ ಅಲ್ಲ. ಅದು 1906 ರಲ್ಲಿಯೇ ಪ್ರಾರಂಭವಾಗಿದೆ. ಅಂದಿನಿಂದ ನಮ್ಮ ಜನರು ತಮ್ಮದೇ ಆದ ಪ್ರತ್ಯೇಕ ರಾಜ್ಯಕ್ಕಾಗಿ ಚಳುವಳಿ ಮಾಡುತ್ತಲೇ ಬಂದಿದ್ದಾರೆ. ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿ ಫಾರ್ಮ ಆಗುವ ಮುನ್ನ ಮಹಾರಾಷ್ಟ್ರದ ಸ್ನೇಹಿತರು ಕನ್ನಡ ಗೆಳೆಯರೊಂದಿಗೆ ಕೆಲಸ ಮಾಡುತ್ತಿರುವಾಗ ಮೈಸೂರು ರಾಜ್ಯದಿಂದ ಬೆಳಗಾವಿಯನ್ನು ಮಹಾರಾಷ್ಟ್ರ ರಾಜ್ಯಕ್ಕೆ ಸೇರಿಸಬೇಕು ಎಂಬ ಕುರಿತು ಬೇಡಿಕೆಯನ್ನು ಇಡಬೇಕೆಂಬುದಾಗಿಯೂ ಯೋಚಿಸಿರಲಿಲ್ಲ. ಇಬ್ಬರು ಸದಸ್ಯರ ಒಂದು ಸಮಿತಿಯನ್ನು ನಿಯಮಿಸಲಾಯಿತು. ಅದರಲ್ಲಿ ಶ್ರೀ ಪಂತ ಹಾಗೂ ಶ್ರೀ ಎನ್. ಸಿ. ಕೇಳಕರ ಅವರಿದ್ದರು. ಆಗ ಕರ್ನಾಟಕ ಪ್ರಾಂತೀಯ ಕಾಂಗ್ರೆಸ ಸಮಿತಿಯನ್ನು ನಿರ್ಮಿಸುವಾಗ ಯಾವ ಯಾವ ಭಾಗಗಳು ಅದರಲ್ಲಿ ಸೇರಿಸಬೇಕು ಎಂಬುದನ್ನು ಅವರು ವಿಚಾರಿಸಬೇಕಾಗಿತ್ತು. ಅವರು ಒಂದು ವರದಿಯನ್ನು ಸಲ್ಲಿಸಿದರು. ಅದರಲ್ಲಿ ಅವರು ಬೆಳಗಾವಿ ಮತ್ತು ಕಾರವಾರ ಜಿಲ್ಲೆಗಳನ್ನು ಕರ್ನಾಟಕ ಪ್ರಾಂತೀಯ

ಕಾಂಗ್ರೆಸ್ಸಿನಲ್ಲಿ ಸೇರಿಸಿದರು. ಆ ಸಮಯದಲ್ಲಿ ಒಬ್ಬನೇ ಒಬ್ಬ ಮಹಾರಾಷ್ಟ್ರೀಯನು ಈ ಪ್ರದೇಶಗಳನ್ನು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯಲ್ಲಿ ಸೇರಿಸಬಾರದು ಎಂದು ಹೇಳಲಿಲ್ಲ. ಆಗಣ ದಿನಗಳಲ್ಲಿ ಜನರು ತಂತಮ್ಮಲ್ಲಿ ಬಡಿದಾಡುತ್ತಿರಲಿಲ್ಲ. ಎಲ್ಲ ಜನರೂ ಒಂದೇ ಸಂಘಟನೆಯ ಅಡಿಯಲ್ಲಿ ಕೆಲಸ ಮಾಡುತ್ತಿದ್ದರು ಮತ್ತು ನಿಜವಾಗಿ ಅವರಿಗೆ ನಿಷ್ಕಪಟ ಕೊರಗು ಇದ್ದರೆ ಅವರು ಸಂಬಂಧ ಪಟ್ಟ ಅಧಿಕಾರಿಗಳ ಗಮನಕ್ಕೆ ತರಬಹುದಾಗಿತ್ತು ಮತ್ತು ಅವರು ಅವುಗಳನ್ನು ಮಹಾರಾಷ್ಟ್ರ ಪ್ರಾಂತೀಯ ಕಾಂಗ್ರೆಸ್ಸಿನಲ್ಲಿ ಸೇರಿಸಬಹುದಾಗಿತ್ತು. ಅವರು ಎಂದೂ ಆ ಬೇಡಿಕೆಯನ್ನು ಇಡಲಿಲ್ಲ.

1924 ರಲ್ಲಿ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯಿಂದಲೇ ಅಖಿಲ ಭಾರತ ಕಾಂಗ್ರೆಸ್ ಸಭೆಯು ಬೆಳಗಾವಿಯಲ್ಲಿ ಜರುಗಿತು. ಅದು ಯಾಕೆ ಬೆಳಗಾವಿಯಲ್ಲಿ ಜರುಗಿತು?

* ಶ್ರೀ ವಿ.ಎಸ್. ಪಾಟೀಲ : ಮಾನ್ಯರೆ, ನನಗೆ ಒಂದಿಷ್ಟು ಮಾಹಿತಿ ಬೇಕು, ಸನ್ಮಾನ್ಯ ಮುಖ್ಯ ಮಂತ್ರಿಗಳು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ವತಿಯಿಂದ ಎ.ಆಯ್.ಸಿ.ಸಿ. ಯನ್ನು ವ್ಯವಸ್ಥೆ ಮಾಡಿದುದಾಗಿ ಹೇಳಿದರು. ಆ ಸಮಯದಲ್ಲಿ ಯಾವ ಯಾವ ಜಿಲ್ಲೆಗಳು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯಲ್ಲಿ ಸೇರಿದ್ದುವು? ಈ ಪ್ರದೇಶಗಳಲ್ಲದೆ ಹಿಂದಿನ ಹೈದರಾಬಾದ ಪ್ರದೇಶಗಳೂ ಸೇರಿದ್ದುವೆ?

* ಶ್ರೀ ಬಿ.ಡಿ. ಜತ್ತಿ : ನನ್ನ ಸನ್ಮಾನ್ಯ ಸ್ನೇಹಿತರು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ಘಟನೆ ಯನ್ನು ಓದಿದ್ದರೆ ಈ ಅಂಶಗಳನ್ನೆ ಎತ್ತುತ್ತಿರಲಿಲ್ಲ.ಮಾನ್ಯರೆ, ಬೆಳಗಾವಿ ಜಿಲ್ಲೆಯನ್ನು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ಘಟನೆಯಲ್ಲಿ ಖಂಡಿತವಾಗಿಯೂ ಸೇರಿಸಲಾಗಿತ್ತು. ಬೆಳಗಾವಿಯಲ್ಲಿ ಬಹಿರಂಗ ಸಭೆ ನಡೆದಾಗ ಅದು ಕರ್ನಾಟಕ ಪ್ರದೇಶದಲ್ಲಿತ್ತು ಮತ್ತು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಾನೂನು ಪರಿಧಿಯಲ್ಲಿ ಬೆಳಗಾವಿಗೆ ಒಂದು ಪ್ರಮುಖ ಸ್ಥಾನವಿತ್ತು. ಆ ಸಮಯದಲ್ಲಿ ಒಬ್ಬನೇ ಕಾಂಗ್ರೆಸ್ಸಿಗನೂ ಬೆಳಗಾವಿಯು ಮಹಾರಾಷ್ಟ್ರಕ್ಕೆ ಸೇರಿದ್ದೆಂದೂ ಆದ್ದರಿಂದ ಅದನ್ನು ಮಹಾರಾಷ್ಟ್ರ ಕಾಂಗ್ರೆಸ್ಸಿನಲ್ಲಿ ಸೇರಿಸಬೇಕು ಎಂಬುದಾಗಿ ತಕರಾರನ್ನು ಎತ್ತಲಿಲ್ಲ.

* ಶ್ರೀ **ಬಿ. ವೈಕುಂಠ ಬಾಳಿಗಾ** : ದಕ್ಷಿಣ ಕನ್ನಡದೊಂದಿಗೆ ಬೆಳಗಾವಿಯನ್ನು ಸೇರಿಸಿತ್ತು.

* ಶ್ರೀ ಬಿ.ಡಿ. ಜತ್ತಿ : ದಕ್ಷಿಣ ಕನ್ನಡದ ಬಗ್ಗೆ ವಿವಾದವಿಲ್ಲ. ಆದ್ದರಿಂದ ನಾನು ಆ ವಿಷಯವನ್ನು ಎತ್ತುವುದಿಲ್ಲ. ಮಾನ್ಯರೆ ಮತ್ತೆ 1929 ರಲ್ಲಿ ..........

* ಶ್ರೀ **ಅಧ್ಯಕ್ಷರು** : ಅವರು ಹೇಳುವುದು ಮೈಸೂರು, ಹೈದರಾಬಾದ ಮತ್ತು ಮದ್ರಾಸ್ ಕನ್ನಡ ಪ್ರದೇಶಗಳನ್ನು ಕೆ.ಪಿ.ಸಿ.ಸಿ. ಯಲ್ಲಿ ಸೇರಿಸಿದ್ದರು.

* ಶ್ರೀ ಬಿ.ಡಿ. ಜತ್ತಿ : ಹೌದು ಸರ್, ಅದು ಸಂಸ್ಥಾನೀ ಪ್ರದೇಶವೋ ಅಥವ ಬ್ರಿಟಿಶ್ ಪ್ರದೇಶವೆಂದು ಯಾರೂ ಗಣಿಸಲಿಲ್ಲ. ಕನ್ನಡ ಮಾತನಾಡುವ ಎಲ್ಲ ಪ್ರದೇಶಗಳನ್ನು ಕೆ.ಪಿ.ಸಿ.ಸಿ. ಯಲ್ಲಿ ಸೇರಿಸಲಾಗಿತ್ತು.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ಆಡಳಿತದ ದೃಷ್ಟಿಯಿಂದ ಕಾಂಗ್ರೆಸ್ ಹಾಗೆ ಮಾಡಿತು.

* ಶ್ರೀ ಎಚ್.ಕೆ. ವೀರಣ್ಣಗೌಡ : ಕಾಂಗ್ರೆಸ್ ಪ್ರಾಂತೀಯ ಸಮಿತಿಗೆ ಸಂಬಂಧಿಸಿದಂತೆ ಬೆಳಗಾವಿ, ಧಾರವಾಡ, ಹೈದರಾಬಾದಲ್ಲಿ ಕೆಲವು ಭಾಗ ಮತ್ತು ಹಳೆಯ ಮೈಸೂರು ಎಲ್ಲವುಗಳೂ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ಸಿನ ಪರಿಧಿಯಲ್ಲಿ ಇದ್ದುವು. ಕೆಲವರು ಕೆ.ಪಿ.ಸಿ.ಸಿ. ಸದಸ್ಯರಾಗಿದ್ದರೆ ಇನ್ನು ಕೆಲವರು ಕಾರ್ಯಕಾರೀ ಸಮಿತಿಯಲ್ಲಿದ್ದರು.

* ಶ್ರೀ ಬಿ.ಡಿ. ಜತ್ತಿ : ಸರ್, 1929 ರಲ್ಲಿ ಬೆಳಗಾವಿಯಲ್ಲಿ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಳನವು ಜರುಗಿತು. ಅಲ್ಲಿ ಮಹಾರಾಷ್ಟ್ರದ ಅಗ್ರ ಪಂಕ್ತಿಯ ನಾಯಕರು ಸಭೆಯನ್ನುದ್ದೇಶಿಸಿ ಮಾತನಾಡಿದರು. ಅವರೆಲ್ಲ ಬೆಳಗಾವಿಯು ಕರ್ನಾಟಕದ ಭಾಗವೆಂದು ಸ್ಪಷ್ಟವಾಗಿ ಹೇಳಿದ್ದರು. ಆ ಕುರಿತು ಅವರಿಗೆ ಸಂದೇಹವೇ ಇರಲಿಲ್ಲ. ನನ್ನ ಹತ್ತಿರ ಮರಾಠಿ ಭಾಷಣದ ಪ್ರತಿ ಇದೆ. ಯಾರಿಗಾದರೂ ಬೇಕಿದ್ದರೆ ಈ ಸಭೆಯ ಮಾಹಿತಿಗಾಗಿ ನಾನು ಓದುವೆ.

* ಶ್ರೀ ವಿ.ಎಸ್. ಪಾಟೀಲ : ಅದರಿಂದ ಏನು ಉಪಯೋಗ?

* ಶ್ರೀ ಬಿ.ಡಿ. ಜತ್ತಿ : ಮಾನ್ಯರೆ, ಈ ಹಿನ್ನಲೆಯಲ್ಲಿಯೇ ಈ ಪ್ರಶ್ನೆಯನ್ನು ಚರ್ಚಿಸಲಾಗುತ್ತಿದೆ ಮತ್ತು ಗಮನಿಸುತ್ತಿದ್ದೇವೆ. ಫಜಲ್ ಅಲಿ ಆಯೋಗವು ಏನನ್ನು ಚರ್ಚಿಸಿತು, ವರದಿ ಮಾಡಿತು ಮತ್ತು ಇದನ್ನು ಹೊಸ ಮೈಸೂರು ರಾಜ್ಯದಲ್ಲಿ ಸೇರಿಸಬೇಕೆಂದು ನಿರ್ಧರಿಸಿತು. ಅದುವೆ ಕರ್ನಾಟಕ ರಾಜ್ಯ ಆದ್ದರಿಂದ ಮತ್ತೆ-ಮತ್ತೆ ಈ ಅಂಶಗಳನ್ನು ಎತ್ತುವುದರಲ್ಲಿ ಯಾವ ಪ್ರಯೋಜನವೂ ಇಲ್ಲ.

* ಶ್ರೀ ಟಿ. ತಾರೇಗೌಡ : ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆಯನ್ನು ಯಾರು ವಹಿಸಿದ್ದರು ಸರ್?

* ಶ್ರೀ ಬಿ.ಡಿ. ಜತ್ತಿ : ಮಹಾತ್ಮ ಗಾಂಧಿ ಅವರು ಅಧ್ಯಕ್ಷತೆ ವಹಿಸಿದ್ದರೆಂದು ಸನ್ಮಾನ್ಯ ಕಾಂಗ್ರೆಸ್ ಸದಸ್ಯರಿಗೆಯೇ ನಾನು ಹೇಳುವ ಅಗತ್ಯ ಇಲ್ಲ.

ಮಾನ್ಯರೆ,

ಲೋಕಸಭೆಯಲ್ಲಿ ಮಸೂದೆಯನ್ನು ಮಂಡಿಸಿದಾಗ ಈ ಪ್ರಶ್ನೆಯನ್ನು ಮುಂಬಯಿ ವಿಧಾನ ಸಭೆಯಲ್ಲೂ ಚರ್ಚಿಸಲಾಗಿದೆ. ಆ ಸಮಯದಲ್ಲೂ ಇವೇ ಅಂಶಗಳನ್ನು ಎತ್ತಲಾಗಿತ್ತು ಮತ್ತು ಇದೇ ಉತ್ತರಗಳನ್ನು ಕೊಡಲಾಗಿತ್ತು. ಕೊನೆಗೆ ಲೋಕಸಭೆಯಲ್ಲೆ ಈ ಪ್ರಶ್ನೆಯನ್ನು ಗಮನಿಸಲಾಯಿತು. ಮಹಾರಾಷ್ಟ್ರದ ಸ್ನೇಹಿತರು ತಿದ್ದುಪಡಿಯನ್ನು ಮಂಡಿಸಿದರು. ಆದರೆ ಆ ತಿದ್ದುಪಡಿಗಳಲ್ಲಿ ಕೆಲವನ್ನು ಹಿಂತೆಗೆದುಕೊಳ್ಳಲಾಯಿತು ಇನ್ನು ಕೆಲವು ಬಿದ್ದುಹೋದುವು.

ಕೊನೆಗೆ ಲೋಕಸಭೆಯಲ್ಲಿ ಕಾನೂನು ಆಯಿತು. ಇಂದು ಗಮನಿಸಬೇಕಾದ ಒಂದೇ ಒಂದು ಅಂಶವೆಂದರೆ, ಗೃಹಮಂತ್ರಿಗಳು ಮಸೂದೆಯನ್ನು ಮಂಡಿಸುವಾಗ ಅಲ್ಪ ಹೊಂದಾಣಿಕೆಯನ್ನು ಉದ್ಧರಿಸಿದರು. ಅದು ಕೂಡ ಪ್ರಶ್ನೆಯ ವಿಭಾಗೀಯ ಕೌನ್ಸಿಲ್‌ನಲ್ಲಿ ಚರ್ಚೆಯಾಗಬೇಕು ಮತ್ತು ಅದಕ್ಕೆ ಸಂಬಂಧಪಟ್ಟ ರಾಜ್ಯಗಳು ಒಪ್ಪಬೇಕು. ಈ ಅಂಶವೇ ಇಂದು ಚರ್ಚೆಯಾಗುತ್ತಿದೆ. ಅಷ್ಟರ ಮಟ್ಟಿಗೆ ಮೈಸೂರು ಸರಕಾರವು ಈ ಪ್ರಶ್ನೆಯನ್ನು ಗಮನಿಸಲು ಸಾಧ್ಯವಿದೆ. ಇಲ್ಲವಾದಲ್ಲಿ ಕಟ್ಟು ನಿಟ್ಟಾಗಿ ಕಾನೂನಿನ್ವಯ ನನ್ನ ಸ್ನೇಹಿತರಾದ ಶ್ರೀ ಜೆ.ಬಿ. ಮಲ್ಲಾರಾಧ್ಯರು ಹೇಳಿದಂತೆ ಈ ಸಭೆಯಲ್ಲಿ ಚರ್ಚೆಗೆ ಅವಕಾಶವೇ ಇಲ್ಲ. ಗೊತ್ತುವಳಿಯನ್ನು ಮಂಡಿಸಿದ ಸದಸ್ಯರೇ ಭರವಸೆ ನೀಡಿದಂತೆ ಮತ್ತು ಎರಡು ರಾಜ್ಯಗಳ ಮಧ್ಯದ ಅದು ಮುಂಬಯಿ ಆಗಿರಲಿ ಬೇರೆ ರಾಜ್ಯವಾಗಿರಲಿ ಚಿಕ್ಕ - ಪುಟ್ಟ ಗಡಿ ಹೊಂದಾಣಿಕೆಯಲ್ಲಿ ಉತ್ಸುಕರಾಗಿದ್ದರಿಂದ, ಉಭಯ ರಾಜ್ಯಗಳು ಪರಸ್ಪರ ತಿಳುವಳಿಕೆ ಮತ್ತು ನಿರ್ಧಾರಗಳೊಂದಿಗೆ ಬಂದರೆ ನಾವು ಸರಕಾರದ ಪರವಾಗಿ ಹೇಳಬಲ್ಲೆವು. ಈ ರಾಜ್ಯ ಸರಕಾರದ ಪರವಾಗಿ ಹೇಳಬಯಸುವುದೆಂದರೆ, ಮೈಸೂರು ಸರಕಾರವು ಒಂದು ಸೂಚನೆಯನ್ನು ಮಾಡಿದೆ. ನಾಲ್ಕು ಜನರ ಒಂದು ಸಮಿತಿಯನ್ನು ನಿಯಮಿಸಬೇಕು. ಅದರಲ್ಲಿ ಇಬ್ಬರು ಮೈಸೂರಿನಿಂದ ಇನ್ನಿಬ್ಬರು ಮುಂಬಯಿ ಸರಕಾರದ ಪ್ರತಿನಿಧಿಗಳು ಇರಬೇಕು. ಈ ಪ್ರತಿನಿಧಿಗಳು ಪರಸ್ಪರ ಸಮಾಲೋಚಿಸಿ ಚಿಕ್ಕ-ಪುಟ್ಟ ಗಡಿ ಹೊಂದಾಣಿಕೆ ಕುರಿತು ಒಂದು ನಿರ್ಣಯಕ್ಕೆ ಬರಬೇಕು. ಅಂಥ ಅಂಶಗಳನ್ನು ಅವರು ಸಂಬಂಧ ಪಟ್ಟ ಮುಖ್ಯ ಮಂತ್ರಿಗಳ ಎದುರು ಮಂಡಿಸಬೇಕು. ಅವರು ಅವುಗಳನ್ನು ಒಪ್ಪಿದರೆ ಅಂಥವುಗಳನ್ನು ಸ್ವೀಕರಿಸಬೇಕು. ನಾಲ್ಕು ಜನರ ಸಮಿತಿಯಲ್ಲಿ ಒಂದು ವೇಳೆ ಒಪ್ಪದಿದ್ದರೆ, ಅಂಥ ಅಂಶಗಳನ್ನು ಕೈ ಬಿಡಬೇಕು. ಈ ಪ್ರಸ್ತಾವನೆಯನ್ನು ಮೈಸೂರು ಸರಕಾರವು ಕಳಿಸಿದೆ. ಇಂದಿನವರೆಗೂ ಮುಂಬಯಿ ಸರಕಾರದಿಂದ ಸಮ್ಮತಿ ಬಂದಿಲ್ಲ. ಇದಿಷ್ಟು ಸಂಗತಿ ಪ್ರಸ್ತಾವನೆಯನ್ನು ಭಾರತ ಸರಕಾರದ ಮುಖಾಂತರ ಮುಂಬಯಿ ಸರಕಾರಕ್ಕೆ ಕಳಿಸಿದೆ.

ಇನ್ನು ಮರಾಠಿ ಮತ್ತು ಕನ್ನಡ ಮಾತನಾಡುವ ಪ್ರತಿಶತ ಜನರ ಬಗ್ಗೆ ಹೇಳುವೆ. ನಾನು ಕೂಡ ಮುಂಬಯಿ ಸರಕಾರದಲ್ಲಿ ಉಪಮಂತ್ರಿಯಾಗಿದ್ದೆ. 1951 ರಲ್ಲಿ ಜನಗಣತಿಯನ್ನು ಮಾಡಲಾಯಿತು. ಆ ಸಮಯದಲ್ಲಿ ಬೆಳಗಾವಿ ನಗರ ಸಭೆಯು ನೇಮಿಸಿದ ಗಣತಿದಾರರ ಬಗ್ಗೆ ಅನೇಕ ದೂರುಗಳು ಬಂದುವು. ನಗರ ಸಭೆಯು ಒಟ್ಟು 79 ಗಣತಿದಾರರನ್ನು ನೇಮಿಸಿತ್ತು. ಆ 79 ರಲ್ಲಿ 73 ಜನ ಮರಾಠಿ ಮಾತನಾಡುವ ಗಣತಿದಾರರಾಗಿದ್ದರು. ಮುಂಬಯಿ ಸರಕಾರಕ್ಕೆ ಅನೇಕ ತಕರಾರುಗಳು ಬಂದುವು. ಸನ್ಮಾನ್ಯ ಶ್ರೀ ದಾತಾರ ಅವರು ಆಗಿನ್ನು ಮಂತ್ರಿಗಳಾಗಿರಲಿಲ್ಲ. ಅವರು ಕೂಡ ದೂರನ್ನು ಕಳಿಸಿದ್ದರು. ಇದನ್ನೆಲ್ಲ ಸರಕಾರವು ಗಮನಿಸಿತು ಮತ್ತು ಅದರ ಫಲಶ್ರುತಿ ಎಂದರೆ, ಅಂದಿನ ರಾಜ್ಯ ಜನಗಣತಿ ಆಯುಕ್ತರಾದ [ Census Commissioner ] ಶ್ರೀ ಬೋಮೆನ್ ಅವರು ಸ್ವತಃ ಬೆಳಗಾವಿಗೆ ಬಂದರು. ಅವರು ಇಡೀ ಫೈಲನ್ನು ನೋಡಿದರು ಮತ್ತು ಆ ಗಣತಿ ಪುಸ್ತಕದಲ್ಲಿ ಟಿಪ್ಪಣಿ ಮಾಡುತ್ತ

ಅಧಿಕೃತ ಎಂದು ತೆಗೆದುಕೊಳ್ಳಬಾರದು ಎಂದು ಬರೆದರು. ಆದ್ದರಿಂದ ಪ್ರತಿಶತ ಸಂಖ್ಯೆಗಳು ಅಧಿಕವಾಗಿವೆ ಅಥವ ಕಡಿಮೆಯಾಗಿವೆ ಎಂದು ಹೇಳುವುದರಲ್ಲಿ ಯಾವ ಅಂಶವಿದೆ? ನನಗಂತೂ ಗೊತ್ತಾಗಲೊಲ್ಲದು. ಇದು ನಿಜ ಸಂಗತಿ, ಸತ್ಯ ಘಟನೆ. ಇದರ ಮೇಲೆ ಯಾವ ವಾದವೂ ಇರಕೂಡದು. (ಮಧ್ಯಂತರ ಗದ್ದಲ) ಸನ್ಮಾನ್ಯ ಸದಸ್ಯರು ಗಣತಿ ಪುಸ್ತಕವನ್ನು ನೋಡಿದರೆ - ಸಂಗತಿಯನ್ನು ಸ್ವೀಕರಿಸಬೇಕಾಗುತ್ತದೆ. ಅದರಲ್ಲಿ ಸೆನ್ಸಸ್ ಕಮೀಶನರರ ಟಿಪ್ಪಣಿ ಇದ್ದರೆ, ಅದನ್ನೂ ಸತ್ಯವೆಂದು ಸ್ವೀಕರಿಸಬೇಕಾಗುತ್ತದೆ. ಇವುಗಳು ನಡೆದ ಸಂಗತಿಗಳು.

ಈ ಗೊತ್ತುವಳಿಯನ್ನು ಚರ್ಚಿಸುತ್ತಿರುವಾಗ, ಮರಾಠಿ ಮಾಡನಾಡುವ ಸನ್ಮಾನ್ಯ ಸದಸ್ಯರು ಒಂದೆರಡು ಅಂಶಗಳನ್ನು ಎತ್ತಿದ್ದಾರೆ. ಅವುಗಳ ಬಗ್ಗೆ ಹೇಳಿ ನನ್ನ ಮಾತು ಮುಗಿಸುವೆ. ಶ್ರೀ ಬಲವಂತರಾವ್ ಅವರು ಬೀದರ ಜಿಲ್ಲೆಯ ಬಾಲಕಿಯರ ಮಾಧ್ಯಮಿಕ ಶಾಲೆಯೊಂದರಲ್ಲಿ ಮರಾಠಿ ವರ್ಗವನ್ನು ಮುಚ್ಚಲಾಗಿದೆ ಎಂದು ಹೇಳಿದರು. ನಾನು ಈ ವಿಷಯದಲ್ಲಿ ವಿಚಾರಿಸಿದೆ. ಅವರು ಹೇಳಿದ್ದು ಸರಿಯಲ್ಲ ಎಂದು ತಿಳಿಯಿತು. ಇತ್ತೀಚೆಗಷ್ಟೆ ಶಿಕ್ಷಣ ಮಂತ್ರಿಗಳು ಬೀದರಿಗೆ ಹೋಗಿದ್ದರು.

ಶ್ರೀ ಬಲವಂತರಾವ : ನಾನು ಹೇಳಿದ್ದು ಗೌರಾದಲ್ಲಿ ಮರಾಠಿ ಶಾಲೆಗಳನ್ನು ನಿಲ್ಲಿಸಿದ್ದಾರೆ ಎಂದು.

ಶ್ರೀ ಬಿ. ಡಿ. ಜತ್ತಿ : ಗೌರಾದದಲ್ಲೊ ಅಥವಾ ಬೇರೆ ಯಾವುದೇ ಇನ್ನಿತರ ಪ್ರದೇಶಗಳಲ್ಲೊ, ನನ್ನ ಮಾಹಿತಿ ಸರಿಯಾಗಿದೆ. ಶಿಕ್ಷಣ ಮಂತ್ರಿಗಳು ಈ ಮಾಧ್ಯಮಿಕ ಶಾಲೆಗಳಿಗೂ ಬೇಟಿ ಕೊಟ್ಟಿದ್ದಾರೆ. ಅದರಲ್ಲೂ ಬಾಲಿಕೆಯರ ಮಾಧ್ಯಮಿಕ ಶಾಲೆಗಳಿಗೆ ಹೋಗಿ ಬಂದಿದ್ದಾರೆ. ಈ ಕುರಿತು ನಾನು ವಿಚಾರಿಸಿದಂತೆ, ಬಾಲಕರ ಅಥವ ಬಾಲಿಕೆಯರ ಯಾವುದೇ ಶಾಲೆಗಳಲ್ಲಿ ಮರಾಠಿ ಕಲಿಸುವುದನ್ನು ನಿಲ್ಲಿಸಿಲ್ಲ ಎಂದು ಅವರು ನನಗೆ ಹೇಳಿದ್ದಾರೆ. ಇನ್ನೂ ಮುಂದುವರಿದು ಹೇಳಬಹುದಾದರೆ ಮಾಧ್ಯಮಿಕ ಅಥವ ಪ್ರಾಥಮಿಕ ಶಾಲೆಗಳಿಗೆ ನಿರ್ದಿಷ್ಟ ಸಂಖ್ಯೆ ವಿದ್ಯಾರ್ಥಿಗಳು ಹೋಗಲು ಬಯಸಿದರೆ, ಅದಕ್ಕೆ ಬೇಕಾಗುವ ಶಿಕ್ಷಕರನ್ನು ಮಂಜೂರು ಮಾಡಲು ಸರಕಾರ ಉದಾರ ಧೋರಣೆಯನ್ನು ಹೊಂದಿದೆ. ಹೊಸ ಮೈಸೂರು ಸರಕಾರ ರಚಿತವಾದ ಮೇಲಿನ ಶಾಲೆಗಳನ್ನು ನೀವು ನೋಡಿದರೆ, ಮುಂಬಯಿಯಿಂದ ಬಂದ ಮೇಲೆ ಸಾಕಷ್ಟು ಮರಾಠಿ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿದ್ದೇವೆ. ಇದರಲ್ಲಿ ಯಾರಿಗಾದರೂ ಸಂಶಯವಿದ್ದರೆ ನಾಳೆಯೇ ನಾನು ಸಂಖ್ಯೆಗಳನ್ನು ಕೊಡಬಲ್ಲೆ.

ಶಿಕ್ಷಕರ ತರಬೇತಿ ಕಾಲೇಜು ಬಗ್ಗೆ ಹೇಳಬೇಕೆಂದರೆ, ವಡಗಾಂವಿನಲ್ಲಿ ಒಂದು ಕಾಲೇಜಿದೆ. ಆ ಶಿಕ್ಷಕರ ತರಬೇತಿ ಕಾಲೇಜು ಮರಾಠಿ ಶಿಕ್ಷಕರಿಗಾಗಿಯೇ ಇದೆ. ಅಲ್ಲಿ ಕಲಿಸುವ ವ್ಯವಸ್ಥೆ ಮರಾಠಿ ಮಾಧ್ಯಮದಲ್ಲೇ ಇದೆ. ಸರಕಾರ ಅದಕ್ಕೆ ನಿರಂತರವಾಗಿ ಅನುದಾನವನ್ನು ನೀಡುತ್ತದೆ. ಮರಾಠಿ ಶಿಕ್ಷಕರ ತರಬೇತಿಯ ಆ ಕಾಲೇಜಿನ ಬಗ್ಗೆ ಸರಕಾರಕ್ಕೆ ಕಾಳಜಿ ಇರದಿದ್ದರೆ ಅದು ಅನುದಾನವನ್ನು ನೀಡುತ್ತಿರಲಿಲ್ಲ. ಆ ಕಾಲೇಜಿನ ಕಟ್ಟಡವನ್ನು

ಖರೀದಿಸಲು 25 ಸಾವಿರ ರೂಪಾಯಿಗಳ ಪ್ರಸ್ತಾವನೆಯೂ ಸರಕಾರದ ಮುಂದೆ ಇದೆ. ಕಟ್ಟಡವನ್ನು ಖರೀದಿಸುವ ಯೋಚನೆಯೂ ಸರಕಾರಕ್ಕಿದೆ. ಅಧಿಕ ಸಂಖ್ಯೆಯ ಮರಾಠಿ ಶಿಕ್ಷಕರು ಬೇಕೆಂದು ಇತ್ತೀಚಿಗಷ್ಟೆ ಜನರಿಂದ ಅಹವಾಲು ಬಂದಿದೆ. ಜಮಖಂಡಿ ಶಿಕ್ಷಕರ ತರಬೇತಿ ಕಾಲೇಜಿನಲ್ಲಿ ಒಂದು ಶಾಖೆಯನ್ನು ಪ್ರಾರಂಭಿಸಬೇಕೆಂದೂ ಸರಕಾರ ನಿರ್ಧರಿಸಿದೆ. ಒಂದು ವರುಷದಿಂದ ಮರಾಠಿ ಶಿಕ್ಷಕರಿಗೆ ತರಬೇತಿ ಕೊಡಲು ಅಲ್ಲಿ ವ್ಯವಸ್ಥೆಯನ್ನೂ ಮಾಡಲಾಗಿದೆ.

ನಾನು ಇನ್ನೂ ಒಂದು ನಿದರ್ಶನವನ್ನು ಕೊಟ್ಟು ನನ್ನ ಮಾತನ್ನು ಮುಗಿಸುವೆ. ನಾವು ಮುಂಬಯಿ ರಾಜ್ಯದಲ್ಲಿದ್ದಾಗ, ಆ ಸಮಯದಲ್ಲಿ ಸಾಂಗಲಿ ಸಂಸ್ಥಾನವು ಮುಂಬಯಿ ರಾಜ್ಯದಲ್ಲಿ ವಿಲೀನವಾಯಿತು. ಬೆಳಗಾವಿ ಜಿಲ್ಲೆಯಲ್ಲಿ ಚಿಂತಾಮಣರಾವ ಮಾಧ್ಯಮಿಕ ಶಾಲೆಯೊಂದು ಇದೆ. ಆ ಮಾಧ್ಯಮಿಕ ಶಾಲೆಯ ಕಟ್ಟಡವನ್ನು ಕಟ್ಟಲು ಸಾಂಗಲಿಯ ರಾಜಾ ಸಾಹೇಬರು 80,000-00 ರೂಪಾಯಿಗಳಷ್ಟು ದೇಣಿಗೆಯನ್ನು ನೀಡಿದ್ದರು, ಆದರೆ ಈ ದೇಣಿಗೆಯನ್ನು ಬೇರೆ ಉದ್ದೇಶಗಳಿಗಾಗಿ ಬಳಸಿ, ಮುಂಬಯಿ ಸರಕಾರವು ಈ ಮಾಧ್ಯಮಿಕ ಶಾಲೆಗೆ ಏನನ್ನೂ ಕೊಡಲಿಲ್ಲ. ಅಲ್ಲಿಯ ಜನರು ಮತ್ತೆ - ಮತ್ತೆ ಕೇಳಿದಾಗಲೂ ಸರಕಾರ ಸ್ಪಂದಿಸಲಿಲ್ಲ ಹಾಗೆ ಕೇಳಿದವರಲ್ಲಿ ನಾನೂ ಒಬ್ಬನಾಗಿದ್ದೇನೆ. ಯಾಕೆಂದರೆ ನಾನು ವಿಲೀನ ದಕ್ಷಿಣ ಸಂಸ್ಥಾನಗಳ ಸದಸ್ಯನಾಗಿದ್ದೆ. ನಾವು ಬಡಿದಾಡಿದೆವಾದರೂ ಹಣ ಪಡೆಯಲು ಸಾಧ್ಯವಾಗಲಿಲ್ಲ. ಅದು ಸಾಧ್ಯವಿಲ್ಲ ಎಂದೇ ಅವರು ಹೇಳಿದರು. ಮೈಸೂರು ರಾಜ್ಯ ನಿರ್ಮಾಣ ಆದ ಮೇಲೆ, ಮೈಸೂರು ಸರಕಾರ ಆ ಶಾಲೆಗೆ 80,000-00 ರೂಪಾಯಿಗಳನ್ನು ಮಂಜೂರು ಮಾಡಿದೆ. ಇಷ್ಟೆಲ್ಲ ಮಾಡಿಯೂ, ಮರಾಠಿ ಭಾಷೆಯನ್ನು ನಿರ್ಲಕ್ಷಿಸಲಾಗುತ್ತಿದೆ. ಮೈಸೂರು ಸರಕಾರ ಅನುದಾನ ನೀಡಿಲ್ಲ ಅಥವ ಮರಾಠಿ ವಿದ್ಯಾರ್ಥಿಗಳಿಗೆ ಮರಾಠಿಯಲ್ಲೆ ಕಲಿಸಲು ಅದು ಸಹಾಯ ಮಾಡುತ್ತಿಲ್ಲ ಎಂದು ಯಾರಾದರೂ ಹೇಳಿದರೆ, ಅವರನ್ನು ನಂಬಿಸಲು ಬೇರೆ ವಾದಗಳೇನೂ ಇಲ್ಲವೆಂದು ನಾನು ಭಾವಿಸುತ್ತೇನೆ.

* ಶ್ರೀ ಎಂ.ಸಿ. **ನರಸಿಂಹನ್** : ಅಂಥದೇ ಸಹಾಯವನ್ನು ತೆಲಗು, ತಮಿಳು ಮತ್ತು ಉರ್ದು ಶಾಲೆಗಳಿಗೂ ನೀಡುವುದಾಗಿ ನಾನು ಭಾವಿಸುವೆ.

* ಶ್ರೀ ಬಿ.ಡಿ. ಜತ್ತಿ : ಯಾವುದೇ ಭಾಷೆಗಳ ಮಧ್ಯ ನಾವು ತಾರತಮ್ಯ ಮಾಡುವುದಿಲ್ಲ. ಇಪ್ಪತ್ತು ಅಥವ ಅದಕ್ಕಿಂತ ಅಧಿಕ ವಿದ್ಯಾರ್ಥಿಗಳು ಒಂದು ಭಾಷೆಯಲ್ಲಿ ಕಲಿಯಲು ಮುಂದೆ ಬಂದರೆ, ನಾವು ಅವರ ಮಾತೃ ಭಾಷೆಯ ಮಾಧ್ಯಮದಲ್ಲೆ ಕಲಿಸಲು ವರ್ಗಗಳನ್ನು ಪ್ರಾರಂಭಿಸುತ್ತೇವೆ. ಅದು ತೆಲುಗಾಗಿರಲಿ, ತಮಿಳಾಗಿರಲಿ ಅಥವ ಉರ್ದು ಆಗಿರಲಿ ನಾವು ಅದರಲ್ಲಿ ಯಾವ ತಾರತಮ್ಯವನ್ನು ಮಾಡುವುದಿಲ್ಲ ಎಂದು ಸ್ಪಷ್ಟವಾಗಿ ಹೇಳಬಯಸುವೆ.

ನನ್ನ ಸ್ನೇಹಿತರು ಚಳುವಳಿಯ ಕುರಿತಾಗಿ ಸಾಕಷ್ಟು ಹೇಳಿದರು. ನಾನು ಶ್ರೀ ಪಾಟೀಲರನ್ನು ಹೆಸರಿಸುವುದಿಲ್ಲ. ಶ್ರೀ ಸುಂಠಣಕರ ಅವರು ಈ ಸಭೆಯಲ್ಲಿ ತಾವು ಮತ್ತು

ಸಮಿತಿಯವರು (ಮ.ಏ.ಸ.) ಏನೆಲ್ಲ ಮಾಡುತ್ತಿರುವರೋ ಅದೆಲ್ಲ ಗಾಂಧೀ ಪ್ರಣೀತ ಎಂದು ತೋರಿಸಿ ಕೊಡಬೇಕೆನ್ನುತ್ತಾರೆ, ಆದರೆ ಅದು ಹಾಗಿಲ್ಲ. ನಾನಿದನ್ನು ತುಂಬ ಆತ್ಮ ಸಂಯಮದಿಂದ ಹೇಳುತ್ತಿದ್ದೇನೆ. ಅವರು ಹೇಳುತ್ತಿರುವುದು ಸರಿಯಲ್ಲ. ಅದಕ್ಕಾಗಿ ನಾನೊಂದು ನಿದರ್ಶನವನ್ನು ನೀಡಬಲ್ಲೆ. ಇತ್ತೀಚೆಗಷ್ಟೇ ನಾನು ಭೂಕಂದಾಯ ವಸೂಲಿಯ ಬಗ್ಗೆ ಹೇಳುತ್ತಿರುವಾಗ ಜನರು ಕಂದಾಯವನ್ನು ಅಧಿಕಾರಿಗಳಿಗೆ ಕೊಡಲು ಬಯಸುತ್ತಿದ್ದರು ಎಂದು ಹೇಳಿದೆ. ಮತ್ತು ಈ ಸಂದರ್ಭದಲ್ಲಿ 54 ಪೋಲಿಸ ಪೇದೆಗಳು, 5 ಪೋಲಿಸ ಅಧಿಕಾರಿಗಳು ಮತ್ತು ಇಬ್ಬರು ಪಂಚಾಯತಿ ಅಧಿಕಾರಿಗಳು ಘಾಯಗೊಂಡರು, ಐವರು ಮಹಾರಾಷ್ಟ್ರ ಏಕೀಕರಣ ಸಮಿತಿಯ ಸದಸ್ಯರೂ ಘಾಯಗೊಂಡರು. ಅವರೆಲ್ಲ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದರು ಎಂದು ಹೇಳಿದ್ದೆ ನನ್ನ ಸನ್ಮಾನ್ಯ ಸ್ನೇಹಿತರಾದ ಶ್ರೀ ಬಿರ್ಜೆ ಮತ್ತು ಶ್ರೀ ಸಾಮಜಿ ಅವರು ಅಲ್ಲಿ ಇರಲಿಲ್ಲ ಎಂದು ತೀರ ಇತ್ತೀಚೆಗಷ್ಟೆ ಹೇಳಲಾಗಿತ್ತು. ಜಿಲ್ಲಾಧಿಕಾರಿಗಳು ಡಿ.ಎಸ್.ಪಿ. ಯ ಸಹಾಯದೊಂದಿಗೆ ಭೂಕಂದಾಯವನ್ನು ವಸೂಲಿ ಮಾಡುತ್ತಿರುವಾಗ ಅವರು ಅಲ್ಲಿದ್ದರು. ಅವರು ಆ ಹಳ್ಳಿಯಲ್ಲಿ ಇದ್ದರು. ಆದರೆ ಗೋಲಿಬಾರಿನ ಘಟನೆ ನಡೆದಾಗ ಅವರು ಬೆಳಗಾವಿಯಿಂದ ಕಣ್ಮರೆಯಾದರು. ಅವರ ಹೇಳಿಕೆ ಸರಿಯಲ್ಲ ಮತ್ತು ಸತ್ಯದಿಂದ ಬಹು ದೂರ ಇದೆ ಎಂದಷ್ಟೇ ಹೇಳಬಯಸುವೆ. ಅವರು ಅಹಿಂಸಾ ಮಾರ್ಗದಲ್ಲಿ ಚಳುವಳಿಯನ್ನು ಮಾಡುತ್ತಿದ್ದಾರೆಂದು ಈ ಸಭೆಯಲ್ಲಿ ವಾದ ಮಾಡುವುದರಲ್ಲಿ ಯಾವ ಅರ್ಥವೂ ಇಲ್ಲ. ಅವರು ಹಾಗೆ ಮಾಡುತ್ತಿಲ್ಲ. ಜನರು ಚಳುವಳಿಯನ್ನು ಮಾಡುತ್ತಿಲ್ಲ. ಚಳುವಳಿ ಮಾಡುವ ಮನಸ್ಸು ಅವರಿಗಿಲ್ಲ. ಗಡಿ ಪ್ರದೇಶದ ಹಳ್ಳಿಗಳ ಜನರು ಭೂಕಂದಾಯವನ್ನು ಕೊಡುತ್ತಾರೆ ಎಂದು ನಾನು ಹೇಳುವೆ. ಕೆಲವರು ತಾವಾಗಿಯೇ ಬಂದು ಕೊಟ್ಟಿದ್ದಾರೆ. ಆ ಸಮಯದಲ್ಲಿ ಖಾತೇದಾರರು ಗುಂಪುಗಟ್ಟಿಲೆ ಬಂದು ಕೊಟ್ಟಿದ್ದಾರೆ. ಎಂ.ಇ.ಎಸ್. ನವರಿಂದಾಗಿ ಅವರಿಗೆ ಬರಲಾಗಲಿಲ್ಲ ಎಂದು ಅವರು ಜಿಲ್ಲಾಧಿಕಾರಿಗಳಿಗೆ ಹೇಳಿದ್ದಾರೆ. ಆದರೆ ಗುಂಪಾಗಿ ಬಂದು ಕೊಡುತ್ತೇವೆ ಎಂದರು. ಇದು ಚಳುವಳಿಯ ನಿಜ ಸ್ವರೂಪ. ಅವರು ಸತ್ಯಾಗ್ರಹವನ್ನು ಪ್ರಾರಂಭಿಸಿದರು ಮತ್ತು ಅದರಲ್ಲಿ ಅವರು ಸಂಪೂರ್ಣ ವಿಫಲರಾದರು. 'ನೋ - ಟ್ಯಾಕ್ಸ್' [No - Tax] ಘೋಷಣೆ ವಿಫಲವಾಯಿತು ಮತ್ತು ಅವರಿಗೆ ಜನರೆದುರು ತಾವು ಯಶಸ್ವಿಯಾಗಿದ್ದೇವೆಂದು ಹೇಳಲೂ ಅವರಿಗೆ ಮುಖವಿಲ್ಲ. ಬೆದರಿಕೆಗಳು ಅವರಿಗೆ ಸಹಾಯ ನೀಡಲಾರವು ಮತ್ತು ಮೈಸೂರು ಸರಕಾರ ಹಾಗಿಲ್ಲ. ಕಾನೂನು - ಸುವ್ಯವಸ್ಥೆಯನ್ನು ಕಾಪಾಡಿಕೊಳ್ಳಬೇಕಾದರೆ ಮತ್ತು ಜನರ ಆಸ್ತಿ ಮತ್ತು ಪ್ರಾಣಗಳನ್ನು ಸಂರಕ್ಷಿಸಬೇಕಾದಲ್ಲಿ ಮೈಸೂರು ಸರಕಾರವು ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳುತ್ತದೆ. ನಾವು ಚಳುವಳಿಗಾರರಿಗೆ ಅಥವ ಗೂಂಡಾಗಳಿಗೆ ಬೆದರುವುದಿಲ್ಲ. ಅವರನ್ನು ಸರಿಯಾಗಿ ನಿಗ್ರಹಿಸುತ್ತೇವೆ ಮತ್ತು ನಾವು ಯಾರಿಗೂ ತೊಂದರೆಯಾಗದಂತೆ ನೋಡಿಕೊಳ್ಳುತ್ತೇವೆ ಎಂದು ಭರವಸೆ ಕೊಡುವೆವು. ಪೋಲಿಸರಿಂದಾಗಲೀ, ಸರಕಾರದಿಂದಾಗಲೀ ಅಥವ ಯಾವುದೇ ಇಲಾಖೆಯಿಂದಾಗಲೀ ತಪ್ಪು ಸಂಭವಿಸಿದ್ದರೆ ನಾವು

ಅದನ್ನು ವಿಚಾರಿಸಿ ಸೂಕ್ತ ಕ್ರಮವನ್ನು ಕೈಕೊಳ್ಳುತ್ತೇವೆ. ಉಳಿದ ಅಂಶಗಳ ಬಗ್ಗೆಯೂ ವಿವರವಾಗಿ ಹೇಳಿರುವೆ ............

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ಮುಂಬಯಿ ಮುಖ್ಯ ಮಂತ್ರಿಗಳ ಹೇಳಿಕೆಯನ್ನು ನೀವು ಖಂಡಿಸಬೇಕು.

* ಶ್ರೀ ಬಿ.ಡಿ. ಜತ್ತಿ : ಆ ಕುರಿತು ಹೇಳಬೇಕೆಂದರೆ, ನಾನು ಮುಂಬಯಿಯಲ್ಲಿ ಮುಖ್ಯ ಮಂತ್ರಿ ಶ್ರೀ ಚವ್ಹಾಣರನ್ನು ಮೊದಲ ಸಲ ಭೇಟಿಯಾಗಿದ್ದೆನು. ಅದು ಇಬ್ಬರು ಮುಖ್ಯ ಮಂತ್ರಿಗಳ ಮಧ್ಯದ ಅಸಾಂಪ್ರದಾಯಿಕ ಭೇಟಿಯಾಗಿತ್ತು. ಅವರೊಂದಿಗೆ ನಾನು ಸುಮಾರು 45 ನಿಮಿಷ ಇದ್ದೆನು. ಅವರು ನನಗೆ ಪಾಟಸಕರ ಸೂತ್ರದ ಬಗ್ಗೆ ಹೇಳ ಬಯಸಿದ್ದರು. ನಾನು ಆ ಸೂತ್ರವನ್ನು ಕೇಳಿದಾಗ, ಪಾಟಸಕರ ಸೂತ್ರವನ್ನು ನಾನು ಒಪ್ಪಲು ಸಾಧ್ಯವಿಲ್ಲವೆಂದು ವಿವರಿಸಿದೆ. ಯಾಕೆಂದರೆ ಸ್ಥಿತಿಗತಿಯೇ ಬೇರೆಯಾಗಿದೆ ಎಂದು ಹೇಳಿದೆ. ಮದ್ರಾಸ ಮತ್ತು ಆಂಧ್ರದ ವಿಷಯಗಳಲ್ಲಿ ಅಲ್ಲಿ ಕೆಲವು ವಿವಾದಗ್ರಸ್ತ ಪ್ರದೇಶಗಳಿದ್ದವು ಮತ್ತು ಇಬ್ಬರೂ ಒಬ್ಬ ಮಧ್ಯಸ್ಥವನ್ನು ನಿಯಮಿಸಲು ಒಪ್ಪಿಕೊಂಡಿದ್ದುವು ಮತ್ತು ತಳಹದಿಯಾಗಿ ಸಾಮಿಪ್ಯ ಹಾಗೂ ಪ್ರತಿಶತ 51 ರಷ್ಟು ಒಂದೇ ಭಾಷೆಯ ಜನರು ಇರುವ ಪ್ರದೇಶಗಳನ್ನು ಗುರುತಿಸುವುದಾಗಿತ್ತು. ಆದರೆ ಮೈಸೂರು ಮತ್ತು ಮುಂಬಯಿ ವಿಷಯಗಳಲ್ಲಿ ವಿವಾದಗ್ರಸ್ತ ಪ್ರದೇಶಗಳೇ ಇಲ್ಲ. ಇಡೀ ಪ್ರಶ್ನೆಯನ್ನು ಎರಡೂ ಬದಿಗಳು ವಾದ ಮಾಡಿವೆ ಮತ್ತು ಬಡಿದಾಡಿವೆ. ವಾದ - ಪ್ರತಿವಾದಗಳಾಗಿವೆ. ದಾಖಲೆಗಳನ್ನು ತೋರಿಸಲಾಗಿದೆ. ಆದ್ದರಿಂದ ಎಲ್ಲ ಚರ್ಚೆಯ ನಂತರವೇ ಈ ಪ್ರಶ್ನೆಯನ್ನು ನಿರ್ಧರಿಸಲಾಗಿದೆ. ಆದ್ದರಿಂದ ಇಲ್ಲಿ ಒಂದು ಇಂಚು ಪ್ರದೇಶ ಕೂಡ ವಿವಾದಗ್ರಸ್ತವೆಂದು ಹೇಳಲಾಗುವುದಿಲ್ಲ. ಆ ಕಾರಣದಿಂದಲೇ ನಾನು ಪಾಟಸಕರ ಸೂತ್ರವನ್ನು ಒಪ್ಪಲಿಲ್ಲ. ಆದ್ದರಿಂದ ನಾವು ಅಸಮ್ಮತಿಯನ್ನು ಒಪ್ಪಿಕೊಂಡು ಬೀಳ್ಕೊಂಡೆವು. ಅನಂತರ ಮತ್ತೆ ಒಂದೆರಡು ಸಲ ನಾನು ಜೋನಲ್ ಕೌನ್ಸಿಲ್‌ನಲ್ಲಿ ಅವರನ್ನು ಕಂಡೆನು. ಆ ಸಮಯದಲ್ಲಿ ಕೂಡ ನಾನು ನಿಪ್ಪಾಣಿಯನ್ನಾಗಲೀ ಅಥವ ಯಾವುದೇ ಹಳ್ಳಿಯನ್ನಾಗಲೀ ಕೊಡುತ್ತೇನೆಂದು ಯಾವತ್ತೂ ಹೇಳಿಲ್ಲ. ಮತ್ತೊಮ್ಮೆ ಮುಂಬಯಿ ಮುಖ್ಯ ಮಂತ್ರಿಗಳನ್ನು ನಾನು, ಕೇಂದ್ರ ಗೃಹ ಮಂತ್ರಿಗಳಾದ ಶ್ರೀ ಪಂತಜಿ ಅವರ ಮನೆಯಲ್ಲಿ ಕಂಡೆನು. ಅಲ್ಲಿ ಕೂಡ ನಾನು ನಿಪ್ಪಾಣಿಯನ್ನಾಗಲೀ ಅಥವ ಬೇರೆ ಯಾವುದೇ ಗಡಿ ಪ್ರದೇಶವನ್ನು ಬಿಟ್ಟುಕೊಡುವುದಾಗಿ ಹೇಳಲಿಲ್ಲ. ನಾವು ಇಬ್ಬರೂ ಸಾಮಾನ್ಯ ಚರ್ಚೆಯಲ್ಲಿದ್ದಾಗ ಅನೇಕ ಪ್ರಸ್ತಾವನೆಗಳು ಬಂದು ಹೋದುವು ಕೆಲವು ಪ್ರಸ್ತಾವನೆಗಳನ್ನು ನನ್ನೆದುರಿಗೆ ಇಟ್ಟರು. ಶಾಹಪುರವು ಮೊದಲು ಸಾಂಗಲಿ ಸಂಸ್ಥಾನದಲ್ಲಿದ್ದಿತು. ಅನಂತರ ಸಾಂಗಲಿ ಸಂಸ್ಥಾನವು ಮುಂಬಯಿ ರಾಜ್ಯದಲ್ಲಿ ವಿಲೀನವಾದಾಗ ಶಾಹಪುರವನ್ನು ಮಹಾರಾಷ್ಟ್ರಕ್ಕೆ ಕೊಡಬೇಕೆಂದು ಕೆಲವರು ಸೂಚಿಸಿದರು ಮತ್ತು ಬೆಳಗಾವಿಯನ್ನು ಇಟ್ಟುಕೊಳ್ಳಬಹುದೆಂದರು. ಅದರಂತೆ ಮತ್ತೊಬ್ಬರು ನಿಪ್ಪಾಣಿಯನ್ನು ಮತ್ತು ಹತ್ತಿರದ ಪ್ರದೇಶಗಳನ್ನು ಯಾಕೆ ಮಹಾರಾಷ್ಟ್ರಕ್ಕೆ ಕೊಟ್ಟು ಬಡಿದಾಟವನ್ನು ನಿಲ್ಲಿಸಬಾರದು ಎಂದರು. ಅದಕ್ಕೆ ನಾನು, ಈ ಪ್ರಸ್ತಾವನೆಗಳ ಬಗ್ಗೆ ನನ್ನ ಸಚಿವ ಸಂಪುಟದ

ಸಹೋದ್ಯೋಗಿಗಳೊಂದಿಗೆ ಚರ್ಚಿಸದ ಹೊರತು ಕಾಂಗ್ರೆಸ್ ಶಾಸಕರ ಸಭೆಯಲ್ಲಿ ಮತ್ತು ಜೋನಲ್ ಕೌನ್ಸಿಲ್ಲಿನ ಮುಂದೆ ತರದ ಹೊರತು ಏನನ್ನು ಹೇಳಲೂ ಸಾಧ್ಯವಿಲ್ಲ ಎಂದು ಹೇಳಿದೆನು. ಯಾವ ಪ್ರದೇಶಗಳನ್ನೂ ಕೊಡಲು ನನಗೆ ಅಧಿಕಾರವಿಲ್ಲ ಯಾಕೆಂದರೆ ವೈಯುಕ್ತಿಕವಾಗಿ ನಾನು ಏನನ್ನು ಮಾಡಲೂ ಸಾಧ್ಯವಿಲ್ಲ. ಆದ್ದರಿಂದಲೇ ನಾನು ಸತ್ಯವಾಗಿ ಈ ವಿಷಯವನ್ನು ಸದನದ ಮುಂದೆ ತರಲು ಬಯಸಿದ್ದೆ. ಆದರೆ ಸನ್ಮಾನ್ಯ ಸದಸ್ಯರಾದ ಶ್ರೀ ವೀರಣ್ಣಗೌಡರೇ ಮುಂದೆ ಬಂದು ಈ ಗೊತ್ತುವಳಿಯನ್ನು ಮಂಡಿಸಿದ್ದಾರೆ. ನಾನು ಹೃತ್ಪೂರ್ವಕವಾಗಿ ಅದನ್ನು ಬೆಂಬಲಿಸುತ್ತೇನೆ. ನಾನು ಶ್ರೀ ವೀರಣ್ಣಗೌಡರನ್ನು ಮತ್ತು ವಿಶೇಷವಾಗಿ ಈ ಗೊತ್ತುವಳಿಯನ್ನು ಬೆಂಬಲಿಸಿದವರಿಗೆಲ್ಲ ಸಹ ಕೃತಜ್ಞನಾಗಿರುವೆ.

(ಅನುಬಂಧ 1 ರಲ್ಲಿ ಶ್ರೀ ಜತ್ತಿ ಅವರು ಈ ಕುರಿತು ಇನ್ನಷ್ಟು ಹೇಳಿದ್ದನ್ನು ನೋಡಿ.)

## ಜಲ

### ಕೃಷ್ಣಾ - ಗೋದಾವರಿ ನೀರಿನ ಹಂಚಿಕೆ.

9, ಡಿಸೆಂಬರ್ 1963

ಪ್ರಶ್ನೆ 996 : ಶ್ರೀ ಎಸ್. ಗೋಪಾಲಗೌಡ (ತೀರ್ಥಹಳ್ಳಿ)

ಅ) ಕೃಷ್ಣಾ - ಗೋದಾವರಿ ನೀರಿನ ಹಂಚಿಕೆಯಲ್ಲಿ ರಾಜ್ಯಕ್ಕೆ ಆದ ಅನ್ಯಾಯವನ್ನು ತಿದ್ದಲು ಏನಾದರೂ ಕ್ರಮ ಕೈಕೊಂಡಿದೆಯೆ ?

ಬ) ಮಲಪ್ರಭಾ, ಘಟಪ್ರಭಾ, ಕೃಷ್ಣಾ ಮೇಲ್ದಂಡೆ ಮತ್ತು ಭೀಮಾ ಕೆಳಕಂಡೆ ಕಾಮಗಾರಿಗಳ ಕುರಿತು ರಾಜ್ಯ ಸರಕಾರ ತೆಗೆದುಕೊಂಡ ಕ್ರಮಗಳೇನು ?

ಉತ್ತರ :

ಶ್ರೀ ಬಿ.ಡಿ. ಜತ್ತಿ (ಅರ್ಥ ಮಂತ್ರಿಗಳು - ಮುಖ್ಯ ಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರ ಪರವಾಗಿ)

ಅ) ಮೈಸೂರು ಸರಕಾರವು ಇಂದಿನವರೆಗೆ ಈ ಕೆಳಗಿನ ಕ್ರಮಗಳನ್ನು ತೆಗೆದುಕೊಂಡಿದೆ.

1) 1951 ರ ಒಪ್ಪಂದವನ್ನು ಮೈಸೂರು ಸರಕಾರ 1951 ರಿಂದ 1956 ರ ವರೆಗೆ ಒಪ್ಪಲು ತಿರಸ್ಕರಿಸಿದೆ.

2) 1960 ಸಪ್ಟೆಂಬರನಲ್ಲಿ ಮೈಸೂರು ಸರಕಾರವು 1951 ರ ಒಪ್ಪಂದವು ನ್ಯಾಯಯುತವಾದ ಮತ್ತು ನೀತಿಯುಕ್ತ ಒಪ್ಪಂದವೆ ಅಲ್ಲವೆಂದು ಭಾರತ ಸರಕಾರಕ್ಕೆ ತಿಳಿಸಿದೆ.

3) ಸಮಾನ ತತ್ವದ ಆಧಾರದ ಮೇಲೆ ಮೈಸೂರು ಸರಕಾರವು ಕೃಷ್ಣಾ ನೀರಿನಲ್ಲಿ 1250 ಟಿ.ಎಂ.ಸಿ. ನೀರಿನ ಹಕ್ಕನ್ನು 1960 ರ ಸಪ್ಟೆಂಬರನಲ್ಲಿ ಭಾರತ ಸರಕಾರಕ್ಕೆ ನಿವೇದನ ಪತ್ರವನ್ನು ಸಲ್ಲಿಸಿದ.

4) ವಿವಾದ ಇದ್ದುದ್ದರಿಂದಲೇ ಗುಲ್ಹಾಟಿ ಆಯೋಗವನ್ನು ನೇಮಿಸಿತು ಮತ್ತು ಮೈಸೂರು ಸರಕಾರವು ತನ್ನ 1250 ಟಿ.ಎಂ.ಸಿ. ನೀರಿನ ಹಕ್ಕನ್ನು ಕೃಷ್ಣಾ ನೀರಿನಲ್ಲಿ, 24 ಟಿ.ಎಂ.ಸಿ. ನೀರಿನ ಹಕ್ಕನ್ನು ಗೋದಾವರಿ ನೀರಿನಲ್ಲೂ ಆಯೋಗದ ಮುಂದೆ ದಾಖಲೆ ಸಮೇತ ಪ್ರತಿಪಾದಿಸಿತು.

5) ಜನವರಿ 1962 ರಲ್ಲಿ ಮೈಸೂರು ಸರಕಾರವು ಅಂತರರಾಜ್ಯ ಜಲವಿವಾದದ ಬಗ್ಗೆ ಟ್ರಿಬುನಲ್ಲನ್ನು ನೇಮಿಸಿ ತೀರ್ಪು ನೀಡಲು ಭಾರತ ಸರಕಾರವನ್ನು ಸಂಪರ್ಕಿಸಿತು. ಆಗ ಭಾರತ ಸರಕಾರವು ಕೃಷ್ಣಾ - ಗೋದಾವರಿ ಕಮಿಷನ್ನಿನ ವರದಿ ಬಂದ ಮೇಲೆ ಚರ್ಚೆಯ ಮೂಲಕ ವಿಷಯವನ್ನು ನಿರ್ಧರಿಸಲು

ಇಚ್ಛಿಸಿತು. ಆದ್ದರಿಂದ ಟ್ರಿಬುನಲ್ಲನ್ನು ನೇಮಿಸುವ ಮುನ್ನ ಚರ್ಚೆಯ ಮೂಲಕ ಇತ್ಯರ್ಥ ಪಡಿಸಲು ಸಾಧ್ಯವಿಲ್ಲವೆಂಬುದನ್ನು ಭಾರತ ಸರಕಾರ ಮನಗಾಣಬೇಕು.

6) ಕೃಷ್ಣಾ - ಗೋದಾವರಿ ಕಮಿಷನ್ನಿನ ವರದಿ ಬಂದ ಮೇಲೆ ಫೆಬ್ರವರಿ 1963 ರಲ್ಲಿ ಭಾರತ ಸರಕಾರದೊಂದಿಗಿನ ಚರ್ಚೆಯಲ್ಲಿ ಮೈಸೂರು ಸರಕಾರವು ತನ್ನ ಹಕ್ಕನ್ನು ಸಂಪೂರ್ಣವಾಗಿ ಗುರುತಿಸಲು ಒತ್ತಾಯಿಸಿತು.

7) ದಿನಾಂಕ 23 ಮಾರ್ಚ್ 1963 ರಂದು ಕೇಂದ್ರ ಸರಕಾರದ ಜಲ ಮತ್ತು ವಿದ್ಯುತ್ ಸಚಿವರು ಲೋಕಸಭೆಯಲ್ಲಿ ಹೇಳಿಕೆ ಕೊಟ್ಟ ಮೇಲೆ ಮೈಸೂರು ಸರಕಾರವು ಆಂಧ್ರದ ಪಾಲಿನ ನೀರನ್ನು ಕಡಿತಗೊಳಿಸಿ ತನ್ನ ಮಧ್ಯಂತರ ಪಾಲನ್ನು 800 ಟಿ.ಎಂ.ಸಿ.ಗೆ. ಅಧಿಕ ಗೊಳಿಸಲು ಭಾರತ ಸರಕಾರವನ್ನು ಒತ್ತಾಯಿಸಿತು.

8) ಶ್ರೀ ಶೈಲಂ ಯೋಜನೆಗೆ ಮೈಸೂರು ಸರಕಾರವು ಒಪ್ಪಲಿಲ್ಲ ಮತ್ತು ಈ ಬಗ್ಗೆ ಚರ್ಚೆ ಮುಂದುವರೆದಿದೆ.

ಬ) 1) ಮಲಪ್ರಭಾ ಯೋಜನೆ = ಯೋಜನೆಯ ತಾಂತ್ರಿಕ ಒಪ್ಪಿಗೆ ಬಂದಿದೆ. ಕೆಲಸ ಪ್ರಗತಿಯಲ್ಲಿದೆ.

2) ಘಟಪ್ರಭಾ ಯೋಜನೆ = ಈ ಯೋಜನೆ ಚುರುಕಿನ ಪ್ರಗತಿಯಲ್ಲಿದೆ.

3) ಕೃಷ್ಣಾ ಮೇಲ್ದಂಡೆ ಯೋಜನೆ = ಯೋಜನೆಯ ಪ್ರಾಥಮಿಕ ಕೆಲಸಗಳನ್ನು ರಾಜ್ಯ ಸರಕಾರ ಆಗಲೇ ಕೈಗೆತ್ತಿ ಕೊಂಡಿದೆ ಮತ್ತು ಅವುಗಳು ಪ್ರಗತಿಯಲ್ಲಿವೆ ಭಾರತ ಸರಕಾರ ಕೂಡ ಇತ್ತೀಚೆಗೆ ಈ ಯೋಜನೆಗೆ ತಾಂತ್ರಿಕ ಅನುಮತಿ ನೀಡಿದೆ.

4) ಭೀಮಾ ಯೋಜನೆ = ಯೋಜನಾ ವರದಿ ಸಿದ್ಧತೆಯ ಹಂತದಲ್ಲಿದೆ.

* ಶ್ರೀ ಎಸ್. **ಗೋಪಾಲಗೌಡ** : 1951ನೇಯ ಅಗ್ರಿಮೆಂಟನ್ನು ಸರಕಾರದವರು ಅದು ಅಗ್ರಿಮೆಂಟ್ ಅಲ್ಲ ಅದನ್ನು ನಾವು ಒಪ್ಪುವುದಿಲ್ಲ ಎಂದು ತಿಳಿಸಿದ ಮೇಲೆ .........

* **ಸಭಾಧ್ಯಕ್ಷರು** : ಈ ವಿಷಯವನ್ನು ಕೂಲಂಕಷವಾಗಿ ಚರ್ಚಿಸಿದೆ.

* ಶ್ರೀ ಎಸ್. **ಗೋಪಾಲಗೌಡ** : ಇರಬಹುದು ಸ್ವಾಮಿ. ಆ ರೀತಿ ತಿಳಿಸಿದ ಮೇಲೆ ಭಾರತ ಸರಕಾರದವರು ಗುಲಹಾತಿ ಕಮಿಶನ ವರದಿ ಬಂದ ಮೇಲೆ ಈ ಸಂಬಂಧದಲ್ಲಿ ಏನಾದರೂ ತಮ್ಮ ಅಭಿಪ್ರಾಯವನ್ನು ಮೈಸೂರು ಸರಕಾರದವರಿಗೆ ತಿಳಿಸಿದ್ದಾರೆಯೆ ?

* ಶ್ರೀ ಬಿ.ಡಿ ಜತ್ತಿ : ಈಗಲೂ ಸರಕಾರದವರು 1951 ರ ಅಗ್ರಿಮೆಂಟು ಅಗ್ರಿಮೆಂಟೆ ಅಲ್ಲ. ಒಂದು ವೇಳೆ ಅಗ್ರಿಮೆಂಟ ಎಂದು ಅರ್ಥ ಮಾಡಿದ್ದರೆ ಅದನ್ನು ಒಪ್ಪುವುದಿಲ್ಲಾ ಎಂಬುದು ಮೊದಲಿನಿಂದಲೂ - ಕೊನೆವರೆಗೂ ಒಂದೆ ಸ್ಟ್ಯಾಂಡ ಮೈಸೂರು ಸರಕಾರದ್ದು.

* ಶ್ರೀ ಎಸ್. **ಗೋಪಾಲಗೌಡ** : ಗುಲಹಾತಿ ಕಮಿಶನ್ ಅವರ 50 ಮತ್ತು 53 ನೇಯ ಶಿಫಾರಸ್ಸಿನಲ್ಲಿ 51 ರ ಈಚೆಗೆ ಈ ರಾಜ್ಯಗಳಲ್ಲಿ ಯಾವ ಯಾವ ಅಣೆಕಟ್ಟು ಮತ್ತು ನೀರಾವರಿ ಕಾಮಗಾರಿಗಳು ಇವೆಯೋ ಅವುಗಳ ವಿಷಯದಲ್ಲಿ ಪುನರ್ ವಿಮರ್ಶೆ ಮಾಡಬೇಕು ಎಂದು ಹೇಳಿರುವದನ್ನು ಮೈಸೂರು ಸರಕಾರದವರಿಂದಲೂ ಪರಿಶೀಲನೆ ಮಾಡಿದ್ದಾರೆಯೇ?

* ಶ್ರೀ ಬಿ.ಡಿ. ಜತ್ತಿ : ಮೊದಲೇ ಪರಿಶೀಲನೆ ಮಾಡಿತ್ತು. ಈಗಲೂ ಪರಿಶೀಲನೆ ಮಾಡಿ ಎಷ್ಟು ನೀರು ಬೇಕಾಗುತ್ತದೆಯೋ ಅದನ್ನು ತಿಳಿಸಲಾಗಿದೆ.

* ಶ್ರೀ ಎಸ್. **ಗೋಪಾಲಗೌಡ** : ಗುಲಹಾತಿ ಕಮಿಶನ್ನಿನವರು ಒಂದು ಅವಾರ್ಡನ್ನು ಕೊಟ್ಟ ಮೇಲೆ ಆಂಧ್ರದವರು ನಡೆಸುತ್ತಿರುವ ಕೆಲಸಗಳೇನು? ಮತ್ತು ಕೇಂದ್ರದವರು ಕ್ಲಿಯರನ್ಸ್ ಕೊಟ್ಟ ನಂತರ ಮೈಸೂರು ಸರಕಾರದವರು ಕೈಗೊಂಡ ಕಾರ್ಯಕ್ರಮಗಳೇನು.

* ಶ್ರೀ ಬಿ.ಡಿ. ಜತ್ತಿ : ನಾವೂ ಆಂಧ್ರದವರೂ ಯಾವ ಒಂದು ತೀರ್ಮಾನಕ್ಕೂ ಬಂದಿಲ್ಲ. ಸುಮ್ಮನೆ ಅವರೂ ನಾವೂ ಚರ್ಚೆ ಮಾಡಿದ್ದೇವೆ.

* ಶ್ರೀ ಎಸ್.ಎಂ. ಕೃಷ್ಣ : 1962 ನೇಯ ಜನವರಿಯಲ್ಲಿ ಕೃಷ್ಣಾ ನದಿಯ ನೀರು ಮೈಸೂರಿಗೆ ಇಷ್ಟೇ ಎಂಬುದಾಗಿ ಆ ಆಯೋಗದವರು ತಿಳಿಸಿದ ನಂತರ ಮತ್ತೆ 1963 ನೇ ಫೆಬ್ರವರಿಯಲ್ಲಿ ಕೇಂದ್ರ ಸರಕಾರದವರು ಆಂಧ್ರಕ್ಕೆ ನಾಗಾರ್ಜುನ ಸಾಗರ ಪ್ರಾಜೆಕ್ಟಿನ ಕೆಲಸವನ್ನು ಮುಂದುವರಿಸಲು ಕ್ಲಿಯರನ್ಸ ಕೊಟ್ಟ ಮೇಲೆ ಕೃಷ್ಣಾ ನದಿಯ ನದಿಯ ನೀರಿನಲ್ಲಿ ಮೈಸೂರಿನ ಪಾಲು ಇಂತಿಷ್ಟೇ ಎಂದು ಸ್ಪಷ್ಟವಾಗುವುದಿಲ್ಲವೆ?

* ಶ್ರೀ ಬಿ.ಡಿ. ಜತ್ತಿ : ಆಗುವುದಿಲ್ಲ.

* ಶ್ರೀ ಎಸ್.ಎಂ. ಕೃಷ್ಣ : ಹಾಗೆ ಇಲ್ಲ ಎಂದು ಯಾವ ಆಧಾರದ ಮೇಲೆ ಹೇಳುತ್ತೀರಿ?

* ಶ್ರೀ ಬಿ.ಡಿ. ಜತ್ತಿ : ಕಾರಣ ಕೇಳಿದರೆ ಹೇಳುತ್ತೇನೆ. ಮಾನ್ಯರೆ, ಪೂರಕ ಪ್ರಶ್ನೆಗಳನ್ನು 'ಹೌದು' ಅಥವ 'ಇಲ್ಲ' ಎಂದಷ್ಟೆ ಉತ್ತರಿಸಲಾಗುತ್ತದೆ. ಮಾನ್ಯ ಸದಸ್ಯರು ಕಾರಣಗಳನ್ನು ತಿಳಿಯಬೇಕಿದ್ದರೆ ನಾನು ಕಾರಣಗಳನ್ನು ಹೇಳಲು ಸಿದ್ಧನಿರುವೆ.

* ಶ್ರೀ ಎಸ್.ಎಂ. ಕೃಷ್ಣ : ಮಾನ್ಯ ಮಂತ್ರಿಗಳು ಅದನ್ನು ಸಮರ್ಥಿಸಿಕೊಳ್ಳಬೇಕೆಂದಿದ್ದರೆ ಕಾರಣಗಳನ್ನು ಹೇಳಲಿ. ಇಲ್ಲವಾದಲ್ಲಿ ನನಗೆ ಸಮಾಧಾನವಿದೆ ಮತ್ತು ಬೇರೆ ದಾರಿಗಳಿಂದ ನಾನು ಉತ್ತರವನ್ನು ಪಡೆಯಲು ಸಮರ್ಥನಾಗಿರುವೆ.

* ಶ್ರೀ ಬಿ.ಡಿ. ಜತ್ತಿ : ಸಂಬಂಧಪಟ್ಟ ಸಚಿವರು ಲೋಕಸಭೆಯಲ್ಲಿ ಒಂದು ಹೇಳಿಕೆಯನ್ನು ನೀಡಿದ್ದರು. ಆ ಹೇಳಿಕೆಯನ್ನು ನೀಡಿದರು ಎಂದ ಮಾತ್ರಕ್ಕೆ ಮೈಸೂರು ಸರಕಾರ ಒಪ್ಪಿತೆಂದು ಅಲ್ಲ. ನಾವು ಅದನ್ನು ಪ್ರತಿಭಟಿಸಿದ್ದೇವೆ ಮತ್ತು ನಾವು ಪತ್ರವನ್ನು ಬರೆಯುತ್ತ ನಮಗೆ 1250 ಟಿ.ಎಂ.ಸಿ. ನೀರು ದೊರೆಯಬೇಕು ಎಂದು ಹೇಳಿದ್ದೇವೆ. ನಾವು 600 ಅಥವ 800 ಟಿ.ಎಂ.ಸಿ. ನೀರಿಗೆ ಎಂದೂ ಒಪ್ಪಿಲ್ಲ.

* ಶ್ರೀ ಎಂ. ವಾಯ್. ಘೋರ್ಪಡೆ : ಮಾನ್ಯರೆ, ಕೃಷ್ಣೆಯ ಬಗ್ಗೆ ಅವರು ತಾಂತ್ರಿಕ ಅನುಮತಿ ಸಿಕ್ಕಿದೆ. ಕೆಲಸ ಪ್ರಗತಿಯಲ್ಲಿದೆ ಎಂದು ಹೇಳಿದರು. ಸರಕಾರವು ಮೊದಲ ಹಂತದ ಕೆಲಸಕ್ಕೆ ಅಥವ ಎರಡೂ ಹಂತಗಳ ಕೆಲಸಕ್ಕೆ ಶಂಕುಸ್ಥಾಪನೆ ಮಾಡುತ್ತದೆಯೇ ಎಂದು ನಾನು ತಿಳಿಯಲಪೇಕ್ಷಿಸುತ್ತೇನೆ.

* ಶ್ರೀ ಬಿ.ಡಿ. ಜತ್ತಿ : ಮೊದಲ ಹಂತದ ಕೆಲಸಕ್ಕೆ ಮಾತ್ರ ಅನುಮತಿ ಸಿಕ್ಕಿದೆ.

* ಶ್ರೀ ಎಂ. ವಾಯ್. ಘೋರ್ಪಡೆ : ಮೊದಲ ಹಂತದ ಕೆಲಸಕ್ಕೆ ಶಂಕು ಸ್ಥಾಪನೆ ಮಾಡಲಾಗುತ್ತಿದೆಯೆ ಅಥವ ಎರಡನೇಯ ಹಂತದ ಬಗೆಗೂ ಕಾಳಜಿ ವಹಿಸಲಾಗುತ್ತದೆ.

* ಶ್ರೀ ಎಸ್.ಎಂ. ಗುರಡ್ಡಿ : (ಎ) ಉತ್ತರಕ್ಕನುಸಾರವಾಗಿ ಈಗ ಕೃಷ್ಣಾ ಮೇಲ್ದಂಡೆ ಯೋಜನೆಗೆ ಎಷ್ಟು ಟಿ.ಎಂ.ಸಿ. ನೀರನ್ನು ಒದಗಿಸಲು ಉದ್ದೇಶವಿಟ್ಟುಕೊಂಡಿದ್ದೀರಿ?

* ಶ್ರೀ ಬಿ.ಡಿ. ಜತ್ತಿ : ನಾವು ನಮಗೆ ಸಲ್ಲಬೇಕಾದ 1250 ಟಿ.ಎಂ.ಸಿ. ನೀರನ್ನು ಕೊಡಲೇಬೇಕೆಂದು ಒತ್ತಾಯ ಹಾಕಿದ್ದೇವೆ. ಅದಕ್ಕೆ ಕೇಂದ್ರ ಸರಕಾರದವರು ಸಧ್ಯಕ್ಕೆ 600 ಟಿ.ಎಂ.ಸಿ.ಎಫ್.ಟಿ. ನೀರನ್ನು ಉಪಯೋಗ ಮಾಡಿಕೊಳ್ಳಿ ಅನಂತರ ಬಾಕಿಯದನ್ನು ಸರಿಪಡಿಸೋಣ ಎಂದು ಹೇಳಿದ್ದಾರೆ.

* ಶ್ರೀ ಅಣ್ಣಾರಾವ ಗಣಮುಖಿ : ಎಷ್ಟು ಸಲ ಅವರು ಭೇಟಿಯಾಗಿದ್ದಾರೆ?

* ಶ್ರೀ ಅಧ್ಯಕ್ಷರು : ಸದಸ್ಯರು, ಸಧ್ಯದ ಸ್ಥಿತಿಯ ಬಗ್ಗೆ ಕೇಳಬಹುದು ಅವರು ಅನೇಕ ಸಲ ಭೇಟಿಯಾಗಿರಬಹುದು.

* ಶ್ರೀ ಬಿ.ಡಿ. ಜತ್ತಿ : ಮಾನ್ಯರೆ, ಎಷ್ಟು ಸಲ ಭೇಟಿಯಾಗಿದ್ದೇವೆ ಎಂದು ಹೇಳುವುದು ತುಂಬ ಕಷ್ಟ. ಮೂರು - ನಾಲ್ಕು ಸಲ ನಾವು ಭೇಟಿಯಾಗಿದ್ದೇವೆ. ನಮ್ಮ ಪಾಲು 600 ಟಿ.ಎಂ.ಸಿ.ಎಫ್.ಟಿ ಎಂದು ನಾವು ಎಂದೂ ಒಪ್ಪಿಕೊಂಡಿಲ್ಲ. ನಮ್ಮ ಪಾಲು 1250 ಟಿ.ಎಂ.ಸಿ.ಎಫ್.ಟಿ. ಎಂದೇ ನಾವು ಒತ್ತಾಯಿಸುತ್ತ ಬಂದಿದ್ದೇವೆ.

* ಶ್ರೀ ಎಸ್. ಶಿವಪ್ಪ : ಚರ್ಚೆಯ ಮುಖಾಂತರ ಮೈಸೂರು ಸರಕಾರ ತನ್ನ ಪಾಲಿನ ನೀರನ್ನು ಪಡೆಯಲು ಅಸಫಲವಾದ ಮೇಲೆ ತನ್ನ ಪಾಲಿನ ನೀರನ್ನು ಪಡೆಯಲು ಸರಕಾರ ತನ್ನ ಮುಂದಿನ ಹೆಜ್ಜೆ ಏನೆಂದು ಸೂಚಿಸುತ್ತದೆ?

* ಶ್ರೀ ಬಿ.ಡಿ. ಜತ್ತಿ : ಭಾರತ ಸರಕಾರ ತಾನು ಈ ವಿಷಯಗಳನ್ನು ಇತ್ಯರ್ಥ ಪಡಿಸಲು ಅಸಮರ್ಥವಾಗಿದೆ ಎಂದು ಹೇಳುವ ತನಕ ಮೈಸೂರು ಸರಕಾರವು ಮಧ್ಯಸ್ಥಿಕೆ ಬಗ್ಗೆ ಯೋಚಿಸುವುದಾಗಲೀ ಅಥವ ಸರ್ವೋಚ್ಚ ನ್ಯಾಯಾಲಯಕ್ಕಾಗಲೀ ಹೋಗಕೂಡದೆಂದು ಹೇಳಿದೆ.

* ಶ್ರೀ ಅಧ್ಯಕ್ಷರು : ಇತ್ಯರ್ಥವಾಗುವುದು ಎಂದರೆ ಇಬ್ಬರೂ ಕೂಡಬೇಕು ಮತ್ತು ಒಪ್ಪಬೇಕು.

* **ಶ್ರೀ ಅಣ್ಣಾರಾವ ಗಣಮುಖಿ** : ಅವರಿಗೆ ಏನಾದರೂ ತೊಂದರೆ ಇದ್ದರೆ, ಸಮಯ ವ್ಯರ್ಥಮಾಡದೆ ಮಧ್ಯಸ್ತಿಕೆಗಾಗಿ ವಹಿಸುವುದು ಭಾರತ ಸರಕಾರದ ಕರ್ತವ್ಯವಾಗಿದೆ.

* **ಅಧ್ಯಕ್ಷರು** : ಇದು ಪೂರಕ ಪ್ರಶ್ನೆಯೆ?

* **ಶ್ರೀ ಎಸ್ ಗೋಪಾಲಗೌಡ** : ಈ ಹಿಂದೆ ಸರಕಾರದವರು, ಮೈಸೂರಿಗೆ ಗೋದಾವರಿ ನೀರಿನಲ್ಲಿ 24 ಟಿ.ಎಂ.ಸಿ. ಎಫ್.ಟಿ. ನೀರು ಬರಬೇಕಾಗಿದೆ ಎಂದು ಹೇಳಿದ್ದರು. ಆದರೆ ಶ್ರೀಮಾನ್ ಜತ್ತಿ ಅವರು ಮೊನ್ನೆ ಬಿಜಾಪುರದಲ್ಲಿ ನಮಗೆ ಗೋದಾವರಿ ನೀರಿನಲ್ಲಿ 24 ಟಿ.ಎಂ.ಸಿ.ಎಫ್.ಟಿ. ನೀರು ಬರಬೇಕಾಗಿಲ್ಲ ಎಂದು ಹೇಳಿದ್ದಾರೆ ಇದರಲ್ಲಿ ಯಾವುದು ಸರಿ?

* **ಶ್ರೀ ಬಿ.ಡಿ. ಜತ್ತಿ** : ಮಾನ್ಯ ಸದಸ್ಯರು ನಾನು ಹೇಳಿದ್ದನ್ನು ಸರಿಯಾಗಿ ಅರ್ಥಮಾಡಿಕೊಂಡ ಹಾಗೆ ಕಾಣಿಸುತ್ತಿಲ್ಲ. ನಾನು ಆ ರೀತಿ ಹೇಳಿಲ್ಲ. ಗೋದಾವರಿ ನೀರು ಬಿಜಾಪುರ ಜಿಲ್ಲೆಗೆ ಬರುವುದಿಲ್ಲ ಎಂದರೆ ಆ ನೀರು ಬೀದರಿಗೂ ಬರುವುದಿಲ್ಲ ಎಂದು ಅರ್ಥ ಮಾಡುವುದು ಸರಿಯಲ್ಲ.

* **ಶ್ರೀ ಸಿ. ಜೆ. ಮುಕ್ಕಣ್ಣಪ್ಪ** : ಮೈಸೂರಿನವರು ಕೇಂದ್ರ ಸರಕಾರಕ್ಕೆ ಹಾಕುತ್ತಿರುವ ಒತ್ತಾಯ ಯಾವ ಘಟ್ಟಕ್ಕೆ ಬಂದಿದೆ.

* **ಶ್ರೀ ಬಿ.ಡಿ. ಜತ್ತಿ** : ಈಗ ಪ್ರೊವಿಜಿನಲ್ಲಾಗಿ 600 ಟಿ.ಎಂ.ಸಿ.ಎಫ್.ಟಿ ನೀರನ್ನು ಉಪಯೋಗ ಮಾಡಿಕೊಳ್ಳಿ. ಬಾಕಿಯನ್ನು ಅನಂತರ ತೀರ್ಮಾನ ಮಾಡೋಣ ಎಂದು ತಿಳಿಸಿದ್ದಾರೆ.

* **ಶ್ರೀ ಎಸ್. ಎಂ. ಗುರಡ್ಡಿ** : ಕೃಷ್ಣಾ ಬಲ ದಂಡೆಯ ಕಟ್ಟೆಯನ್ನು ಹಾಕಲು ಎರಡು ಜಾಗಗಳಲ್ಲಿ ಅಂದಾಜು ಮಾಡಲಾಗಿತ್ತು. ಆ ಪೈಕಿ ದೊಡ್ಡ ಅಣೆ ಕಟ್ಟನ್ನು ಆಲಮಟ್ಟಿ ಬಳಿ ಹಾಕುತ್ತೀರೋ ಅಥವ ನವಿಲು ಘಾಟಿನ ಬಳಿ ಹಾಕುತ್ತೀರೋ?

* **ಶ್ರೀ ಬಿ.ಡಿ. ಜತ್ತಿ** : ಆ ಬಗ್ಗೆ ಇನ್ನೂ ತೀರ್ಮಾನ ತೆಗೆದುಕೊಂಡಿಲ್ಲ.

* **ಶ್ರೀ ಎ. ಜೆ. ದೊಡ್ಡ ಮೇಟಿ** : ಕೇಂದ್ರ ಸರಕಾರದ ಮಂತ್ರಿಗಳಾದ ಶ್ರೀ ಕೆ.ಎಲ್. ರಾವ್ ಅವರು ಮೈಸೂರಿನ ನೀರಿನ ಪಾಲು ಇಂತಿಷ್ಟೆ ಎಂದು ಹೇಳದೆ ಇರುವಾಗ ಆ ಉಪಮಂತ್ರಿಗಳು ಮೈಸೂರು ಮತ್ತು ಆಂಧ್ರ ಸರಕಾರಗಳು ಒಂದು ಒಪ್ಪಂದಕ್ಕೆ ಬಂದಿರುವುದಾಗಿ ಒಂದು ಹೇಳಿಕೆಯನ್ನು ಕೊಟ್ಟಿದ್ದಾರೆ. ಆ ವಿಚಾರದ ಸತ್ಯಾಂಶವೇನು?

* **ಶ್ರೀ ಬಿ.ಡಿ. ಜತ್ತಿ** : ಶ್ರೀ ಕೆ.ಎಲ್. ರಾವ್ ಅವರು ವಾಟರ ಕಮೀಶನ್ನಿನ ಟೆಕ್ನಿಕಲ್ ಛೇರ್ಮನ್ನರು. ಶ್ರೀ ತ್ರಿವೇದಿಯವರು ಅವರಿಗೆ ಒಂದು ಪತ್ರ ಬರೆದಿದ್ದರು. ಆ ಬಗ್ಗೆ ಅವರು ಒಂದು ಕ್ಲಾರಿಫಿಕೇಶನ್ನ ಕೊಟ್ಟರು ಅಷ್ಟೆ.

* **ಶ್ರೀ ಸಿದ್ದಯ್ಯ ಕಾಶೀಮಠ** : ತಮಗೆ ತಾಂತ್ರಿಕ ಅನುಮತಿ ಯಾವಾಗ ದೊರೆಯಿತು? ಮತ್ತು ಎಷ್ಟಕ್ಕೆ ದೊರೆಯಿತು?

* ಶ್ರೀ ಬಿ.ಡಿ. ಜತ್ತಿ : ಸುಮಾರು 54 ಲಕ್ಷಗಳಷ್ಟು ಮಲಪ್ರಭಾದ ಮೇಲೆ ಖರ್ಚುಮಾಡಲಾಗಿದೆ ಎಂದು ನಾನು ಹೇಳಬಲ್ಲೆ. ಅದು ಕೆಲಸಮಯದ ಹಿಂದೆ ಮಂಜೂರಾಗಿತ್ತು. ಕೆಲಸ ಪ್ರಗತಿಯಲ್ಲಿದೆ. ಕಟ್ಟಡ ಇತ್ಯಾದಿಗಳ ಕೆಲಸ ಪೂರ್ತಿಗೊಂಡಿದೆ.

* ಶ್ರೀಮತಿ ಸುಶೀಲಾಬಾಯಿ ಹೀರಾಚಂದ ಷಾ : ಅಪ್ಪರ ಕೃಷ್ಣಾ ಯೋಜನೆಯಲ್ಲಿ ಈಗ ಎಷ್ಟು ನೀರು ಹಿಡಿಯುತ್ತದೆ? ಇನ್ನೆಷ್ಟು ನೀರು ಉಳಿಯುತ್ತದೆ?

* ಶ್ರೀ ಬಿ.ಡಿ. ಜತ್ತಿ : ನನಗೆ ಪ್ರಶ್ನೆ ಅರ್ಥವಾಗಲಿಲ್ಲ.

* ಶ್ರೀ ಎಚ್.ಆರ್. ಕೇಶವಮೂರ್ತಿ : ಮಾನ್ಯರೆ ಮಲಪ್ರಭಾ ಮತ್ತು ಘಟಪ್ರಭಾ ಕೆಲಸಗಳ ಕುರಿತು ತಾರತಮ್ಯ ಮಾಡಲಾಗುತ್ತಿದೆ. ಒಂದರಲ್ಲಿ ಕೆಲಸ ಪ್ರಗತಿಯಲ್ಲಿದೆ ಎಂದಿರಿ. ಇನ್ನೊಂದರಲ್ಲಿ ಕೆಲಸ ಚುರುಕಿನಲ್ಲಿದೆ ಎಂದಿರುವಿರಿ ಇದಕ್ಕೆ ಕಾರಣ ಏನು?

* ಶ್ರೀ **ಅಧ್ಯಕ್ಷರು** : ಯಾವಾಗಲೂ ಒಂದರ ಹಿಂದೆ ಇನ್ನೊಂದು ಬರುತ್ತವೆ ಆದ್ದರಿಂದ ಅಲ್ಲಿ ತಾರತಮ್ಯ!

* ಶ್ರೀ ಎಚ್.ಆರ್. ಕೇಶವಮೂರ್ತಿ : ಎರಡೂ ಕೆಲಸಗಳ ಕುರಿತು ಸರಕಾರ ಸಮಾನ ಧೋರಣೆಯನ್ನು ತಾಳಬೇಕೆಂದು ಅಪೇಕ್ಷಿಸುತ್ತದೆ.

* ಶ್ರೀ ಬಿ.ಡಿ. ಜತ್ತಿ : ನಾನು ವಿವರಿಸಬಲ್ಲೆ ಮಾನ್ಯರೆ ಘಟಪ್ರಭಾ ಎಡದಂಡೆ ಕೆಲಸವು ಮುಂಬಯಿ ಸರಕಾರದಲ್ಲಿದ್ದಾಗಲೇ ಪ್ರಾರಂಭವಾಗಿತ್ತು ಎಂಬುದು ಸನ್ಮಾನ್ಯ ಸದಸ್ಯರಿಗೆ ಗೊತ್ತಿಲ್ಲ. ತೀರ ಇತ್ತೀಚಿಗಷ್ಟೆ ಮಲಪ್ರಭಾ ಕೆಲಸವನ್ನು ಕೈಗೆತ್ತಿಕೊಂಡಿದೆ. ಆದ್ದರಿಂದ ಅದು ಚುರುಕಾಗಿ ನಡೆಯುತ್ತಿದೆ ಎಂಬುದಾಗಿ ತಿಳಿಯಬೇಕು.

**ಮಧ್ಯಾಹ್ನ 1–30**

* ಶ್ರೀ ಎ. ಕೃಷ್ಣಶೆಟ್ಟಿ : ಕೃಷ್ಣಾ ಗೋದಾವರಿ ನೀರಿನ ವಿವಾದ ಹೀಗೆ ನಿಧಾನವಾಗುತ್ತಿರುವದರಿಂದ ಇದನ್ನು ಕೋರ್ಟಿಗೆ ತೆಗೆದುಕೊಂಡು ಹೋಗುವುದು ಒಳ್ಳೆಯದಲ್ಲವೆ?

* ಶ್ರೀ ಬಿ.ಡಿ. ಜತ್ತಿ : ಮೈಸೂರು ಸರಕಾರ ಈಗ ಕೇಂದ್ರ ಸರಕಾರದೊಂದಿಗೆ ವ್ಯವಹರಿಸುತ್ತದೆ. ಈ ನಿರ್ಣಯ ಸರಿಯಾಗಿ ತೀರ್ಮಾನವಾಗದೆ ಹೋದರೆ ಕೊನೆಯಲ್ಲಿ ಕೋರ್ಟಿಗೋ ಇಲ್ಲವೆ ಆರ್ಬಿಟ್ರೇಶನ್ನಿಗೋ ಹೋಗಬೇಕೆಂದು ಅವರಿಗೂ ಹೇಳಿದ್ದೇವೆ.

* ಶ್ರೀ ಎಂ. ವಾಯ್ ಘೋರ್ಪಡೆ : ಮೈಸೂರು ಸರಕಾರಕ್ಕೆ ಈಗ ಕೊಡಮಾಡಿದ ನೀರಿನಲ್ಲಿ ಸಧ್ಯದ ಯೋಜನೆಗಳಿಗೆ ಮತ್ತು ಮಲಪ್ರಭೆಗೆ ಉಪಯೋಗಿಸಿದ ನಂತರ ಎಷ್ಟು ಟಿ.ಎಂ.ಸಿ.ಎಫ್.ಟಿ ನೀರು ಉಳಿಯುತ್ತದೆ ಮತ್ತು ಅದು ಅಪ್ಪರ ಕೃಷ್ಣಾ ಪ್ರೋಜೆಕ್ಟಿಗೆ ಸಾಲುತ್ತದೆಯೇ?

* ಶ್ರೀ ಬಿ.ಡಿ. ಜತ್ತಿ : ಭಾರತ ಸರಕಾರ ಮೈಸೂರು ಸರಕಾರಕ್ಕೆ ತಿಳಿಸಿದಂತೆ ಸಧ್ಯ 600 ಟಿ.ಎಂ.ಸಿ. ಮತ್ತು 250 ಟಿ.ಎಂ.ಸಿ.ಎಫ್.ಟಿ ನೀರು ಉಳಿಯುತ್ತದೆ.

* ಶ್ರೀ ಎಸ್. ಶಿವಪ್ಪ : ಕೃಷ್ಣಾ - ಗೋದಾವರಿ ನೀರಿನ ವಿಚಾರದಲ್ಲಿ ಮೊನ್ನೆ ತಾನೆ ಇಲ್ಲಿಗೆ ಕೇಂದ್ರ ಸಚಿವರಾದ ಕೆ.ಎಲ್.ರಾವ ಅವರು ಬಂದಿದ್ದಾಗ ಮುಖ್ಯ ಮಂತ್ರಿಗಳು ಅವರಿಂದ ಶರಾವತಿಗೆ ಸರ್ಟಿಫಿಕೇಟನ್ನು ಪಡೆದು ಕೊಂಡ ಹಾಗೆ ಈ ನೀರಿನ ವಿಚಾರದಲ್ಲೂ ಏನಾದರೂ ಸಂಧಾನವನ್ನು ನಡೆಸಿ ಏನಾದರೂ ಸೂಚನೆಗಳನ್ನು ಸೂಚಿಸಿದ್ದಾರೆಯೇ ?

* ಶ್ರೀ ಬಿ.ಡಿ. ಜತ್ತಿ : ಮೈಸೂರು ಸರಕಾರದ ಅಭಿಪ್ರಾಯಗಳನ್ನು ಮುಖ್ಯ ಮಂತ್ರಿಗಳು ಲೋಕೋಪಯೋಗಿ ಇಲಾಖಾ ಕಾರ್ಯದರ್ಶಿಗಳು ತಿಳಿಸಿದ್ದಾರೆ.

* ಶ್ರೀ ಎಸ್. **ಗೋಪಾಲಗೌಡ** : ಕೃಷ್ಣಾ - ಗೋದಾವರಿ ನದಿ ನೀರಿನ ಪಾಲನ್ನು ಪಡೆದುಕೊಳ್ಳುವ ವಿಷಯದಲ್ಲಿ ಮೈಸೂರು ಸರಕಾರದವರು ಇದುವರೆಗೆ ಮಾಡಿರತಕ್ಕ ಪ್ರತಿಭಟನೆ ಮತ್ತು ಸನ್ನಿವೇಶಗಳಿಂದ ಏನೂ ಉಪಯೋಗವಾಗದೆ ಇರುವದರಿಂದ ಈ ವಿವಾದವನ್ನು ಸುಪ್ರೀಮ ಕೋರ್ಟಿಗೇ ತೆಗೆದುಕೊಂಡು ಹೋಗಿ ಪರಿಶೀಲನೆ ಮಾಡಬಾರದು ?

* ಶ್ರೀ ಬಿ.ಡಿ. ಜತ್ತಿ : ಇದುವರೆಗೆ ಕೋರ್ಟಿಗೆ ಹೊಗುವ ಪ್ರಶ್ನೆ ಉದ್ಭವಿಸಿಲ್ಲ.

* ಶ್ರೀ ಎಸ್. **ಗೋಪಾಲಗೌಡ** : ಕೇಂದ್ರದಲ್ಲಿ ನೀರಾವರಿ ಮಂತ್ರಿಗಳಾಗಿರುವವರು ಈ ಹಿಂದೆ ಆಂಧ್ರದಲ್ಲಿದ್ದು ಯೋಜನೆಗಳನ್ನು ಮಾಡಿದವರು ಆಗಿರುವುದರಿಂದ ನಾವು ಪ್ರತಿಭಟನೆ ಮಾಡಿದಾಗ ಶ್ರೀ ಶೈಲಂ ಯೋಜನೆಗೆ ಕೇಂದ್ರದವರು ಅನುಮತಿ ಕೊಟ್ಟಿರುವದರಿಂದ ಆಂಧ್ರದ ಭಾರಿ ಯೋಜನೆಗಳಿಗೆ ಅನುಮತಿ ಕೊಡುತ್ತಾ ಇರುವುದರಿಂದ ಸರಕಾರದವರು ಕೇವಲ ಪ್ರತಿಭಟನೆ ಮಾಡುವುದರಿಂದ ಮೈಸೂರಿಗೆ ನ್ಯಾಯ ದೊರಕುವುದಿಲ್ಲ ಎನ್ನುವದು ಸರಕಾರದ ಗಮನಕ್ಕೆ ಬಂದಿದೆಯೆ ?

* **ಅಧ್ಯಕ್ಷರು** : ಅವರು ಆಂಧ್ರದಲ್ಲಿ ಸೇವೆ ಸಲ್ಲಿಸುತ್ತಿದ್ದರು. ಇತ್ಯಾದಿ ಹೇಳುವುದು ಬೇಡ ಮಾನ್ಯ ಸಚಿವರು ಕೊನೆಯ ಭಾಗಕ್ಕೆ ಉತ್ತರಿಸಲಿ.

* ಶ್ರೀ ಬಿ.ಡಿ. ಜತ್ತಿ : ಸರಕಾರದ ಅಧಿಕಾರಿಗಳಾಗಿದ್ದು ತಾತ್ಕಾಲಿಕವಾಗಿದ್ದು ಕೆಲಸ ಮಾಡಿದ್ದರು ದೇಶಕ್ಕೆ ಅನ್ಯಾಯವಾಗುವಂತೆ ಮಾಡದೆ ಇರುವಂತಹ ಶಕ್ತಿಯೂ ಅದರಲ್ಲಿದೆ ಎನ್ನುವ ಭರವಸೆ ಇದೆ.

* ಶ್ರೀ ಜಿ. ವಿ. **ಗೌಡ** : 600 ಟಿ.ಎಂ.ಸಿ. ನೀರಿನಲ್ಲಿ ಮಲಪ್ರಭಾ ಸಹಿತ ಸಧ್ಯದ ಯೋಜನೆಗಳಿಗೆ ಎಷ್ಟು ನೀರು ಬೇಕು ಮತ್ತು ಅಪ್ಪರ ಕೃಷ್ಣಾಕ್ಕೆ ಎಷ್ಟು ಉಳಿಯುತ್ತದೆ ?

* ಶ್ರೀ ಬಿ.ಡಿ. ಜತ್ತಿ : ನಮಗೆ ಬೇಕಾಗಬಹುದಾದ ನೀರು ಮತ್ತು ಅದರ ಬಳಕೆ ತಾತ್ಕಾಲಿಕವಾಗಿ ನೀಡಿದ ನೀರಿನ ಪ್ರಮಾಣ ಎಲ್ಲವನ್ನು ನಾನಾಗಲೇ ಹೇಳಿರುವೆ.

* ಶ್ರೀ ಜಿ.ವಿ. **ಗೌಡ** : ಮಲಪ್ರಭಾ ಸಹಿತ ಆಗಲೇ ಕೈಗೆತ್ತಿಕೊಂಡ ಯೋಜನೆಗಳಿಗೆ ಎಷ್ಟು ಪ್ರಮಾಣದ ನೀರು ಅವಶ್ಯವಿದೆ ಮತ್ತು ಅಪ್ಪರ ಕೃಷ್ಣಾಕ್ಕೆ ಎಷ್ಟು ಉಳಿಯುತ್ತದೆ.

* ಶ್ರೀ ಬಿ.ಡಿ. ಜತ್ತಿ : ಸಧ್ಯ ತಾತ್ಕಾಲಿಕವಾಗಿ 600 ಟಿ.ಎಂ.ಸಿ.ಎಫ್.ಟಿ ನೀರು ದೊರೆತಿದೆ.

* ಶ್ರೀ ಸಿ.ಜೆ. **ಮುಕ್ಕಣ್ಣಪ್ಪ** : ಶ್ರೀಮಾನ ಕೆ.ಎಲ್. ರಾವ ಅವರು ಇಲ್ಲಿಗೆ ಬಂದಿದ್ದಾಗ ತಾವು ಅವರ ಜೊತೆಯಲ್ಲಿ ಮಾತನಾಡುವಾಗ ಶರಾವತಿ ವಿಷಯದಲ್ಲಿ ಸರ್ಟಿಫಿಕೇಟನ್ನು ಪಡೆದಂತೆ ಕೃಷ್ಣಾ - ಗೋದಾವರಿ ನೀರಿನ ವಿವಾದದ ವಿಷಯದಲ್ಲೂ ಸರ್ಟಿಫಿಕೇಟನ್ನು ಕೊಡಿ ಎಂದು ಕೇಳಿದ್ದಿರಾ?

* ಶ್ರೀ ಬಿ.ಡಿ. ಜತ್ತಿ : ಮಾನ್ಯ ಸದಸ್ಯರಿಗೆ ಆ ಯೋಚನೆ ಇದ್ದಿರಬಹುದು. ನಮಗಿಲ್ಲಾ (ನಗು)

* ಶ್ರೀ **ಅಣ್ಣಾ ರಾವ ಗಣಮುಖಿ** : ಮಲಪ್ರಭಾ ಯೋಜನೆಗೆ ಟೆಕ್ನಿಕಲ್ ಕ್ಲಿಯರನ್ಸ ಕೊಟ್ಟು ಆ ನಂತರ 600 ಟಿ.ಎಂ.ಸಿ.ಎಫ್.ಟಿ. ಅಷ್ಟು ನೀರಿಗಿಂತ ಹೆಚ್ಚಿಗೆ ಉಪಯೋಗಿಸಿಕೊಳ್ಳಕೂಡದೆಂದು ಮತ್ತು ಇದರ ದೆಶೆಯಿಂದಾಗಿ ತುಂಗ ಭದ್ರದ ಎಡದಂಡೆ ನಾಲದಿಂದ ಗದ್ವಾಲ ಹಾಗೂ ಆಲಂಪೂರ ಇಲ್ಲಿ ನೀರು ಬಾರದೆ ಇರುವಂತೆ ಆಗಿದೆ ಎನ್ನವದೂ ಗೊತ್ತಿದೆಯೆ?

* ಶ್ರೀ ಬಿ.ಡಿ. ಜತ್ತಿ : ನನಗೆ ಗೊತ್ತಿಲ್ಲ.

* ಶ್ರೀ ಎಸ್.ಎಂ. **ಗುರಡ್ಡಿ** : ಆಲಮಟ್ಟಿಯಲ್ಲಿ ಒಂದು ದೊಡ್ಡ ಕಟ್ಟೆಯನ್ನು ಕಟ್ಟುವುದರಿಂದ ಬಿಜಾಪುರದ ಎಲ್ಲಾ ಭಾಗಗಳಿಗೂ ನೀರು ಒದಗಿಸಲು ಆಗದೇ ಇರುವುದರಿಂದ ಇದಕ್ಕೆ ನಾರಾಯಣಪುರದ ಬಳಿ ಕಟ್ಟೆ ಕಟ್ಟುವುದು ಸರಿಯಲ್ಲವೆ?

* ಶ್ರೀ ಬಿ.ಡಿ. ಜತ್ತಿ : ಆಲಮಟ್ಟಿಯಲ್ಲಿ ಒಂದು ದೊಡ್ಡ ಕಟ್ಟೆ ಕಟ್ಟಿ ಮತ್ತು ನಾರಾಯಣಪುರದ ಬಳಿ ಒಂದು ಸಣ್ಣ ಕಟ್ಟೆ ಕಟ್ಟಿದರೆ ಹೈದರಾಬಾದು ಕರ್ನಾಟಕ ಭಾಗಗಳಿಗೂ ಬಿಜಾಪುರದ ಭಾಗಗಳಿಗೂ ನೀರಿನ ಸೌಕರ್ಯ ಸಿಗುತ್ತದೆ.

* ಶ್ರೀ ಎಸ್.ಎಂ. **ಗುರೆಡ್ಡಿ** : ಯಾವ ಕಟ್ಟೆಯನ್ನು ಕಟ್ಟಬೇಕೆಂದು ಯೋಜನೆ ಮಾಡಿದ್ದೀರಿ?

* ಶ್ರೀ ಬಿ.ಡಿ. ಜತ್ತಿ : ಇದುವರೆಗೆ ಯಾವ ನಿರ್ಧಾರವೂ ಆಗಿಲ್ಲ.

* ಶ್ರೀ ಎಸ್.ಎಂ. ಕೃಷ್ಣ : ಮೊನ್ನೆ ಬಿಜಾಪುರದಲ್ಲಿ ಚುನಾವಣಾ ಪ್ರಚಾರ ಭಾಷಣ ಮಾಡುವಾಗ ಮುಖ್ಯ ಮಂತ್ರಿಗಳು ಶ್ರೀ ಗುರೆಡ್ಡಿಯವರು ಈಗ ಹೇಳಿದ ಎರಡೂ ಸ್ಥಳಗಳಲ್ಲಿ ಡ್ಯಾಮ್‌ಗಳನ್ನು ಕಟ್ಟಲಾಗುವುದೆಂದು ಹೇಳಿದ್ದರು. ಸಚಿವ ಸಂಪುಟ ಈ ಡ್ಯಾಮಗಳ ಬಗ್ಗೆ ಇನ್ನೂ ನಿರ್ಧಾರ ತೆಗೆದುಕೊಳ್ಳದಿರುವಾಗ ಬಿಜಾಪುರ ಚುನಾವಣಾ ಭಾಷಣದಲ್ಲಿ ಮುಖ್ಯ ಮಂತ್ರಿಗಳು ಅದು ಹೇಗೆ ಆ ರೀತಿ ಹೇಳಿದರು?

* ಶ್ರೀ ಬಿ.ಡಿ. ಜತ್ತಿ : ಹೇಳಿಕೆ ಏನೆಂಬ ಬಗ್ಗೆ ನನಗೆ ನಿಖರವಾಗಿ ಗೊತ್ತಿಲ್ಲ. ಪತ್ರಿಕೆಗಳನ್ನು ಓದುವದು ನನಗೆ ಸಾಧ್ಯವಾಗಿಲ್ಲ. ಅವರು ಆ ಖಾತೆಯ ಮಂತ್ರಿಗಳು. ಆ ಬಗ್ಗೆ ಅವರಿಗೆ ಏನಾದರೂ ಗೊತ್ತಿದ್ದರೆ ಹಾಗೆ ಹೇಳಿರಬಹುದು ಆದರೆ ಅವರ ಹೇಳಿಕೆ ಸಚಿವ ಸಂಪುಟದ ತೀರ್ಮಾನ ಅಲ್ಲ.

* ಶ್ರೀ ಎಸ್.ನಾಡಗೌಡ : ಕೃಷ್ಣ ಗೋದಾವರಿ ನೀರಿನ ಪ್ರಸಂಗಗಳಲ್ಲಿ ಎಲ್ಲ ಪ್ರೋಜೆಕ್ಟುಗಳನ್ನು ಮೈಸೂರು ಸರಕಾರದವರು ಸಿದ್ಧಪಡಿಸಲು ಆಗಿಲ್ಲ ಮತ್ತು ಅವರ ಹತ್ತಿರ ಹಣ ಇರಲಿಲ್ಲ ಹಾಗೂ ಸಿಬ್ಬಂದಿ ಇಲ್ಲ ಎಂದು ಹೇಳುತ್ತಿರುವದರಿಂದ ನೀರಿನ ಹಂಚಿಕೆಯನ್ನು ಸರಿಯಾಗಿ ಮಾಡಿಕೊಳ್ಳುವ ವಿಷಯವನ್ನು ಸರಕಾರದವರು ಗಮನಿಸಿದ್ದಾರೆಯೆ?

* ಶ್ರೀ ಬಿ.ಡಿ. ಜತ್ತಿ : ಸನ್ಮಾನ್ಯ ಸದಸ್ಯರು ತಮ್ಮ ವಾದಗಳಿಂದ ತಮ್ಮದೆ ಆದ ತೀರ್ಮಾನಕ್ಕೆ ಬಂದಿದ್ದಾರೆ ಅದು ಸರಿಯಲ್ಲ.

* ಶ್ರೀ ಜಿ.ವಿ. ಗೌಡ : ಗುಲಾಟಿ ಕಮೀಶನ್ನಿನ ವರದಿಯಲ್ಲಿ ಗೋದಾವರಿ ಕೊಳ್ಳದ ನೀರನ್ನು ಕೃಷ್ಣಗೆ ಹರಿಸಲು ಶಿಫಾರಸ್ಸು ಮಾಡಲಾಗಿದೆ. ಕನಿಷ್ಟ 300 ಟಿ.ಎಂ.ಸಿ.ಎಫ್.ಟಿ ನೀರನ್ನು ಗೋದಾವರಿ ಕೊಳ್ಳದಿಂದ ಕೃಷ್ಣಗೆ ಹರಿಸುವಂತೆ ಸರಕಾರವು ಏನಾದರೂ ಕ್ರಮ ಕೈಕೊಂಡಿದೆಯೆ? ಅದರಿಂದ ನಮಗೆ ಸಾಲುವಷ್ಟು ನೀರು ಬಂದಂತಾಗುತ್ತದೆ.

* ಅಧ್ಯಕ್ಷರು : ಚರ್ಚಿತ ಪ್ರಶ್ನೆಯಲ್ಲಿ ಅದು ಹೇಗೆ ಉದ್ಭವಿಸುತ್ತದೆ.

* ಶ್ರೀ ಬಿ.ಡಿ. ಜತ್ತಿ : ಗೋದಾವರಿ ನೀರಿನಲ್ಲಿಯ ನಮ್ಮ ಹಕ್ಕನ್ನು ಪ್ರತಿಪಾದಿಸಿದ್ದೇವೆ ಮತ್ತು ಸಾಂದರ್ಭಿಕವಾಗಿ ಗುಲಾಟಿ ಕಮೀಶನ ವರದಿಯಲ್ಲೂ ಅದು ನಮೂದಾಗಿದ್ದರಿಂದ ಭಾರತ ಸರಕಾರಕ್ಕೆ ನಾವು ಅದನ್ನು ಎತ್ತಿ ತೋರಿಸಿದ್ದೇವೆ. ತಕ್ಷಣ ಗೋದಾವರಿ ನೀರನ್ನು ತಿರುಗಿಸುವ ಕ್ರಮಗಳನ್ನು ಕೈಕೊಳ್ಳಬೇಕೆಂದೂ ಹೇಳಿದ್ದೇವೆ. ಅದರಿಂದ ನಮಗೆ ಲಾಭವಾಗುತ್ತದೆ.

* ಶ್ರೀ ಅಣ್ಣಾರಾವ ಗಣಮುಖಿ : ಈ ಎಲ್ಲ ಸಂಗತಿಗಳಿಂದ ತೀರ್ಮಾನವಾಗಲು ಬಹಳ ಸಮಯ ಬೇಕೆಂದು ಕಾಣುತ್ತದೆ. ಅಲ್ಲಿಯವರೆಗೂ ನಾಗಾರ್ಜುನ ಸಾಗರ ಮತ್ತು ಶ್ರೀ ಶೈಲಂ ಯೋಜನೆಗಳ ಕೆಲಸಗಳನ್ನು ನಿಲ್ಲಿಸುವಂತೆ ಕೇಂದ್ರ ಸರಕಾರಕ್ಕೆ ಒತ್ತಾಯ ತರಲು ಮೈಸೂರು ಸರಕಾರ ಇಚ್ಛಿಸುತ್ತಿದೆಯೆ?

* ಶ್ರೀ ವೀರೇಂದ್ರ ಪಾಟೀಲ : ನಾವು ಅದನ್ನೂ ಮಾಡಿದ್ದೇವೆ.

**ಭಾಷೆ - ದಿನಾಂಕ 20-03-1961**

**ಆಡಳಿತದಲ್ಲಿ ಕನ್ನಡ ಭಾಷೆ**

ಪ್ರಶ್ನೆ 126

* ಶ್ರೀ **ಗೋರೂರು** ರಾಮಸ್ವಾಮಿ ಅಯ್ಯಂಗಾರ (ನಾಮಕರಣಗೊಂಡ ಸದಸ್ಯ)

ಅ) ಸರಕಾರ ನೇಮಿಸಿದ ಸಮಿತಿಯ ನಿರ್ಧಾರಗಳಂತೆ ರಾಜ್ಯದ ಆಡಳಿತದಲ್ಲಿ ಕನ್ನಡ ಭಾಷೆಯನ್ನು ಅಳವಡಿಸಿದೆಯೆ?

ಬ) ರಾಜ್ಯದ ಉಳಿದ ಕಾರ್ಯಕ್ಷೇತ್ರದಲ್ಲೂ ಕನ್ನಡ ಭಾಷೆಯ ಬಳಕೆಯನ್ನು ಜಾರಿಗೆ ತರುವಲ್ಲಿಯ ಸಾಧ್ಯತೆಗಳನ್ನು ಗಮನಿಸಿದೆಯೆ?

* ಶ್ರೀ ಬಿ.ಡಿ. ಜತ್ತಿ : (ಮುಖ್ಯ ಮಂತ್ರಿಗಳು) (ಅ) ಮತ್ತು (ಬ) ಸಮಿತಿಯ ವರದಿಯು ಬಂದ ಮೇಲೆ, ಪ್ರಾಯೋಗಿಕವಾಗಿ ಒಂದು ವರುಷದ ಮಟ್ಟಿಗೆ ರಾಜ್ಯದಲ್ಲಿ ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ಬಿಜಾಪುರ, ಧಾರವಾಡ ಮತ್ತು ಮೈಸೂರು ಜಿಲ್ಲೆಗಳ ಕಂದಾಯ ಮತ್ತು ಕೃಷಿ ಇಲಾಖೆಗಳಲ್ಲಿ ಕನ್ನಡವನ್ನು ಅಧಿಕೃತ ಆಡಳಿತ ಭಾಷೆಯೆಂದು ಜಾರಿಗೆ ತಂದಿದ್ದೇವೆ. ಸಮಿತಿಯ ಶಿಫಾರಸ್ಸುಗಳ ಕುರಿತಾದ ಅಂತಿಮ ನಿರ್ಧಾರ ಇನ್ನೂ ಪರಿಶೀಲನೆಯಲ್ಲಿದೆ.

* ಶ್ರೀ **ಗೋರೂರು** ರಾಮಸ್ವಾಮಿ ಅಯ್ಯಂಗಾರ್ : ಸಮಿತಿಯವರು ಮಾಡಿರತಕ್ಕ ತೀರ್ಮಾನಗಳನ್ನು ಜಾರಿಗೆ ತಂದು ಅದರಿಂದ ಸರಕಾರಕ್ಕೆ ಬಂದಿರುವ ಅನುಭವ ಏನು?

* ಶ್ರೀ ಬಿ.ಡಿ. ಜತ್ತಿ : ಕೆಲವು ಅಂಶ ಜಾರಿ ಮಾಡಿದ್ದೇವೆ. 6 ನೇ ಸೆಪ್ಟೆಂಬರ್ 1959 ರಲ್ಲಿ ಸರಕಾರದವರು ಒಂದು ನಿರ್ಣಯವನ್ನು ಮಾಡಿದ್ದಾರೆ. ಅದು ಏನೆಂದರೆ, ಕನ್ನಡ ಭಾಷೆಯನ್ನು ಕೆಲವು ಡಿಸ್ಟ್ರಿಕ್ಟಿನೊಳಗೆ, ಕೆಲವು ಡಿಪಾರ್ಟಮೆಂಟಿನೊಳಗೆ ಒಂದು ವರುಷದ ವರೆಗೆ ಉಪಯೋಗ ಮಾಡಲು ಪ್ರಯತ್ನಿಸಬೇಕು ಎಂದು. ಒಂದು ವರುಷದ ನಂತರ ವರದಿಯನ್ನು ತರಿಸಿಕೊಂಡು ಇನ್ನೂ ಯಾವ ಡಿಪಾರ್ಟಮೆಂಟಿಗೆ ಕನ್ನಡ ಭಾಷೆಯನ್ನು ಉಪಯೋಗ ಮಾಡಬಹುದು ಎಂದು ಕೇಳಿದ್ದೇವೆ.

* ಶ್ರೀ **ಗೋರೂರು** ರಾಮಸ್ವಾಮಿ ಅಯ್ಯಂಗಾರ್ : ಒಂದು ವರ್ಷಕಾಲ ಶಿಫಾರಿಸ್ಸಿನಂತೆ ನಡೆಯುತ್ತಿದೆಯೆ?

* ಶ್ರೀ ಬಿ.ಡಿ.ಜತ್ತಿ : ಒಂದು ವರ್ಷ ಕಾಲ ಆಯಿತು. ಈಗಾಗಲೇ ಡಿಪಾರ್ಟಮೆಂಟ ಕಡೆಯಿಂದ ವರದಿಯು ಬಂದಿದೆ ಅದನ್ನು ಪರಿಶೀಲನೆ ಮಾಡುತ್ತಿದ್ದೇವೆ.

* ಶ್ರೀ **ಗೋರೂರು** ರಾಮಸ್ವಾಮಿ ಅಯ್ಯಂಗಾರ : ಆ ವರದಿಯ ಮುಖ್ಯ ಅಂಶ ಏನಿದೆ?

* ಶ್ರೀ ಬಿ.ಡಿ. ಜತ್ತಿ : ಈಗ ಡಿಸ್ಟ್ರಿಕ್ಟನೊಳಗೆ ಎಲ್ಲಾ ಇಲಾಖೆಯೊಳಗೆ ಕನ್ನಡ ಭಾಷೆಯ ಉಪಯೋಗವನ್ನು ಪ್ರಾರಂಭ ಮಾಡಲು ಕೆಲವು ತೊಂದರೆಗಳಿವೆ ಎಂದು ಹೇಳಿದ್ದಾರೆ. ಆ ತೊಂದರೆಗಳನ್ನು ಹೇಗೆ ದೂರ ಮಾಡಬೇಕು ಎಂಬುದನ್ನು ಸರಕಾರದವರು ಪರಿಶೀಲನೆ ಮಾಡುತ್ತಿದ್ದಾರೆ.

* ಶ್ರೀ ಹಾರನಹಳ್ಳಿ ರಾಮಸ್ವಾಮಿ : ಏನು ತೊಂದರೆ ಇದೆಯೆಂದು ತಿಳಿಸಿದ್ದಾರೆ?

* ಶ್ರೀ ಬಿ.ಡಿ. ಜತ್ತಿ : ಮುಖ್ಯವಾದ ತೊಂದರೆ ಸರಿಯಾಗಿ ಕೆಲವೊಂದು ಟರ್ಮ್ಸ್ ಸಿಕ್ಕಿಲ್ಲ. ಎರಡನೆಯದು ಟೈಪರೈಟರ್ ಬೇಗನೆ ನಮ್ಮ ಕೈಯೊಳಗೆ ಬಂದಿಲ್ಲ. ಕಂಟ್ರಾಕ್ಟ ಕೊಡುವುದಕ್ಕೆ ಒಬ್ಬ ಪ್ರತಿನಿಧಿಯನ್ನು ಜರ್ಮನಿಗೆ ಕಳುಹಿಸಿದ್ದಾರೆ. ಅವರು ಸಾಮಾನು ತಂದನಂತರ ಹೆಚ್ಚಿಗೆ ಟೈಪರೈಟರುಗಳನ್ನು ಮಾಡುವುದಕ್ಕೆ ಅನುಕೂಲವಾಗುತ್ತದೆ.

* ಶ್ರೀ ಹಾರನಹಳ್ಳಿ ರಾಮಸ್ವಾಮಿ : ಟೈಪರೈಟರ ಅಲ್ಲದೆ ಮತ್ತೆ ಏನು ಕಾರಣವನ್ನು ತಿಳಿಸಿದ್ದಾರೆ?

* ಶ್ರೀ ಬಿ.ಡಿ. ಜತ್ತಿ : ಮತ್ತೇನೂ ತೊಂದರೆಯಿಲ್ಲ ಟರ್ಮ ಸರಿಯಾಗಿ ಸಿಕ್ಕುವ ಹಾಗೆ ಏರ್ಪಾಡು ಮಾಡಿದ್ದೇವೆ. ಕೆಲವು ಡಿಪಾರ್ಟಮೆಂಟಿನಿಂದ ಕೆಲವೊಂದು ಟರ್ಮ್ಸ್ ಬಂದಿವೆ.

* ಶ್ರೀ ಹಾರನಹಳ್ಳಿ ರಾಮಸ್ವಾಮಿ : ಡಾ|| ರಘುವೀರ ಎನ್ನುವವರು ಇಂಗ್ಲೀಷ ಪದಗಳನ್ನು ಅಖಿಲ ಭಾರತ ದರ್ಜೆಯ ಎಲ್ಲಾ ಪದಗಳಿಗೆ ಜೋಡಣೆ ಮಾಡಿ ಕೇಂದ್ರ ಸರಕಾರಕ್ಕೆ ಅವರು ರಿಪೋರ್ಟು ಕೊಟ್ಟು ಅವರು ಪ್ರಾಂತೀಯ ಸರಕಾರಕ್ಕೆ ಆಚರಣೆಗೆ ತರಲು ತಿಳಿಸಿರುವುದು ಸರ್ಕಾರಕ್ಕೆ ಗೊತ್ತಿದೆಯೆ?

* ಶ್ರೀ ಬಿ.ಡಿ. ಜತ್ತಿ : ಅದು ನನಗೆ ಗೊತ್ತಿಲ್ಲ. ಅದನ್ನು ನೋಡುತ್ತೇನೆ.

* ಶ್ರೀ ಹಾರನಹಳ್ಳಿ ರಾಮಸ್ವಾಮಿ : ನಿಮ್ಮ ಡಿಪಾರ್ಟಮೆಂಟಿನಲ್ಲಿ ಅದನ್ನು ಎಷ್ಟರ ಮಟ್ಟಿಗೆ ಆಚರಣೆಯಲ್ಲಿ ತರುತ್ತಿದ್ದೀರಿ ?

* ಶ್ರೀ ಬಿ.ಡಿ. ಜತ್ತಿ : ಈಗಾಗಲೇ ಎಷ್ಟೋ ಶಬ್ದಗಳನ್ನು ಕಲೆಕ್ಟ ಮಾಡಿದ್ದೇವೆ. ಇನ್ನು ಕೆಲವು ಸಮಯದಲ್ಲಿ ಅದು ಸಂಪೂರ್ಣವಾಗಿ ಮುಗಿಯುತ್ತದೆ.

* ಶ್ರೀ ಗೋರೂರು ರಾಮಸ್ವಾಮಿ ಅಯ್ಯಂಗಾರ : ಟರ್ಮ್ಸ ಸರಿಯಾಗಿ ಸಿಕ್ಕುತ್ತಾ ಇಲ್ಲ ಎಂದು ಹೇಳುತ್ತಿರುವುದು ಸಮಿತಿಯವರೋ ಅಥವ ತಜ್ಞರೋ?

* ಶ್ರೀ ಬಿ.ಡಿ. ಜತ್ತಿ : ಸಮಿತಿಯವರೂ ಅಲ್ಲ ತಜ್ಞರೂ ಅಲ್ಲ. ಸರಕಾರಿ ಕೆಲಸ ಮಾಡತಕ್ಕ ಅಧಿಕಾರಿಗಳು ಹೇಳುತ್ತಿದ್ದಾರೆ. ಕೆಲವು ಮಟ್ಟಿಗೆ ಮುಂದುವರಿದಿದ್ದಾರೆ. ಇನ್ನು ಸ್ವಲ್ಪ ದಿನಗಳಲ್ಲಿ ಅದು ಸರಿ ಹೋಗಬಹುದು.

* ಶ್ರೀ ಗೋರೂರು ರಾಮಸ್ವಾಮಿ ಅಯ್ಯಂಗಾರ : ತೊಂದರೆ ಇದೆ ಎಂದು ಹೇಳಿದ್ದು ತಜ್ಞರೆ?

* ಶ್ರೀ ಬಿ.ಡಿ. ಜತ್ತಿ : ಎಕ್ಸಪರ್ಟ ದೃಷ್ಟಿಯಿಂದ ಹೇಳಿದೆ. ಯೋಜನೆಯಲ್ಲಿ ಕೆಲಸಮಾಡುವ ಸರಕಾರಿ ಅಧಿಕಾರಿಗಳೆಂದು ನಾನು ಹೇಳಿದೆನೇ ಹೊರತು ಸಮಿತಿಯ ತಜ್ಞ ಸದಸ್ಯರೆಂದು ಹೇಳಲಿಲ್ಲ.

* ಶ್ರೀ **ಗೋರೂರು ರಾಮಸ್ವಾಮಿ ಅಯ್ಯಂಗಾರ** : ಸರಕಾರೀ ಅಧಿಕಾರಿಗಳು ಇದನ್ನು ಅನುಭವದಿಂದ ಹೇಳುತ್ತಿದ್ದಾರೆಯೆ? ಅಥವ ಪ್ರಯೋಗ ಮಾಡದೆ ಇಂಗ್ಲೀಷನ್ನು ಉಪಯೋಗ ಮಾಡಬೇಕೆಂದು ಹಿಂದಿನಿಂದ ಹೇಳುವವರೇ ಹೇಳುತ್ತಿದ್ದಾರೆಯೆ?

* ಶ್ರೀ ಬಿ.ಡಿ. ಜತ್ತಿ : ಅವುಗಳು ಪ್ರಾಕ್ಟಿಕಲ್ ತೊಂದರೆಗಳು. ಅವುಗಳನ್ನು ಹೇಳಲಾಗಿದೆ ಅದಕ್ಕಿಂತ ಬೇರೆ ಇನ್ನೇನೂ ಇಲ್ಲ.

* ಶ್ರೀ **ಗೋರೂರು ರಾಮಸ್ವಾಮಿ ಅಯ್ಯಂಗಾರ** : ಮದ್ರಾಸ್ಸಿನಲ್ಲಿ ಕೂಡ ಹೀಗೆಯೇ ಆಗಿ ಎಲ್ಲಾ ಜಿಲ್ಲೆಗಳಲ್ಲೂ, ಎಲ್ಲಾ ಮಟ್ಟದಲ್ಲೂ ತಮಿಳು ಭಾಷೆಯನ್ನು ಉಪಯೋಗಿಸಬೇಕು ಎಂದು ಮಾಡಿರುವುದು ಸರಕಾರದ ಗಮನಕ್ಕೆ ಬಂದಿದೆಯೆ?

* ಶ್ರೀ ಬಿ.ಡಿ. ಜತ್ತಿ : ಅನುಕೂಲತೆಗಳನ್ನು ಹೇಗೆ ಒದಗಿಸಬೇಕೆಂಬುದು ಗೊತ್ತಿಲ್ಲ. ಬೇಗನೇ ಮಾಡಬೇಕೆಂದು ಆಶೆ ಇಟ್ಟುಕೊಂಡು ಬೇಗನೇ ಮಾಡುತ್ತಿದ್ದೇವೆ.

* ಶ್ರೀ **ಗೋರೂರು ರಾಮಸ್ವಾಮಿ ಅಯ್ಯಂಗಾರ** : ತಮಿಳುಗಿಂತ ಕನ್ನಡದಲ್ಲಿ ಪುಸ್ತಕಗಳನ್ನು ಬರೆದಿರುವುದು ಕಡಿಮೆ ಇಲ್ಲ. ಇಲ್ಲಿರತಕ್ಕ ಸರ್ಕಾರೀ ಅಧಿಕಾರಿಗಳಿಗೆ ಕನ್ನಡದಲ್ಲಿ ಸರಿಯಾದ ಯೋಗ್ಯತೆ ಇದೆ. ಆದರೆ ಪ್ರಯೋಗ ಸರಿಯಾಗಿ ಆಗದೆ ಸಾವಕಾಶವಾಗಿದೆ ಎಂದು ಹೇಳಿದರೆ ಒಪ್ಪುತ್ತೀರಾ?

* ಶ್ರೀ ಬಿ.ಡಿ. ಜತ್ತಿ : ಕಾರಣ ಏನಿದ್ದರೂ ತೊಂದರೆಯನ್ನು ದೂರ ಮಾಡಬಹುದು ಎಂದು ಕಾಣುತ್ತದೆ. ಬೇಗನೆ ತೊಂದರೆಗಳು ದೂರ ಆಗಬಹುದು ಎಂದು ಕಾಣುತ್ತದೆ.

* ಶ್ರೀ **ಗೋರೂರು ರಾಮಸ್ವಾಮಿ ಅಯ್ಯಂಗಾರ** : ಸರ್ಕಾರದ ಎಲ್ಲಾ ಕಾಗದ ಪತ್ರಗಳು ಬೇಗನೆ ಕನ್ನಡದಲ್ಲಿ ಬರುವುದಕ್ಕೆ ಅಪ್ಪಣೆ ಕೊಡುತ್ತೀರಾ?

* ಶ್ರೀ ಬಿ.ಡಿ. ಜತ್ತಿ : ಅದನ್ನು ಪ್ರಯತ್ನ ಮಾಡಲು ಒಂದು ವರ್ಷ ಆಗಬಹುದು. ಎಲ್ಲಾ ತೊಂದರೆಗಳನ್ನು ದೂರ ಮಾಡಿಕೊಂಡು ಪ್ರಯತ್ನ ಮಾಡಿದರೆ ಬೇಗ ಮಾಡುವುದಕ್ಕೆ ಆಗುತ್ತದೆ.

* ಶ್ರೀ ಎಂ. ಪಿ. ಎಲ್. ಶಾಸ್ತ್ರಿ : ಸ್ವಾಮಿ ಡಾಕ್ಟರ ರಘುವೀರ ಅವರ ಶಬ್ದ ಕೋಶದಲ್ಲಿರುವ ಪದಗಳಿಗೆ ಬದಲಾಗಿ ಸಾಮಾನ್ಯವಾಗಿ ಸಂಸ್ಥಾನದಲ್ಲೂ ವ್ಯವಹಾರ ಭಾಷೆಯಲ್ಲಿ ಉಪಯೋಗವಾಗುತ್ತಿರುವ ಇಂಗ್ಲೀಷ್ ಪದಗಳನ್ನೆ ಉಪಯೋಗಿಸಿದರೆ ಜನರಿಗೆ ಚೆನ್ನಾಗಿ ಅರ್ಥವಾಗುತ್ತದೆ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೆ?

* ಶ್ರೀ ಬಿ.ಡಿ. ಜತ್ತಿ : ಅವನ್ನು ಪ್ರಯೋಗ ಮಾಡಬಹುದು.

* ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಕನ್ನಡ ಭಾಷೆಯ ಮತ್ತು ಜನರ ಹಿತ ರಕ್ಷಣೆಯ ದೃಷ್ಟಿಯಿಂದ ಕನ್ನಡವನ್ನು ಆಡಳಿತ ಭಾಷೆಯಾಗಿ ಬೆಳಗಾಂ ಮೊದಲಾದ ಬಾರ್ಡರ್ ಏರಿಯಾದಲ್ಲಿ ಉಪಯೋಗಿಸಲು ಏಕೆ ತೀರ್ಮಾನ ಮಾಡಬಾರದು?

* ಶ್ರೀ ಬಿ.ಡಿ. ಜತ್ತಿ : ಮೈಸೂರು ಸಂಸ್ಥಾನದಲ್ಲಿ ಯಾವ ಡಿಸ್ಟ್ರಿಕ್ಟಿನಲ್ಲೂ ಕನ್ನಡ ಜಾರಿಗೆ ತರಬಾರದೆಂದು ಉದ್ದೇಶಪಟ್ಟಿಲ್ಲ. ಪ್ರಯೋಗ ನಡೆಯುತ್ತಿರುವುದನ್ನು ನೋಡಿ 5-6 ಕಡೆಯ ಅನುಭವದ ನಂತರ ಎಲ್ಲ ಕಡೆಗೂ ವಿಸ್ತರಿಸಬೇಕೆಂದಿದೆ.

* ಶ್ರೀ ಎಂ.ವಿ. ರಾಮರಾವ್ : ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡುವ ಉದ್ದೇಶ ಸಾಹಿತ್ಯ ಬೆಳವಣಿಗೆಯಾಗಬೇಕೆಂಬುದೇ ಅಥವ ದೇಶದ ಜನರಿಗೆ ಆಡಳಿತದ ವಿಷಯ ತಿಳಿಯಬೇಕೆಂಬುದೆ?

* ಶ್ರೀ ಬಿ.ಡಿ. ಜತ್ತಿ : ಆಡಳಿತದ ವಿಚಾರ ಜನರಿಗೆ ತಿಳಿಯಬೇಕು ಮತ್ತು ಸರಕಾರಕ್ಕೆ ಜನರ ಅಭಿಪ್ರಾಯ ತಿಳಿಯಬೇಕು ಎಂಬುದು ಮುಖ್ಯೋದ್ದೇಶ. ಇದರ ಜೊತೆಗೆ ಸಾಹಿತ್ಯ ಬೆಳವಣಿಗೆಯೂ ಆದರೆ ಒಳ್ಳೇಯದು.

* ಶ್ರೀ ಎಂ.ವಿ. ರಾಮರಾವ್ : ಹಾಗಾದ ಪಕ್ಷದಲ್ಲಿ ಪಾರಿಭಾಷಿತ ಶಬ್ದಗಳು ಸಾಕಷ್ಟು ಸಿಕ್ಕುವದಿಲ್ಲವೆಂದು ಹೇಳುವಾಗ ಯಾವ-ಯಾವುದು ಸಿಕ್ಕುವದಿಲ್ಲ ಅದರ ಬದಲು ಇಂಗ್ಲೀಷ್ ಮತ್ತು ಹಿಂದುಸ್ಥಾನಿ ಶಬ್ದಗಳನ್ನಾದರೂ ಉಪಯೋಗಿಸಿ ಕನ್ನಡವನ್ನು ಆಡಳಿತ ಭಾಷೆಯಾಗಿ ಪರಿವರ್ತನೆ ಮಾಡಲು ತೊಂದರೆ ಏನು?

* ಶ್ರೀ ಬಿ.ಡಿ. ಜತ್ತಿ : ಮಾಡಬಹುದು. ಆದರೆ ಇದಕ್ಕಾಗಿ ಗ್ಲಾಸರಿ ಒಂದನ್ನು ಪಬ್ಲಿಶ್ ಮಾಡಬೇಕೆಂದಿದೆ. ಆ ವಿಚಾರದಲ್ಲಿ ಪ್ರಗತಿಯಾಗಿದೆ.

* ಶ್ರೀ ಎಂ.ವಿ. ರಾಮರಾವ್ : ಆಡಳಿತ ಭಾಷೆಯಾಗಿ ಉಪಯೋಗಿಸಲು ಯಾವ ಯಾವ ಹಂತದಲ್ಲಿ ಜಾರಿಗೆ ತರಬೇಕೆಂದು ಯೋಚಿಸಿ ಒಂದು ತೀರ್ಮಾನಕ್ಕೆ ಬರಲಾಗಿದೆಯೆ?

* ಶ್ರೀ ಬಿ.ಡಿ. ಜತ್ತಿ : ಆಡಳಿತ ಭಾಷೆಯ ವ್ಯಾಪ್ತಿಯೇನೆಂಬುದು ತೀರ್ಮಾನವಾಗಿದೆ. ಯಾವ ಯಾವ ಹಂತಗಳಲ್ಲಿ ಉಪಯೋಗಿಸಬೇಕೆಂಬುದು ಸರಕಾರದಲ್ಲಿ ತೀರ್ಮಾನಿಸಲ್ಪಟ್ಟಿದೆ. ಮೊದಲು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾರಂಭಿಸಿ ಜನರಿಗೆ ಅನುಕೂಲವಾದ ನಂತರ ಸೆಕ್ರೆಟೆರಿಯೆಟ್ಟಿಗೆ ಬಂದರೆ ಅನುಕೂಲ ಎಂದು ಭಾವಿಸಿದೆ.

* ಶ್ರೀ ಎಂ.ವಿ.ರಾಮರಾವ್ : ಆಡಳಿತದ ಯಾವ ಯಾವ ಹಂತಗಳಲ್ಲಿ ಕನ್ನಡ ಭಾಷೆಯನ್ನು ಉಪಯೋಗಿಸಬೇಕೆಂದು ಸರ್ಕಾರ ಉದ್ದೇಶಿಸಿದೆ?

* ಶ್ರೀ ಬಿ.ಡಿ. ಜತ್ತಿ : ಮೊದಲು ಡಿಸ್ಟ್ರಿಕ್ಟ ಲೆವಲ್‌ನಲ್ಲಿ. ಆಮೇಲೆ ಸ್ಟೇಟ ಲೇವಲ್ಲನಲ್ಲಿ ಆ ಪ್ರಕಾರ ಕೆಲವು ಡಿಸ್ಟ್ರಿಕ್ಟಗಳಲ್ಲಿ ಪ್ರಯತ್ನ ಮಾಡಿದ್ದೇವೆ.

* ಶ್ರೀ ಎಂ.ವಿ. ರಾಮರಾವ್ : ತಾಲ್ಲೂಕು ಬೋರ್ಡ್, ಮುನಸೀಪಾಲಿಟಿ, ಪಂಚಾಯಿತಿ ಮುಂತಾದ ಸ್ಥಳೀಯ ಸಂಸ್ಥೆಗಳ ಆಡಳಿತ ಕ್ಷೇತ್ರದಲ್ಲಿ ವ್ಯವಹಾರ ಭಾಷೆ ಕನ್ನಡದಲ್ಲೇ ಇರಬೇಕೆಂಬ ನೀತಿ ಇದೆಯೆ?

* ಶ್ರೀ ಬಿ.ಡಿ. ಜತ್ತಿ : ಇದೆ.

* ಶ್ರೀ ಎಂ.ವಿ. ರಾಮರಾವ್ : ಆದರೆ ಆಡಳಿತ ಭಾಷೆ ಯಾವುದಿರಬೇಕೆಂದು ಸ್ಥಳೀಯ ಸಂಸ್ಥೆಗಳ ಆಡಳಿತಕ್ಕೆ ಸಂಬಂಧಪಟ್ಟ ಕಾನೂನುಗಳಲ್ಲಿ ನಮೂದು ಮಾಡಿಲ್ಲವೆಂಬುದು ಗೊತ್ತೆ?

* ಶ್ರೀ ಬಿ.ಡಿ. ಜತ್ತಿ : ಮಾಡದಿದ್ದರೆ ಹಾಗೆ ಮಾಡಬೇಕು.

* ಶ್ರೀ ಎಂ.ವಿ. ರಾಮರಾವ್ : ಆಡಳಿತಭಾಷೆ ಬೆಳಗಾಂ ಜಿಲ್ಲೆಯಲ್ಲಿ ಮರಾಠಿ, ಇಂಗ್ಲೀಷ್, ಕನ್ನಡ ಇವುಗಳಲ್ಲಿ ಯಾವುದು ಇರಬೇಕು ಎಂಬುದು ಗೊತ್ತು ಮಾಡಲಾಗಿದೆಯೆ?

* ಶ್ರೀ ಬಿ.ಡಿ. ಜತ್ತಿ : ಈ ದಿವಸ ಆ ಪ್ರಶ್ನೆ ಬಂದಿಲ್ಲ ಅದನ್ನು ಹೇಳುವುದು ಕಷ್ಟ.

* ಶ್ರೀ ಎಂ.ಪಿ. ಈಶ್ವರಪ್ಪ : ಒಂದು ವರುಷದ ಮಟ್ಟಿಗೆ ಪ್ರಾಯೋಗಿಕವಾಗಿ ತೆಗೆದುಕೊಂಡ ಕ್ರಮಗಳೇನು?

* ಶ್ರೀ ಬಿ.ಡಿ. ಜತ್ತಿ : ಕೆಲವು ಜಿಲ್ಲೆಗಳಲ್ಲಿಯ ಅಧಿಕಾರಿಗಳಿಗೆ ಕನ್ನಡದಲ್ಲಿ ಬರೆಯಲು ಮತ್ತು ಕನ್ನಡದಲ್ಲಿ ಉತ್ತರ ಕೊಡಲು ಪ್ರಾರಂಭಿಸಿರಿ ಎಂದು ನಾವು ಕೇಳಿದ್ದೇವೆ. ಕೆಲವು ಇಲಾಖೆಗಳಲ್ಲಿ ಅರ್ಜಿಗಳನ್ನು ಕನ್ನಡದಲ್ಲಿ ಸ್ವೀಕರಿಸಲು ಹೇಳಿದ್ದೇವೆ. ಉದಾಹರಣೆಗೆ ಗ್ರಾಮೀಣ ಪ್ರದೇಶಗಳ ಬಹುತೇಕ ಜನರಿಗೆ ಸಂಬಂಧ ಪಟ್ಟ ಮತ್ತು ಕಂದಾಯ ಇಲಾಖೆಗಳಲ್ಲಿ.

* ಶ್ರೀ ಎಂ.ಪಿ. ಈಶ್ವರಪ್ಪ : ಅವರು ನಿಮ್ಮ ಆದೇಶಗಳನ್ನು ಜಾರಿಯಲ್ಲಿ, ತಂದಿದ್ದಾರೆಯೆ?

* ಶ್ರೀ ಬಿ.ಡಿ. ಜತ್ತಿ : ಅವರು ಅದಕ್ಕೆ ಬದ್ಧರಾಗಿದ್ದಾರೆ. ಅದಕ್ಕೆಂದೇ ಅವರು ತಮ್ಮ ಅನುಭವಗಳನ್ನು ಹೇಳಿದ್ದಾರೆ ಮತ್ತು ಅವರು ಅದರಲ್ಲಿಯ ಕೆಲವು ತೊಂದರೆಗಳನ್ನು ಸೂಚಿಸುತ್ತ ಅವುಗಳನ್ನು ಹೇಗೆ ನಿವಾರಿಸಬಹುದೆಂದೂ ಹೇಳಿದ್ದಾರೆ.

* ಶ್ರೀ ಬಿ.ವಿ. ಬನುಮಯ್ಯ : ಸ್ವಾಮಿ, ಕನ್ನಡದಲ್ಲೇ ಈಗ ಬೇಕಾದ ಪುಸ್ತಕಗಳು ಬರೆಯಲ್ಪಟ್ಟು ದೊರೆಯುತ್ತಿರುವುದು ಸರಕಾರದ ಅವಗಾಹನೆಗೆ ಬಂದಿದೆಯೆ?

* ಶ್ರೀ ಬಿ.ಡಿ. ಜತ್ತಿ : ಬಂದಿದೆ.

* ಶ್ರೀ ಬಿ.ವಿ. ಬನುಮಯ್ಯ : ಅವುಗಳನ್ನು ಒದಗಿಸುವುದಕ್ಕೆ ಅಧಿಕಾರಿಗಳಿಗೆ ಸೂಕ್ತ ಸಲಹೆ ನೀಡಿ ಪ್ರಶ್ನಿಸುತ್ತೀರಾ?

* ಶ್ರೀ ಬಿ.ಡಿ. ಜತ್ತಿ : ಸರಕಾರದವರು ಪ್ರಯತ್ನ ಮಾಡುತ್ತಿದ್ದಾರೆ.

* ಶ್ರೀ ವಿ.ಆರ್. ನಾಯ್ಡು : ಕನ್ನಡವನ್ನು ವ್ಯವಹಾರ ಭಾಷೆಯಾಗಿ ಮಾಡಿದರೆ, ಕನ್ನಡ ಬರದಿರುವ ಕೆಲವು ಅಧಿಕಾರಿಗಳು ಮತ್ತು ಮಂತ್ರಿಗಳ ಗತಿಯೇನಾಗಬೇಕು.

* ಶ್ರೀ ಬಿ.ಡಿ. ಜತ್ತಿ : ಅವರು ಕನ್ನಡ ಕಲಿಯಬೇಕು.

* ಶ್ರೀ **ಗೋರೂರು ರಾಮಸ್ವಾಮಿ ಅಯ್ಯಂಗಾರ** : ವ್ಯವಸಾಯ ಮತ್ತು ಕಂದಾಯ ಇಲಾಖೆಗಳು ಈ ಎರಡರಲ್ಲಿ ಮಾತ್ರ ಪ್ರಯೋಗ ಮಾಡುತ್ತಿದ್ದೇವೆಂದು ಹೇಳಿದಿರಿ. ಬಾಕಿ ಇಲಾಖೆಗಳಲ್ಲೂ ಮಾಡಲು ಕಷ್ಟವೇನು?

* ಶ್ರೀ ಬಿ.ಡಿ. ಜತ್ತಿ : ಉದಾಹರಣೆಗೆ ಹೇಳಿದೆ. ಇತರ ಕಡೆಗೆ ಮಾಡುವುದಕ್ಕೆ ಯಾವ ವ್ಯತ್ಯಾಸವೂ ಇಲ್ಲ.

* ಶ್ರೀ ವಿ.ಆರ್. ನಾಯ್ಡು : ಈಗ ಉಪಸಚಿವರುಗಳಾದ ಶ್ರೀಮತಿ ಗ್ರೇಸರಕ್ಕರ್ ಮತ್ತು ಶ್ರೀ ಶಮಸುದ್ದೀನರವರಿಗೆ ಕನ್ನಡ ಬರುವುದಿಲ್ಲ ಅವರೇನು ಮಾಡಬೇಕು?

* ಶ್ರೀ ಬಿ.ಡಿ. ಜತ್ತಿ : ಶ್ರೀ ಶಮಸುದ್ದೀನವರಿಗೆ ಬರುತ್ತದೆ. ಅವರು ಮಾತನಾಡುವುದಕ್ಕೂ ನೀವು ಮಾತನಾಡುವುದಕ್ಕೂ ವ್ಯತ್ಯಾಸವಾಗಬಹುದೆಂದು ಹೆದರಿ ಅವರು ಕನ್ನಡದಲ್ಲಿ ಮಾತನಾಡುವುದಿಲ್ಲ.

* ಶ್ರೀ **ಹಾರನಹಳ್ಳಿ ರಾಮಸ್ವಾಮಿ** : ಈಗಿರುವ ಪ್ರಕಾರ ಎಷ್ಟು ವರುಷಗಳಲ್ಲಿ ಪೂರ್ಣವಾಗಿ ಕನ್ನಡವನ್ನು ಆಡಳಿತ ಭಾಷೆಯಾಗಿ ಉಪಯೋಗಿಸಬೇಕೆಂಬ ಅಭಿಪ್ರಾಯವಿದೆ?

* ಶ್ರೀ ಬಿ.ಡಿ. ಜತ್ತಿ : ಅಭಿಪ್ರಾಯ ಹೇಳುವುದು ಕಷ್ಟ.

* ಶ್ರೀ ಹಾರನಹಳ್ಳಿ ರಾಮಸ್ವಾಮಿ : ಎಷ್ಟು ವರ್ಷ ತಮ್ಮ ಯೋಜನೆ ಪ್ರಕಾರ ಬೇಕು?

* ಶ್ರೀ ಬಿ.ಡಿ. ಜತ್ತಿ : ಆದಷ್ಟು ಬೇಗನೆ ಮಾಡಬೇಕೆಂದಿದೆ.

* ಶ್ರೀ ಹಾರನಹಳ್ಳಿ ರಾಮಸ್ವಾಮಿ : ಕಾಲ ನಿಗದಿ ಮಾಡಿದೆಯೆ?

* ಶ್ರೀ ಬಿ.ಡಿ. ಜತ್ತಿ : ಇಲ್ಲ

* ಶ್ರೀ ಹಾರನಹಳ್ಳಿ ರಾಮಸ್ವಾಮಿ : 5 ವರ್ಷಗಳಲ್ಲಿ ಮಾಡಲಾಗುವುದೆ?

* ಶ್ರೀ ಬಿ.ಡಿ. ಜತ್ತಿ : ಕಾಲ ಮಿತಿ ಹೇಳಲಾಗುವುದಿಲ್ಲ.

* ಶ್ರೀ ಎಂ. ಟಿ. ಶ್ರೀಕಂಠಯ್ಯ : ಬಿಜಾಪುರದ ಕನ್ನಡ ಅಥವ ಮೈಸೂರು ಕನ್ನಡ ಉಪಯೋಗಿಸಬೇಕೆಂದು ಹೇಳಿದೆಯೆ?

* ಶ್ರೀ ಬಿ.ಡಿ. ಜತ್ತಿ : ಎರಡನ್ನೂ ಕೂಡಿಸಿ ಒಂದು ದಾಮಾಷಾ ಪ್ರಕಾರ ಉಪಯೋಗ ಮಾಡಬೇಕೆಂದಿದೆ.

* ಶ್ರೀ ಬಿ.ವಿ. ಬಸುಮಯ್ಯ : ಕನ್ನಡ ಬಾರದಿರುವ ಅಧಿಕಾರಿಗಳು ಮತ್ತು ಮಂತ್ರಿಗಳಿಗೆ ಅದನ್ನು ಹೇಳಿಕೊಡಲು ಏರ್ಪಾಡು ಮಾಡಿದೆಯೆ?

* ಶ್ರೀ ಬಿ.ಡಿ. ಜತ್ತಿ : ಆಗಲೇ ಕೆಲವರು ಕಲಿತಿದ್ದಾರೆ. ಇನ್ನು ಕೆಲವರು ಕಲಿಯುತ್ತಿದ್ದಾರೆ.

* **ಅಧ್ಯಕ್ಷರು** : ಪ್ರಶ್ನೋತ್ತರ ಅವಧಿ ಮುಗಿಯಿತು.

1958 ರಿಂದ 1968 ರ ವರೆಗೆ ಸುಮಾರು ಹತ್ತು ವರುಷಗಳ ಕಾಲ ಶ್ರೀ ಬಿ.ಡಿ. ಜತ್ತಿ ಅವರು ಕರ್ನಾಟಕ ರಾಜ್ಯದ (ಅಂದಿನ ಮೈಸೂರು ರಾಜ್ಯ) ಮುಖ್ಯ ಮಂತ್ರಿ, ಹಣಕಾಸು ಮಂತ್ರಿ ಮತ್ತು ಆಹಾರ ಮಂತ್ರಿಗಳಾಗಿ ಕಾರ್ಯ ನಿರ್ವಹಿಸಿದ್ದರು. ರಾಜ್ಯ ನಿರ್ಮಾಣದ ಪ್ರಾರಂಭದ ದಿನಗಳು. ಮೈಸೂರು ಸಂಸ್ಥಾನದಲ್ಲಿ ಚಲಾವಣೆಯಲ್ಲಿದ್ದ ಜಾಗತಿಕ ಪ್ರಸಿದ್ಧಿಯ ದಸರಾ ಮೆರವಣಿಗೆ ಮೊದಲ್ಗೊಂಡು ಅನೇಕ ಮೂಲ ಭೂತ ಪ್ರಶ್ನೆಗಳಿಗೆ ಮುಖ್ಯ ಮಂತ್ರಿಯಾಗಿ, ಔದ್ಯೋಗಿಕ ಬೆಳವಣಿಗೆಗಾಗಿ ಹಣಕಾಸು ಮಂತ್ರಿಯಾಗಿ, ಭೀಕರ ಬರಗಾಲ ಬಿದ್ದಾಗ ಆಹಾರ ಮಂತ್ರಿಗಳಾಗಿ ಕಾರ್ಯ ನಿರ್ವಹಿಸಿದರು.

ಅವರು ಮುಖ್ಯ ಮಂತ್ರಿಗಳಾಗಿ ಮೊದಲ ಸಲ ಎದುರಿಸಿದ 'ರಾಜ್ಯಪಾಲರ ಭಾಷಣಕ್ಕೆ ವಂದನಾ ನಿರ್ಣಯ' 'ಮೈಸೂರು ಅಪ್ರೋಪ್ರಿಯೇಶನ್ ಮಸೂದೆ' 'ಅವಿಶ್ವಾಸ ಗೊತ್ತುವಳಿ' ಗಳ ಮೇಲೆ.

ಹಣಕಾಸು ಮಂತ್ರಿಗಳಾಗಿ 'ಸಂಪನ್ಮೂಲ ಮತ್ತು ಆರ್ಥಿಕ ವ್ಯವಸ್ಥೆ' ಕುರಿತು ಮತ್ತು ಆಹಾರ ಮಂತ್ರಿಗಳಾಗಿ 'ಬರ ಪರಿಸ್ಥಿತಿ ನಿರ್ವಹಣೆ' ಕುರಿತಾದ ಕೆಲವು ಭಾಷಣಗಳು, ಪ್ರಶ್ನೋತ್ತರಗಳು ಇಂತಿವೆ.

## ದಸರಾ ಉತ್ಸವ

**6, ನವೆಂಬರ್ 1958**

**1957 ದಸರಾ ಉತ್ಸವ ಖರ್ಚು**

ಪ್ರಶ್ನೆ 2744 : ಶ್ರೀ ಯು. ಎಸ್. ನಾಯಕ (ಉಡುಪಿ)

ಎ) ಅಕ್ಟೋಬರ 1957 ರಲ್ಲಿ ಮೈಸೂರು ದಸರಾ ಉತ್ಸವಕ್ಕೆ ರಾಜ್ಯ ಬೊಕ್ಕಸದಿಂದ ಖರ್ಚಾದ ಹಣ ಎಷ್ಟು?

ಬಿ) ಜಂಬೂ ಸವಾರಿಗಾಗಿ ಎಷ್ಟು ಖರ್ಚಾಯಿತು?

ಉತ್ತರ : ಶ್ರೀ ಬಿ.ಡಿ. ಜತ್ತಿ (ಮುಖ್ಯ ಮಂತ್ರಿಗಳು)

ಎ) ರೂ. 1,46,705-78 ನಯೇ ಪೈಸೆಗಳು

ಬಿ) ರೂ. 27,039-04 ನಯೇ ಪೈಸೆಗಳು.

* ಶ್ರೀ ಯು.ಎಸ್. ನಾಯಕ : ಈ ವರುಷ ಎಷ್ಟು ಖರ್ಚಾಗಿದೆ?

* ಶ್ರೀ ಅಧ್ಯಕ್ಷರು : ಸರಕಾರಕ್ಕೆ ಮಾಹಿತಿ ಇದ್ದರೆ ಕೊಡಬಹುದು.

* ಶ್ರೀ ಬಿ.ಡಿ. ಜತ್ತಿ : ಪೂರ್ಣ ಮಾಹಿತಿ ಇಲ್ಲ. ಅದು ಎರಡು ಲಕ್ಷ ಅರವತ್ತು ಸಾವಿರ ಚಿಲ್ಲರೆ ಆದೀತು.

* ಶ್ರೀ ಅಧ್ಯಕ್ಷರು : ಜಂಬೂಸವಾರಿಗೆ ಆದ ಖರ್ಚು?

* ಶ್ರೀ ಬಿ.ಡಿ. ಜತ್ತಿ : ರೂ. 27,039-04 ಕಳೆದ ವರುಷ.

* ಶ್ರೀ ಅಧ್ಯಕ್ಷರು : ಈ ವರುಷ.

* ಶ್ರೀ ಬಿ.ಡಿ. ಜತ್ತಿ : ಈ ವರುಷದ ಬಗ್ಗೆ ನನ್ನಲ್ಲಿ ವಿವರಗಳಿಲ್ಲ.

* ಶ್ರೀ ವೆಂಕಟೇಗೌಡ : ಯಾವ ಉದ್ದೇಶಕ್ಕಾಗಿ ಮತ್ತು ಯಾತರ ಅಡಿಯಲ್ಲಿ ಈ 1,46,705-00 ರೂಪಾಯಿಗಳನ್ನು ಖರ್ಚು ಮಾಡಲಾಯಿತು?

* ಶ್ರೀ ಬಿ.ಡಿ. ಜತ್ತಿ : ಪ್ರಧಾನ ಖರ್ಚು ವಿದ್ಯುತ್ತಿಗಾಗಿ, ಉಳಿದಂತೆ ರಾಜ್ಯದ ಅತಿಥಿಗಳಿಗಾಗಿ, ತಾತ್ಪೂರ್ತಿಕ ಸಿಬ್ಬಂದಿಗಾಗಿ, ಪೆಟ್ರೋಲ ಮತ್ತು ಎಣ್ಣೆ, ಕೂಲಿ ಮತ್ತಿತರ ಕೆಲಸಗಳಿಗಾಗಿ ಖರ್ಚಾಗಿದೆ.

* ಶ್ರೀ ಜಿ. ಶಿವಪ್ಪ : ಇದರಲ್ಲಿ ಆಮಂತ್ರಿತರ ಖರ್ಚು ಸೇರಿದೆಯೆ?

* ಶ್ರೀ ಅಧ್ಯಕ್ಷರು : ಅಂದರೆ ಪೇಡ ಗೆಸ್ಟ?

* ಶ್ರೀ ಜಿ. ಶಿವಪ್ಪ : ಪೇಡ ಗೆಸ್ಟ, ಶಾಸನಸಭಾ ಸದಸ್ಯರು ಮತ್ತಿತರರಿಗಾಗಿ?

* ಶ್ರೀ ಬಿ.ಡಿ. ಜತ್ತಿ : ಇಲ್ಲ ಸರ್.

* ಶ್ರೀ ಜಿ. ಶಿವಪ್ಪ : ಕಳೆದ ವರುಷ ಅಥವ ಈ ವರುಷ ಶಾಸನ ಸಭಾ ಸದಸ್ಯರಿಗೆ ವಸತಿ ವ್ಯವಸ್ಥೆಯನ್ನೇ ಮಾಡಲಿಲ್ಲವಂತೆ, ಅದು ನಿಜವೆ?

* ಶ್ರೀ ಅಧ್ಯಕ್ಷರು : ನೀವು ಕಳೆದ ವರುಷಕ್ಕಷ್ಟೇ ಕೇಳಿದ್ದೀರಿ.

* ಶ್ರೀ ಜಿ. ಶಿವಪ್ಪ : 2000 - 3000 ರೂಪಾಯಿಗಳ ಸಂಬಳ ತೆಗೆದುಕೊಳ್ಳತಕ್ಕ ಆಫೀಸರುಗಳಿಗೆ ಕೊಡುವಷ್ಟು ವಸತಿ ವ್ಯವಸ್ಥೆಯನ್ನು ಕೂಡ ಈ ಅಸೆಂಬ್ಲಿಯ ಸದಸ್ಯರುಗಳಿಗೆ ಕೊಡದಿರುವುದು ಸರಕಾರದ ಗಮನಕ್ಕೆ ಬಂದಿದೆಯೆ?

* ಶ್ರೀ ಬಿ.ಡಿ. ಜತ್ತಿ : ಮೈಸೂರು ಪಟ್ಟಣದಲ್ಲಿರುವ ಒಳ್ಳೆಯ ಬಿಲ್ಡಿಂಗುಗಳನ್ನು ತೆಗೆದುಕೊಂಡು ಎಷ್ಟು ಒಳ್ಳೆಯ ಅರೇಂಜಮೆಂಟ ಮಾಡಬಹುದೋ ಅಷ್ಟು ಮಾಡಿದೆ.

* ಶ್ರೀ ಜಿ. ಶಿವಪ್ಪ : ಅನೇಕ ಮಾನ್ಯ ಸದಸ್ಯರುಗಳು (ಮಾನ್ಯ ಈಗಿನ ಮುಖ್ಯ ಮಂತ್ರಿಗಳೂ ಸಹ) ಹಿಂದಿನ ವರ್ಷ ಮತ್ತು ಈ ವರ್ಷ ಅಲ್ಲಿಗೆ ಹೋದಾಗ ಇಳಿದುಕೊಳ್ಳಲಿಕ್ಕೆ ಸ್ಥಳಕ್ಕೆ ತೊಂದರೆಯಾಗಿ ರಸ್ತೆಯಲ್ಲೇ ತಿರುಗಾಡಿಕೊಂಡಿದ್ದುದು ಸರಕಾರದ ಗಮನಕ್ಕೆ ಬಂದಿದೆಯೆ?

* ಶ್ರೀ ಅಧ್ಯಕ್ಷರು : ಈ ವರ್ಷದ ವಿಚಾರ ಬೇಡ, ಹಿಂದಿನ ವರ್ಷದ್ದು ಹೇಳಿ.

* ಶ್ರೀ ಬಿ.ಡಿ. ಜತ್ತಿ : ಹೋದ ವರ್ಷ ಶಿವಪ್ಪನವರ ಜೊತೆ ತಿರುಗಾಡುತ್ತಿದ್ದುದು ಸರಿ. ಈ ಸಾರಿ ಸರಿಯಾದ ಏರ್ಪಾಡಾಗಿತ್ತು.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ಇಷ್ಟು ಹಣವನ್ನು ಯಾವ ಬಜೆಟ್ ಹೆಡ್‌ನಿಂದ ಖರ್ಚು ಮಾಡಿದ್ದೀರಿ?

* ಶ್ರೀ ಬಿ.ಡಿ. ಜತ್ತಿ : ಸರಕಾರದ್ದು.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ತಾವೀಗ ಇಲ್ಲಿ 1,40,705-00 ಮತ್ತು 27,039-00 ರೂಪಾಯಿಗಳು ಈ ಸಂಬಂಧದಲ್ಲಿ ಖರ್ಚಾಗಿದೆಯೆಂದು ಹೇಳಿದಿರಿ. ಇದು ಸರಕಾರದ ಹಣವೇ ಅಥವ ಅರಮನೆಯದೂ ಸೇರಿದೆಯೇ?

* ಶ್ರೀ ಅಧ್ಯಕ್ಷರು : ಬಜೆಟ್‌ನ್ನು ತಾವು ನೋಡಿದರೆ ಗೊತ್ತಾಗುತ್ತದೆ.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ಮುಖ್ಯ ಮಂತ್ರಿಗಳಿಂದ ನಾನು ಉತ್ತರ ಬಯಸುತ್ತೇನೆ. ಅವರು ಹೇಳಲಿ.

* ಶ್ರೀ ಅಧ್ಯಕ್ಷರು : ಇಲ್ಲ ಇಲ್ಲ.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ರೂ. 1,46,705-00 ಗಳಲ್ಲಿ ಸರಕಾರೀ ಅತಿಥಿಗಳಿಗೆ ಎಷ್ಟು ಖರ್ಚಾಗಿದೆ?

* ಶ್ರೀ ಬಿ.ಡಿ. ಜತ್ತಿ : ಆ ವಿವರಗಳು ನನ್ನಲ್ಲಿ ಇಲ್ಲ. ಅವಶ್ಯ ಎನಿಸಿದರೆ ಸಭೆಗೆ ತಿಳಿಸುವೆ.

* ಶ್ರೀ ಸಿ.ಜಿ. ಮುಕ್ಕಣ್ಣಪ್ಪ : ಈ ಜಂಬೂ ಸವಾರಿಯನ್ನು ಮುಂಬರುವ ರಾಜ್ಯಪಾಲರುಗಳಿಗೂ ಮುಂದುವರಿಸಲಾಗುತ್ತದೆಯೆ?

* ಶ್ರೀ ಬಿ.ಡಿ. ಜತ್ತಿ : ಬರುವ ರಾಜ್ಯಪಾಲರುಗಳು ಆನೆಯ ಮೇಲೆ ಕೂಡಲು ಬಯಸಿದರೆ ನಮಗೇನು ಅಭ್ಯಂತರವಿಲ್ಲ.

* ಶ್ರೀ ಜಿ.ಎಸ್. ಪುಟ್ಟಣ್ಣ : ಮಾನ್ಯರೆ, ಆ ಕುರಿತು ಉತ್ತರಿಸುವಾಗ ನೀವು 1,46,000-00 ಎಂದು ಹೇಳಿದಿರಿ. ಅದರಲ್ಲಿ ಸರಕಾರಿ ಸಿಬ್ಬಂದಿಯ ಮತ್ತು ಸಚಿವರ ಖರ್ಚು ಸೇರಿದೆಯೆ?

* ಶ್ರೀ ಬಿ.ಡಿ. ಜತ್ತಿ : ಇಲ್ಲ ಸರ್.

* ಶ್ರೀ ಈ ನಾರಾಯಣಗೌಡ : ಎಗ್ಜಿಬಿಶನ್‌ಗೋಸ್ಕರ ಎಷ್ಟು ಖರ್ಚು ಮಾಡಿದ್ದೀರಿ? ಎಷ್ಟು ಲಾಭ ಬಂದಿದೆ?

* ಶ್ರೀ ಬಿ.ಡಿ. ಜತ್ತಿ : ಸಧ್ಯ ನನ್ನಲ್ಲಿ ಆ ವಿವರಗಳಿಲ್ಲ. ಅನಂತರ ಕೊಡುವೆ.

* ಶ್ರೀ ಟಿ. ಹನುಮಯ್ಯ : ಸರಕಾರದವರು ಖರ್ಚು ಮಾಡುವ ಹಣಕ್ಕಿಂತಲೂ ಹೆಚ್ಚಿಗೆ ಲಾಭ ದಸರ ಉತ್ಸವದಿಂದ ಬರುತ್ತಿರುವುದು ಸರಕಾರದ ಗಮನಕ್ಕೆ ಬಂದಿದೆಯೆ?

* ಶ್ರೀ ಬಿ.ಡಿ. ಜತ್ತಿ : ನೇರವಾಗಿ ಅಲ್ಲದಿದ್ದರೂ ಇತರ ವಿಧಗಳಿಂದ ಸರಕಾರಕ್ಕೆ ಲಾಭವಾಗುತ್ತಿದೆ.

* ಶ್ರೀ ಎಫ್.ಎಚ್. ಮೊಹಸಿನ : ದಸರಾ ಉತ್ಸವದಿಂದ ಲಭಿಸುವ ನೇರ ಹಾಗೂ ಪರೋಕ್ಷ ಲಾಭಗಳನ್ನು ತಿಳಿಯಬಯಸುವೆ.

* ಶ್ರೀ ಬಿ.ಡಿ. ಜತ್ತಿ : ವಿವಿಧ ಸಂಗೀತಗಾರರಿಗೆ ತಮ್ಮ ಟ್ಯಾಲೆಂಟನ್ನು ತೋರಿಸಲು ಅವಕಾಶವಾಗುತ್ತದೆ. ಅದರಂತೆ ಈ ರಾಜ್ಯದಲ್ಲಿಯ ವಿವಿಧ ಚಟುವಟಿಕೆಗಳಲ್ಲಿ ತೊಡಗಿರುವವರಿಗೂ ತಮ್ಮ ನೈಪುಣ್ಯತೆಯನ್ನು ತೋರಿಸಲು ಅವಕಾಶ ಇದೆ. ಬೇರೆ - ಬೇರೆ ಅನೇಕ ಕಾರಖಾನೆಗಳಲ್ಲಿ ತಯಾರಾಗುವ ಸಾಮಾನುಗಳ ಪ್ರದರ್ಶನ ಮತ್ತು ಆ ದಿನಗಳಲ್ಲಿ ಅಲ್ಲದೆ ಅನಂತರ ಅವುಗಳ ಮಾರಾಟದಲ್ಲಿ ಅಧಿಕತೆಯಾಗುತ್ತದೆ. ಆದ್ದರಿಂದ ರಾಜ್ಯಕ್ಕೆ ಮತ್ತು ಜನರಿಗೆ ಅನೇಕ ಲಾಭಗಳಿವೆ.

* ಶ್ರೀ ಬಿ. ರಾಚಯ್ಯ : ರಾಜ್ಯದ ಹಣದಿಂದ ಇಂಥ ರಾಜ್ಯ ಮೆರವಣಿಗೆ ಪ್ರಜಾಪ್ರಭುತ್ವ ಮತ್ತು ಸಮಾಜವಾದೀ ತತ್ವಗಳ ವಿರುದ್ಧ ಎನಿಸುವುದಿಲ್ಲವೆ?

* ಶ್ರೀ ಬಿ.ಡಿ. ಜತ್ತಿ : ನನಗೆ ಹಾಗೆ ಅನಿಸುವುದಿಲ್ಲ ಯಾಕೆಂದರೆ ಪ್ರಜಾಪ್ರಭುತ್ವದಲ್ಲಿ ಬಹು ಜನರ ಇಚ್ಛೆಯನ್ನು ಅನುಸರಿಸಬೇಕಾಗುತ್ತದೆ.

* ಶ್ರೀ ಎಂ. ರಾಮಪ್ಪ : ದರ್ಬಾರಿಗೋಸ್ಕರ ಏನಾದರೂ ಹಣ ಖರ್ಚಾಗಿದೆಯೆ?

* ಶ್ರೀ ಬಿ.ಡಿ. ಜತ್ತಿ : ದರ್ಬಾರು ಮಹಾರಾಜರ ಖಾಸಗೀ ಮತ್ತು ಧಾರ್ಮಿಕ ವಿಷಯ. ಆದ್ದರಿಂದ ಸರಕಾರವು ದರ್ಬಾರಿಗಾಗಿ ಏನನ್ನೂ ಖರ್ಚು ಮಾಡುವ ಅವಶ್ಯಕತೆ ಇಲ್ಲ.

* ಶ್ರೀ ಜಿ. ದುಗ್ಗಪ್ಪ : ಆ ಪ್ರಶ್ನೆಗೆ ಪೂರಕವಾಗಿ, ಮೈಸೂರಿನ ದಸರಾ ಉತ್ಸವದಲ್ಲಿ ಸರಕಾರವು ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಎಷ್ಟು ಖರ್ಚು ಮಾಡಿದೆ ಎಂದು ಹೇಳುವಿರಾ?

* ಶ್ರೀ ಬಿ.ಡಿ. ಜತ್ತಿ : ಮಾನ್ಯ ಸದಸ್ಯರು ಬಯಸಿದರೆ ಎಲ್ಲ ಅಂಕಿ ಸಂಖ್ಯೆಗಳನ್ನು ನಾಳೆ ಅಥವ ನಾಳಿದ್ದು ಕೊಡಬಹುದು.

* ಶ್ರೀ ಎನ್.ಜಿ. ನರಸಿಂಹೇಗೌಡ : ರೂ. 1,46,705-00 ರಲ್ಲಿ ಅಸೆಂಬ್ಲಿ ಮತ್ತು ಕೌನ್ಸಿಲ್ ಮೆಂಬರುಗಳ ಟಿ.ಎ. ಅಕಾಮಡೇಶನ್ನಿಗೋಸ್ಕರ ಎಷ್ಟು ಖರ್ಚಾಗಿದೆ?

* ಶ್ರೀ ಅಧ್ಯಕ್ಷರು : ಆ ಖರ್ಚು ಇದರೊಳಗೆ ಬರುವುದಿಲ್ಲ.

* ಶ್ರೀ ಜೆ.ಪಿ. ಸರ್ವೇಶ : ಜಂಬೂ ಸವಾರಿಗಾಗಿ ಖರ್ಚು ಮಾಡಿದ್ದು ಸಾರ್ವಜನಿಕರ ಹಿತಕ್ಕಾಗಿಯೇ? ಮತ್ತು ಭಾರತದ ಉಳಿದ ರಾಜ್ಯಗಳಲ್ಲಿ ಇಂಥ ಜಂಬೂ ಸವಾರಿ ನಡೆಯುವ ರಾಜ್ಯಗಳ ಹೆಸರುಗಳನ್ನು ಹೇಳಬಲ್ಲಿರಾ?

* ಶ್ರೀ ಬಿ.ಡಿ. ಜತ್ತಿ : ಈ ವಿಷಯದಲ್ಲಿ ನಮ್ಮ ದೇಶದಲ್ಲಿ ಎಲ್ಲ ರಾಜ್ಯಗಳಲ್ಲಿ ಒಂದೇ ರೀತಿ ಇರಲು ಸಾಧ್ಯವಿಲ್ಲ. ಇಲ್ಲಿ ಮೈಸೂರಿನಲ್ಲಿ ಇದೊಂದು ವಿಶೇಷ ಸಂಗತಿ ಮತ್ತು ಎಲ್ಲ ಜನರು ಅದನ್ನು ಬಯಸುತ್ತಾರೆ ಮತ್ತು ಅದನ್ನು ನಡೆಸಲಾಗುತ್ತದೆ.

* ಶ್ರೀ ಬಿ.ಕೆ. ಪುಟ್ಟರಾಮಯ್ಯ : ಮಹಾರಾಜರು ಪಟ್ಟಕ್ಕೆ ಕುಳಿತುಕೊಳ್ಳುವ ದಿವಸ, ಅವರು ಸಂತೋಷಕ್ಕೆ ಕರೆಸುವ ಸೈಕಲ್ ಆರ್ಡರ್ಲಿಗಳಿಗೊಸ್ಕರ ಎಷ್ಟು ಹಣ ಖರ್ಚಾಗಿದೆ?

* ಶ್ರೀ ಜೆ.ಬಿ. ಮಲ್ಲಾರಾಧ್ಯ : ಸೈಕಲ್ ಆರ್ಡರ್ಲಿಗಳನ್ನೇನಾದರೂ ಉಪಯೋಗಿಸಿದ್ದಿರಾ?

* ಶ್ರೀ ಅಧ್ಯಕ್ಷರು : ಈ ಪ್ರಶ್ನೆ ಕಳೆದ ವರುಷಕ್ಕೆ ಮಾತ್ರ ಸಂಬಂಧಿಸಿದೆ.

* ಶ್ರೀ ಯು.ಎಸ್. ನಾಯಕ : ಈ ವರುಷದ ಜಂಬೂ ಸವಾರಿಯಲ್ಲಿ ಯಾರನ್ನಾದರೂ ಬಂಧಿಸಿದ್ದಿರಾ?

* ಶ್ರೀ ಅಧ್ಯಕ್ಷರು : ಇಲ್ಲ, ಪ್ರಶ್ನೆ ಕಳೆದ ವರುಷಕ್ಕೆ ಸಂಬಂಧಿಸಿದ್ದು.

* ಶ್ರೀ ಯು.ಎಸ್. ನಾಯಕ : ಊಳಿಗಮಾನ್ಯ ಪದ್ಧತಿಯ ಶೇಷವಾಗಿ ಉಳಿದಿರುವ ಈ ಜಂಬೂ ಸವಾರಿಯನ್ನು ಬಿಟ್ಟು ಬಿಡಬೇಕೆಂದು ಸರಕಾರಕ್ಕೆ ಅನಿಸುತ್ತಿಲ್ಲವೆ.

* ಶ್ರೀ ಬಿ.ಡಿ. ಜತ್ತಿ : ರಾಜ್ಯದ ಜನರು ಎಲ್ಲಿಯವರೆಗೆ ಅದನ್ನು ಬಯಸುತ್ತಾರೋ - ಅಲ್ಲಿಯವರೆಗೆ ಅದನ್ನು ನಿಲ್ಲಿಸುವ ಪ್ರಶ್ನೆಯೇ ಇಲ್ಲ.

* ಶ್ರೀ ಜಿ. ವೆಂಕಟೇಗೌಡ : ಜನರ ಅಭಿಪ್ರಾಯವನ್ನು ಅದು ಹೇಗೆ ಬೆಲೆ ಕಟ್ಟುತ್ತೀರಿ?

* ಶ್ರೀ ಬಿ.ಡಿ. ಜತ್ತಿ : ಉತ್ಸವಕ್ಕೆ ಮತ್ತು ವಿಶೇಷವಾಗಿ ಜಂಬೂ ಸವಾರಿಗಾಗಿ ನೋಡಲು ಬರುವ ಜನರ ಸಂಖ್ಯೆಯಿಂದ.

* ಶ್ರೀ ಜಿ.ಬಿ. ಶಂಕರರಾವ : ಆದನ್ನೊಂದು ರಾಜ್ಯದ ಉತ್ಸವವೆಂದು ಪರಿಗಣಿಸುತ್ತೀರಾ?

* ಶ್ರೀ ಬಿ.ಡಿ. ಜತ್ತಿ : ಎಸ್. ಸರ್.

* ಶ್ರೀ ಟಿ. ಹನುಮಯ್ಯ : ದಸರಾ ಫೆಸ್ಟಿವಲ್‌ನಿಂದ, ಸಾರ್ವಜನಿಕರಿಂದ ಸರಕಾರಕ್ಕೆ ಹೆಚ್ಚಿಗೆ ಬೆನಿಫಿಟ್ ಆಗುತ್ತಾ ಇರುವುದು ಸರಕಾರದ ಗಮನಕ್ಕೆ ಬಂದಿದೆಯೆ?

* ಶ್ರೀ ಬಿ.ಡಿ. ಜತ್ತಿ : ಲಾಭವೇನೋ ಆಗುತ್ತದೆ.

* ಶ್ರೀ ಎಫ್.ಎಚ್. ಮೊಹಸಿನ್ : ಮುಂದಿನ ವರುಷದಿಂದ, ರಾಜ್ಯಪಾಲರ ಜೊತೆಗೆ ಮಂತ್ರಿಗಳೂ - ಉಪಮಂತ್ರಿಗಳೂ ಆನೆಯ ಮೇಲೆ ಮೆರವಣಿಗೆಗೆ ಹೋಗಬೇಕೆಂದು ಸಚಿವ ಸಂಪುಟದಲ್ಲಿ ತೀರ್ಮಾನವಾದದ್ದು ನಿಜವೆ? (ನಗು)

* ಅಧ್ಯಕ್ಷರು : ಆರ್ಡರ್, ಆರ್ಡರ್.

* ಶ್ರೀ ಬಿ. ರಾಚಯ್ಯ : ಸರ್, ಈ ಮೆರವಣಿಗೆಯನ್ನು ಮುಂದುವರಿಸಬೇಕೆಂದು ಆದು ಹೇಗೆ ಜನಾಭಿಪ್ರಾಯವನ್ನು ಪಡೆದಿರಿ?

* ಶ್ರೀ ಬಿ.ಡಿ. ಜತ್ತಿ : ಬಹಳ ವರ್ಷಗಳಿಂದ ಈ ಉತ್ಸವ ನಡೆಯುತ್ತಿದೆ ಮತ್ತು ಬಹಳಷ್ಟು ಜನರು ಇದನ್ನು ನೋಡಲು ಈ ಸ್ಥಳಕ್ಕೆ ಬರುತ್ತಾರೆ. ಶಾಸನ ಸಭಾ ಸದಸ್ಯರಿಗೂ ಇದರಲ್ಲಿ ಇಂಟರೆಸ್ಟ ಇದೆ. ಅದಕ್ಕೆಂದೆ ಅವರಿಗೆ ಸರಿಯಾದ ವಸತಿ ವ್ಯವಸ್ಥೆಯಾಗಲಿಲ್ಲವೆಂದು ದೂರುತ್ತಿದ್ದಾರೆ. ಅವುಗಳ ಮೇಲಿಂದ ನಾವು ತಿಳಿಯಬಹುದು.

## ಔದ್ಯೋಗಿಕ ಮಸೂದೆಗೆ ಮೈಸೂರು ರಾಜ್ಯದ ಅನುದಾನ

## 4, ನವೆಂಬರ 1958

* ಶ್ರೀ ಬಿ.ಡಿ. ಜತ್ತಿ : ಅಧ್ಯಕ್ಷರೆ ಇದುವರೆಗೆ ಕೆಲವು ಮಾನ್ಯ ಸದಸ್ಯರು. ತಮ್ಮ ಸಲಹೆಗಳನ್ನು ಈ ಮಸೂದೆಯ ಮೇಲೆ ಮಾಡಿದ್ದಾರೆ. ಕೆಲವು ಸಲಹೆಗಳು ಬಹಳ ಉಪಯೋಗಕರವಾದವುಗಳಾಗಿವೆ. ಮಾನ್ಯ ಸದಸ್ಯರಾದಂಥ ಶ್ರೀ ಗದಗ್‌ರವರು ಕೈಗಾರಿಕೆಯನ್ನು ಅಭಿವೃದ್ಧಿ ಪಡಿಸಲು ಸಾಲಕ್ಕಾಗಿ ಅರ್ಜಿ ಕೊಟ್ಟ ಜನರಿಗೆ ಅವರ ಅರ್ಜಿಗಳು ಜಾಗ್ರತೆ ಇತ್ಯರ್ಥವಾಗದೆ ಅನೇಕ ದಿವಸಗಳು ತಡವಾಗಿ ಅದರಿಂದ ಬರತಕ್ಕ ಲಾಭ ಬರುವುದಿಲ್ಲ. ಆಗಬೇಕಾದಂಥ ಒಂದು ಕೈಗಾರಿಕೆ ಅಥವಾ ಉದ್ಯೋಗಕ್ಕೆ ಅದರಿಂದ ಯಾವ ಪ್ರಯೋಜನವಾಗುವುದಿಲ್ಲ, ಆದ್ದರಿಂದ ಈ ವಿಷಯವನ್ನು ವಿಚಾರಮಾಡಿ ಈಗಿರತಕ್ಕ ಪ್ರೋಸಿಜರ ಸರಿಪಡಿಸಿ ಅರ್ಜಿಗಳು ಬಂದ ನಂತರ ತಾತ್ಕಾಲಿಕವಾಗಿ ನಿರ್ಣಯ ಮಾಡುವ ರೀತಿಯನ್ನು ಗೊತ್ತುಮಾಡಬೇಕೆಂದು ಸಲಹೆ ಮಾಡಿದರು. ಅದನ್ನು ಸರಕಾರದವರು ಗಮನದಲ್ಲಿಟ್ಟುಕೊಂಡು ಅವರ ಸಲಹೆಯನ್ನು ಪರ್ಯಾಲೋಚಿಸಲಾಗುವುದು.

ಇನ್ನು ಶ್ರೀ ಜೆ.ಬಿ. ಮಲ್ಲಾರಾಧ್ಯರು ಒಂದೊಂದು ಕೈಗಾರಿಕೆಗೆ ನಿರ್ದಿಷ್ಟವಾಗಿ ಇಂತಿಷ್ಟು ಹಣವನ್ನು ಸರಕಾರದಿಂದ ಒದಗಿಸಲಾಗಿದೆ, ಆ ರೀತಿ ಸರಕಾರ ಕೊಡುತ್ತಿದೆ ಎಂಬ ಅಂಶವನ್ನು ಸ್ಪಷ್ಟವಾಗಿ ಈ ಮಸೂದೆಯಲ್ಲಿ ಹೇಳಲಿಲ್ಲವೆಂದು ಹೇಳಿದರು. ಅದರಂತೆಯೇ ಒಂದು ದೊಡ್ಡ ಉದ್ಯೋಗ ಪ್ರಾರಂಭಮಾಡಿ ಬಡ್ಜೆಟ್‌ನಲ್ಲಿ ಪ್ರೋವೈಡ ಮಾಡಿದಂತೆ ಒಂದೇ ಇಂಡಸ್ಟ್ರಿಗೆ ಹಣ ಕೊಡುವುದು ಸರಿಯಾಗಿಲ್ಲ. ಈ ಮಸೂದೆಯನ್ನು ತಂದಿರುವ ಮುಖ್ಯ ಉದ್ದೇಶ ಒಂದೆ ಇಂಡಸ್ಟ್ರಿಗೆ ಹೆಚ್ಚು ಹಣ ಕೊಡುವುದನ್ನು ತಪ್ಪಿಸಿ ಸಣ್ಣ - ಪುಟ್ಟ ಕೈಗಾರಿಕೆಗಳು ಹೆಚ್ಚಾಗಿ ಬೆಳೆಯಬೇಕೆಂಬುದು. ಅದರಲ್ಲೂ ಕೂಡ ಯಾವ ಭಾಗದಲ್ಲಿ ಯಾವ ತರಹ ಉದ್ಯೋಗ ಆಗಿಲ್ಲವೋ ಸಕಾಲಕ್ಕೆ ಅಲ್ಲಿ ಹಣ ಸಿಕ್ಕುವ ಉದ್ದೇಶದಿಂದ ಈ ಮಸೂದೆಯನ್ನು ತಂದದ್ದು. ಈ ಮಸೂದೆಯ ಮೇಲೆ ಮಾನ್ಯ ಸದಸ್ಯರು ಮಾಡಿದ ಟೀಕೆಗಳನ್ನು ಸೆಲೆಕ್ಟ್ ಕಮಿಟಿಗೆ ಹೋಗುವ ಕಾಲಕ್ಕೆ ವಿಚಾರ ಮಾಡಲಾಗುತ್ತದೆ, ಆದರೆ ಎಲ್ಲಾ ಸದಸ್ಯರು ಕೊಟ್ಟಂಥ ಸಲಹೆಗಳೆಲ್ಲವನ್ನು ಕಮಿಟಿ ಒಳಗೆ ವಿಚಾರ ಮಾಡುತ್ತಾರೋ ಇಲ್ಲವೋ ಎಂಬ ಒಂದು ಸಂಶಯವನ್ನು ಕೆಲವು ಸದಸ್ಯರು ವ್ಯಕ್ತಪಡಿಸಿದರು. ಕೆಲವು ಸಂದರ್ಭಗಳಲ್ಲಿ ಆ ರೀತಿ ಹೇಳುವುದು ಸರಿಯಲ್ಲ. ಅಂತಹ ಆರೋಪಣೆಗಳು ಸದಸ್ಯರಿಂದ ಯಾವುದು ಆಗದ ರೀತಿಯಲ್ಲಿ ನೋಡಿಕೊಳ್ಳುವುದು ಸರಕಾರದ ಕರ್ತವ್ಯ. ಅದನ್ನೂ ಕೂಡ ಸೆಲೆಕ್ಟ್ ಕಮಿಟಿಯಲ್ಲಿ ದೀರ್ಘವಾಗಿ ಚರ್ಚೆ ಮಾಡಬೇಕಾಗಿದೆ. ಇದಲ್ಲದೆ ನಾವು ಬಡ್ಜೆಟ್ಟಿನೊಳಗೆ ಈ ಬಗ್ಗೆ ಎಷ್ಟು ಹಣ ಕೊಡಬೇಕು ಎಂಬುದನ್ನು ಗೊತ್ತು ಮಾಡದಿದ್ದರೆ, ಜನರಿಗೆ ಒಳ್ಳೆಯದಾಗುವುದಿಲ್ಲ, ನಿಜವಾಗಿಯೂ ನಿರುದ್ಯೋಗತನ ಕಡಿಮೆಯಾಗುವದಿಲ್ಲ. ಸಣ್ಣ ಸಣ್ಣ ಕೈಗಾರಿಕೆಗಳು ಹೆಚ್ಚಿಗೆ ಬೆಳೆಯ ಬೇಕಾಗಿದ್ದರೆ ಬಡ್ಜೆಟ್ಟಿನೊಳಗೆ ಆ ಸಣ್ಣ ಪುಟ್ಟ ಕೈಗಾರಿಕೆಗಳ ಇಷ್ಟಿಷ್ಟು ಹಣವನ್ನೊದಗಿಸಬೇಕೆನ್ನುವ ವ್ಯವಸ್ಥೆ

ಮಾಡುವುದು ಸರಿಯೆಂದು ನನಗೆ ಕಾಣುತ್ತದೆ. ಅದನ್ನು ಬಿಟ್ಟು ದೊಡ್ಡ ದೊಡ್ಡ ಕೈಗಾರಿಕೆಯ ಉದ್ಯೋಗದ ಸಲುವಾಗಿ ಇಷ್ಟು ಹಣವೆಂದು ಪ್ರೊವೈಡ್ ಮಾಡುವುದು ಸರಿಯಲ್ಲ. ಇದಲ್ಲದೆ ಇಂಡಸ್ಟ್ರಿಯಲ್ ಫೈನಾನ್ಸ್ ಕಾರ್ಪೊರೇಷನ್ ಮತ್ತು ಬೇರೆ ಕಾರ್ಪೋರೋಷನ್‌ಗಳಿಗೆ ಈ ದೃಷ್ಟಿಯಿಂದ ಹಣವನ್ನು ಎಲ್ಲಾ ಕಡೆಗೂ ಕೊಡುವಂತೆ ಸೂಚನೆಕೊಟ್ಟು ಅಂತಹ ಉದ್ಯೋಗಗಳನ್ನು ಪ್ರಾರಂಭ ಮಾಡಬಹುದು. ಚಿಕ್ಕ ಪುಟ್ಟ ಉದ್ಯೋಗಗಳಿಗೆ ಈ ರೀತಿ ವ್ಯವಸ್ಥೆ ಮಾಡುವ ಪದ್ಧತಿ ಸರಿಯೆಂದು ನನಗೆ ತೋರುತ್ತದೆ. ಇದೆಲ್ಲವೂ ಕಾನೂನು ಆಗುವುದರೊಳಗೆ ವಿಚಾರ ಮಾಡಲಾಗುತ್ತದೆ ಇನ್ನು ಕೆಲವು ಶಬ್ದ ದೋಷಗಳು ಈ ಮಸೂದೆಯಲ್ಲಿ ಅಡಕವಾಗಿವೆ ಎಂದು ಕೆಲವರು ಹೇಳಿದರು ಮತ್ತು ಕೆಲವು ಸಬ್-ಕ್ಲಾಜ್‌ಗಳ ತಿದ್ದುಪಡಿಗಳ ಮೇಲೆ ಕೆಲವು ಸೂಚನೆಗಳನ್ನೂ ಸಹ ಮಾಡಿದರು. ಇವೆಲ್ಲ ಸೂಚನೆಗಳನ್ನು ಸೆಲೆಕ್ಟ್ ಕಮಿಟಿಗೆ ಕಳುಹಿಸುವ ಕಾಲಕ್ಕೆ ನಾವು ವಿಚಾರಮಾಡಿ ಯುಕ್ತವಾದ ತಮ್ಮ ಸಲಹೆಗಳನ್ನು ಮಸೂದೆಯಲ್ಲಿ ಇನ್‌ಕಾರ್ಪೊರೇಟ್ ಮಾಡಿ ಸೆಲೆಕ್ಟ್ ಕಮಿಟಿಯ ವರದಿ ಬಂದ ಅನಂತರ ಎಲ್ಲ ತರಹದ ಭಿನ್ನಾಭಿಪ್ರಾಯಗಳನ್ನು ಚರ್ಚಿಮಾಡಿ ಕೊನೆಗೆ ಕಾನೂನು ಆಗಲಿಕ್ಕೆ ಅವಕಾಶ ಸಿಕ್ಕುತ್ತದೆಂದು ನಾನು ಹೇಳುತ್ತೇನೆ. ಬೋರ್ಡ್ ಆಫ್ ಇಂಡಸ್ಟ್ರೀಸ್ ಬಗ್ಗೆ ಕೆಲವು ಸ್ನೇಹಿತರು ಕೆಲವು ಅಂಶಗಳನ್ನು ಸೂಚನೆಮಾಡಿದರು. ಅಸೆಂಬ್ಲಿ ಕಾಂಗ್ರೆಸ್ ಪಕ್ಷದವರು ಬೇರೆ, ಉಳಿದವರೇ ಬೇರೆ ಬೇರೆ ಎಂಬುದಾಗಿ ವಾದಿಸಿದರು. ಯಾವ ಕಾಲಕ್ಕೂ ಆ ರೀತಿ ನನ್ನ ಮಾನ್ಯ ಸ್ನೇಹಿತರು ತಿಳಿಯಬಾರದು. ಎಲ್ಲ ಪಕ್ಷಗಳವರೂ ಒಂದೇ. ಎಲ್ಲಾ ಪಕ್ಷಗಳಲ್ಲಿರುವವರೂ ಬೋರ್ಡಿನಲ್ಲಿರಬೇಕು ಎಂಬುದೇ ನನ್ನ ಆಶಯ. ಈ ಮಸೂದೆಗೆ ಸಂಬಂಧಪಡುವ ಸೆಲೆಕ್ಟ್ ಕಮಿಟಿಯೊಳಗಾಗಲಿ ಬೋರ್ಡ್ ಆಫ್ ಇಂಡಸ್ಟ್ರೀಸ್‌ನಲ್ಲಾಗಲಿ ಒಂದೇ ಪಕ್ಷದವರು ಇರಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಈ ಸಮಿತಿಯನ್ನು ರಚಿಸಬೇಕೆಂಬ ಭಾವನೆ ಸರ್ಕಾರಕ್ಕಿಲ್ಲ. ಅಸೆಂಬ್ಲಿಯ ಸದಸ್ಯರಿಗೆ ಕೈಗಾರಿಕೆಗಳಲ್ಲಿ ಅನುಭವ, ಜ್ಞಾನವಿಲ್ಲವೆಂದು ನಾನು ತಿಳಿದುಕೊಂಡಿಲ್ಲ. ಕೇವಲ ಹೊರಗಿನವರೇ ಇದರಲ್ಲಿ ಸದಸ್ಯರಾಗಿರಬೇಕೆಂಬುದನ್ನು ಸಹ ನಾನು ಒಪ್ಪಲಾರೆ. ಆಸೆಂಬ್ಲಿಯಿಂದಲೂ, ಕೌನ್ಸಿಲ್‌ನಿಂದಲೂ ಕೆಲವು ಸದಸ್ಯರು ಬೋರ್ಡಿನಲ್ಲಿ ಇದ್ದಾರೆಂಬುದಾಗಿ ವರ್ತಿಸಬೇಕು. ಏಕೆಂದರೆ ಅಸೆಂಬ್ಲಿಯಲ್ಲಿರುವ ಅನೇಕ ಸದಸ್ಯರು ಅನೇಕ ವರ್ಷಗಳಿಂದ ಕೆಲಸಮಾಡಿ ತಜ್ಞರಾಗಿದ್ದಾರೆ. ಆ ದೃಷ್ಟಿಯಿಂದ ಎಲ್ಲ ಪಕ್ಷದವರಿಗೂ ಇದರಲ್ಲಿ ಅವಕಾಶ ಸಿಕ್ಕುತ್ತದೆ. ಇದನ್ನೂ ಕೂಡ ಸೆಲೆಕ್ಟ್ ಕಮಿಟಿಯಲ್ಲಿ ವಿಚಾರ ಮಾಡಲಿಕ್ಕೆ ಯಾವ ತರಹದ ಅಭ್ಯಂತರವೂ ಕಾಣಲಿಲ್ಲ.

ಈ ದೃಷ್ಟಿಯಿಂದ ಇವೊತ್ತಿನ ದಿವಸ ಹೆಚ್ಚಿಗೆ ಚರ್ಚೆ ಮಾಡುವ ಅವಶ್ಯಕತೆಯಿಲ್ಲ. ಮಾನ್ಯ ಸದಸ್ಯರುಗಳು ಕೊಟ್ಟಿರುವ ಕೆಲವು ಉಪಯುಕ್ತ ಸೂಚನೆಗಳಿಗೆ ಗಮನ ಕೊಟ್ಟು ಅವನ್ನು ಸೆಲೆಕ್ಟ್ ಕಮಿಟಿಯ ಮುಂದಿಟ್ಟು ಪರಿಶೀಲನೆ ಮಾಡಿ ಪುನಃ ಈ ಬಿಲ್ಲನ್ನು ತಮ್ಮ ಮುಂದೆ ಇಡುತ್ತೇವೆ. ಆ ಕಾಲಕ್ಕೆ ಸದಸ್ಯರುಗಳು ಹೆಚ್ಚಿಗೆ ಚರ್ಚೆ ಮಾಡಬಹುದಾಗಿದೆ. ಆದ್ದರಿಂದ ಈಗ ಈ ಬಿಲ್ಲನ್ನು ಸೆಲೆಕ್ಟ್ ಕಮಿಟಿಗೆ ಕಳುಹಿಸಲು ಸದಸ್ಯರು ಸಮ್ಮತಿಸಬೇಕೆಂದು ಹೇಳುತ್ತೇನೆ.

## ರಾಜ್ಯಪಾಲರ ಭಾಷಣದ ಮೇಲಿನ ಗೊತ್ತುವಳಿ

**6, ಮೇ 1959**

* ಶ್ರೀ ಬಿ.ಡಿ. ಜತ್ತಿ : ಮಾನ್ಯರೆ, ಸನ್ಮಾನ್ಯ ಸದಸ್ಯರು ಎತ್ತಿದ ಹಲವಾರು ಅಂಶಗಳಿಗೆ ಉತ್ತರ ಕೊಡುವ ಮೊದಲು ನಾನು ಕೆಲವು ವಿಷಯಗಳ ಬಗ್ಗೆ ಮಾತನಾಡಲು ಪ್ರಯತ್ನಿಸಬೇಕೆಂದಿರುವೆ ........

(ಶ್ರೀ ಎಸ್.ಓ. ಸಾಮಜಿ ಅವರು ಮರಾಠಿಯಲ್ಲಿ ಅಡ್ಡಿಪಡಿಸಿದರು)

* **ಅಧ್ಯಕ್ಷರು** : ಸದಸ್ಯರು ಕನ್ನಡದಲ್ಲಿ ಮಾತನಾಡುತ್ತಿದ್ದರೆ ನಾನು ಮುಖ್ಯಮಂತ್ರಿಗಳಿಗೆ ಮರಾಠಿಯಲ್ಲಿ ಮಾತನಾಡಲು ವಿನಂತಿಸಿಕೊಳ್ಳುವೆ.

* ಶ್ರೀ ಬಿ.ಡಿ. ಜತ್ತಿ : ನನ್ನ ಸ್ನೇಹಿತರಾದ ಶ್ರೀ ಸಾಮಜಿ ಮತ್ತು ಇತರರು ಗಡಿ ವಿಷಯದಲ್ಲಿ ಎತ್ತಿದ ಕೆಲವು ಅಂಶಗಳ ಕುರಿತೇ ನಾನು ಮಾತನಾಡಲು ಪ್ರಯತ್ನಿಸುವೆ ಎಂದೇ ಹೇಳುತ್ತಿದ್ದೆ.

ಮಾನ್ಯರೆ, ಸನ್ಮಾನ್ಯ ಸದಸ್ಯರು ಎತ್ತಿದ ಅಂಶಗಳು ಹೊಸದಾಗಿ ಹೇಳಿದವುಗಳೇನೂ ಅಲ್ಲ. ಕನ್ನಡ ಮತ್ತು ಮರಾಠಿ ಜನರಿಂದ ಕಳೆದ ನಾಲ್ವತ್ತು ವರುಷಗಳಿಂದ ಈ ಪ್ರಶ್ನೆ ಉದ್ರೇಕಗೊಳ್ಳುತ್ತಲೇ ಇದೆ. ಬೆಳಗಾವಿಯಲ್ಲಿ ನಡೆದ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಳನದಲ್ಲಿ ಕೂಡ ಈ ಪ್ರಶ್ನೆಯನ್ನು ಎತ್ತಲಾಗಿ ಅದರಲ್ಲಿ ಮರಾಠಿ ದಿಗ್ಗಜರೆನಿಸಿದ ಶ್ರೀ ಎನ್.ಸಿ. ಕೇಳಕರ ಕೂಡ ಇದ್ದರು. ಎಲ್ಲ ಪ್ರಮುಖ ಸಾಹಿತಿಗಳು ಕನ್ನಡದವರು ಕೂಡ ಅದರಲ್ಲಿ ಭಾಗವಹಿಸಿದ್ದಾಗ ಬೆಳಗಾವಿ ಕರ್ನಾಟಕ್ಕೆ ಸೇರಿದ್ದು ಎಂದು ನಿರ್ಧಾರವಾಗಿದೆ. ಅದರ ಬಗ್ಗೆ ಈಗ ವಾದಮಾಡುತ್ತ ಚರ್ಚಿಸುವ ಪ್ರಶ್ನೆಯೇ ಇಲ್ಲ.

* ಶ್ರೀ **ಬಿ.ಆರ್. ಸುಂಠಣಕರ** : ಮಾನ್ಯ ಮುಖ್ಯ ಮಂತ್ರಿಗಳು ಹೇಳಿದಂತೆ ಸಮ್ಮೇಳನದಲ್ಲಿ ಗೊತ್ತುವಳಿ ಪಾಸಾಗಿದೆಯೆ? ನನ್ನ ಗಮನಕ್ಕೆ ಬಂದಂತೆ, ಸಮ್ಮೇಳನದಲ್ಲಿ ಗೊತ್ತುವಳಿ ಸ್ವೀಕಾರವಾಗಿಲ್ಲ. ಅದರ ಬದಲಾಗಿ ವಿಷಯ ನಿಯಾಮಕ ಸಮಿತಿ ಸಭೆಯಲ್ಲಿ ಅದನ್ನು ತಿರಸ್ಕರಿಸಲಾಗಿದೆ.

* ಶ್ರೀ ಬಿ.ಡಿ. ಜತ್ತಿ : ಶ್ರೀ ಸುಂಠಣಕರ ಅವರು ಹೇಳಿದ್ದು ತಪ್ಪು. ನಾನು ಹೇಳಿದ ಸಂಗತಿ ಸರಿ. ಅಂದು ಸರಕಾರದಲ್ಲಿ ಸ್ವೀಕೃತಿಯಾಗಿದೆ. ಆ ಬಗ್ಗೆ ನನ್ನಲ್ಲಿ ದಾಖಲೆಗಳಿವೆ. ನಾನು ಉತ್ತರ ಕೊಡುತ್ತಿರುವಾಗ ಹೀಗೆ ವಾದ ಮಾಡಿ ಗೊಂದಲ ಎಬ್ಬಿಸುವಲ್ಲಿ ಯಾವ ಉಪಯೋಗವೂ ಇಲ್ಲ.

ಮಾನ್ಯರೆ, ಬೆಳಗಾವಿಯ ಪ್ರಶ್ನೆಯನ್ನು ಕಾಂಗ್ರೆಸ್ ಪಕ್ಷ ಕೂಡ 1921 ರಿಂದಲೇ ಗಮನಿಸುತ್ತ ಬಂದಿದೆ. ಬೆಳಗಾವಿಯು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಭಾಗವಾಗಿತ್ತು. ಈ ವಿಷಯವನ್ನು ಉಳಿದೆಲ್ಲ ಪ್ರಾಂತೀಯ ಸಮಿತಿಗಳು ಗುರುತಿಸಿದ್ದರು. ಈ ಎಲ್ಲ ವಿಷಯಗಳೂ ಸನ್ಮಾನ್ಯ ಸದಸ್ಯರಿಗೆ ಗೊತ್ತಿವೆ.

ಮುಂಬಯಿ ರಾಜ್ಯದಿಂದ ಮೈಸೂರು ರಾಜ್ಯಕ್ಕೆ ಸೇರಿದ ಇಂದಿನ ಗಡಿ ಪ್ರದೇಶಗಳನ್ನು ರಾಜ್ಯ ಪುನರ್ವಿಂಗಡನಾ ಆಯೋಗದ ಅವಿರೋಧ ಶಿಫಾರಸ್ಸುಗಳ ಮೇರೆಗೆ ಸೇರಿಸಲಾಗಿದೆ. ಧಾರ್ ಕಮಿಶನ್ ಕೂಡ ಈ ಪ್ರಶ್ನೆಯನ್ನು ವಿವರವಾಗಿ ಚರ್ಚಿಸಿದೆ. ಅವರ ಶಿಫಾರಸ್ಸುಗಳನ್ನು ಮತ್ತು ಪ್ರತಿಪಾದಿಸಿದ ತತ್ವಗಳನ್ನು ಫಜಲ್ ಅಲಿ ಕಮಿಶನ್ ಕೂಡ ಒಪ್ಪಿದೆ ಮತ್ತು ತಮ್ಮ ವರದಿಯಲ್ಲಿ ಕೂಡ ಸೇರಿಸಿದೆ. ಅಂತಿಮವಾಗಿ ಇವೆಲ್ಲವನ್ನು ಲೋಕಸಭೆಯಲ್ಲಿ ಚರ್ಚಿಸಿದ ಮೇಲೆ ಅದನ್ನು ಒಪ್ಪಿಕೊಳ್ಳಲಾಗಿದೆ. ರಾಜ್ಯ ಪುನರ್ವಿಂಗಡನಾ ಆಯೋಗದ ನಿಬಂಧನೆಗಳ ಮೇರೆಗೆ ಬೆಳಗಾವಿಯನ್ನು ಕರ್ನಾಟಕದಲ್ಲಿ ಸೇರಿಸಲಾಯಿತು. ಅದನ್ನು ಪ್ರತಿಭಟಿಸುವ ಪ್ರಶ್ನೆಯೇ ಇಲ್ಲ ಆದರೆ ಒಂದು ವಿಷಯವನ್ನು ನಾನು ತಿಳಿಹೇಳಬೇಕಾಗಿದೆ. ಬೆಳಗಾವಿ ಭಾಗದ ಬಹುತೇಕ ಸನ್ಮಾನ್ಯ ಸದಸ್ಯರು, ಅಲ್ಲಿಯ ಜನ ಮೈಸೂರು ರಾಜ್ಯದಿಂದ ಮುಂಬಯಿ ರಾಜ್ಯಕ್ಕೆ ಹೋಗಲು ಬಯಸಿದ್ದಾರೆ ಎಂದು ತಿಳಿದಿದ್ದಾರೆ ಆದರೆ ಹಾಗೆ ಇಲ್ಲ. ಗಡಿ ಪ್ರದೇಶಗಳ ಬಗ್ಗೆ ನನಗೆ ಚೆನ್ನಾಗಿ ಗೊತ್ತು. ಮುಂಬಯಿ ಶಾಸನ ಸಭೆಯಲ್ಲಿ ನನ್ನೊಂದಿಗೆ ಕೆಲಸಮಾಡಿದ ಮರಾಠಿ ಸ್ನೇಹಿತರನ್ನೂ ನಾನು ಬಲ್ಲೆ. ನನ್ನಿಂದಾಗಲೀ ಅಥವ ಅವರಿಂದಾಗಲೀ ಬಚ್ಚಿಡುವ ವಿಷಯವೇನೂ ಇಲ್ಲ. ಇಂದಿಗೂ ನಾವು ಸ್ನೇಹಿತರಾಗಿದ್ದೇವೆ ಮತ್ತು ಕೊನೆಯ ತನಕ ನಾವು ಸ್ನೇಹಿತರಾಗಿಯೇ ಉಳಿಯುತ್ತೇವೆ. ನಾವು ಸ್ನೇಹಿತರಾಗಿಯೇ ಸಹ ಮುಂದುವರಿಯುತ್ತೇವೆ. ಕೆಲವು ಮಹಾರಾಷ್ಟ್ರ ಏಕೀಕರಣ ಸಮಿತಿಯ ಜನರಿಂದ ನಿರ್ಮಾಣವಾದ ಕೃತಕ ಗಡಿಗಳು ನಿಜವಾಗಿ ಅಲ್ಲಿದ್ದ ಜನರ ಉದ್ದೇಶವಲ್ಲ. ಖಾನಾಪುರ ಬೆಳಗಾವಿ ಮತ್ತು ಚಿಕ್ಕೋಡಿ ತಾಲೂಕುಗಳಲ್ಲಿ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿವೆ. ಚೆನ್ನಾಗಿ ನಡೆದ ಪ್ರಗತಿಯನ್ನು ಅಲ್ಲಿಯ ಜನ ತುಂಬ ಮೆಚ್ಚಿಕೊಂಡಿದ್ದಾರೆ. ಅವರಿಗೆ ಚಳುವಳಿ ಬೇಕಾಗಿಲ್ಲ. ಸಾಕಷ್ಟು ಸಲ ನಾನು ಬೆಳಗಾವಿಗೆ ಹೋಗಿರುವೆ. ಅವರು ಕೂಡ ನನ್ನ ಕೆಲವು ಸ್ನೇಹಿತರೊಂದಿಗೆ ಕಪ್ಪು ಬಾವುಟ ಹಿಡಿದು ಕಾಯುತ್ತಿದ್ದರು. ನಾನು ಅವರನ್ನು ಸ್ವಾಗತಿಸಿದೆ, ಮತ್ತು ಅವರು ಕೂಡ ಎರಡು ವಾರಗಳ ಹಿಂದೆ ನನ್ನನ್ನು ಕಾಣಲು ಬಂದಿದ್ದರು. ಈ ಜನರಿಂದ ನಾವು ಗೌರವ ಸ್ವೀಕರಿಸಿದ್ದೇವೆ. ನಾವೇಕೆ ಗಾಬರಿಯಾಗಬೇಕು? ಹದಿನೈದು ದಿನಗಳ ಹಿಂದೆ ಹಣೆಗೆ ಬಟ್ಟೆ ಕಟ್ಟಿಕೊಂಡು ಒಬ್ಬ ಹುಡುಗನೊಂದಿಗೆ ಶ್ರೀ ಸುಂಠಣಕರ ಅವರು ಬಂದಿದ್ದರು. ಅದು ಪೋಲಿಸರಿಂದ ಆದ ಗಾಯ ಅದಕ್ಕಾಗಿ ಪಟ್ಟಿಯನ್ನು ಕಟ್ಟಿಕೊಂಡಿದ್ದನೆಂದು ಆಪಾದಿಸಬಹುದೆಂದು ತಿಳಿದಿದ್ದೆ. ನಾನು ವಿಮಾನ ನಿಲ್ದಾಣದಿಂದ ಹೋಗುವಾಗ ಈ ಹುಡುಗ ನನ್ನ ಕಾರಿನ ಎದುರಿಗೆ ಜಿಗಿಯಬೇಕೆಂದು ಪ್ರಯತ್ನಿಸುತ್ತಿದ್ದುದನ್ನು ನಾನು ನನ್ನ ಕಣ್ಣಾರೆ ಕಂಡಿದ್ದೆ. ಪೋಲಿಸರು ಆತನನ್ನು ಹಿಡಿದು ಒಂದು ಪೆಟ್ಟು ಕೊಟ್ಟು ಅಲ್ಲಿಂದ ಸರಿಸಿದರು. ಈ ವ್ಯಕ್ತಿಯನ್ನು ಅಲ್ಲಿ ವಿಶೇಷವಾಗಿ ತಂದಿದ್ದರು ಮತ್ತು ಪೋಲಿಸರು ಅವನನ್ನು ಹೊಡೆದಿದ್ದಾರೆ ಎಂದು ಮಾತ್ರ ತೋರಿಸಲು ತಂದಿದ್ದರು. ಅಂತೆಯೇ ಆತನಿಗೆ ಗಾಯವಾಗಿದೆ ಎನ್ನಬೇಕಾಗಿತ್ತು ಶ್ರೀ ಸುಂಠಣಕರರು ನನ್ನ ಹತ್ತಿರ ಬಂದಾಗ ನಾನು, ಇದು ಹೊಸಗಾಯ ಅಲ್ಲ, ಇದು ಹೊಸ ಬಟ್ಟೆಯೂ ಅಲ್ಲ, ಎಲ್ಲವೂ ಹಳೆಯದು ಎಂದೆ. ಅದಕ್ಕೆ ಅವರು

'ಹೌದು' ಎಂದರು. ಆದ್ದರಿಂದ ಈ ತೆರನಾದ ಚಳುವಳಿ ಸರಿಯಲ್ಲ. ನಾನು ಕೆಲವೊಂದು ಅಂಶಗಳನ್ನು ಒಪ್ಪಬಲ್ಲೆ. ನಾನು ಯಾವುದರ ಪರವಾಗಿ ಇಲ್ಲ ಎಂಬುದನ್ನು ಹೇಳುತ್ತಿರುವೆ. ನನ್ನ ಸ್ನೇಹಿತರು ನಡೆಸುತ್ತಿರುವ ಚಳುವಳಿಯ ಮಾರ್ಗ ನಾನು ಒಪ್ಪುತ್ತಿಲ್ಲ. ಮತ್ತು ಯಾವ ರೀತಿ ಅವರು ಕೇಂದ್ರ ಗೃಹ ಮಂತ್ರಿಗಳಿಗೆ ಪತ್ರಗಳನ್ನು ರವಾನಿಸುತ್ತಿದ್ದಾರೆ. ಹಲವಾರು ಪತ್ರಗಳನ್ನು ನನಗೆ ಕಳಿಸುತ್ತ ನನ್ನ ಹೇಳಿಕೆಯನ್ನು ಕೇಳಿದ್ದಾರೆ. ನಾನು ಪಡೆದ ನೂರು ಪತ್ರಗಳಲ್ಲಿ ಪ್ರತಿಶತ 95 ರಷ್ಟು ನಿಜವಾದ ಸಂಗತಿಯನ್ನು ಅವಲಂಬಿಸಿ ಬರೆದಿಲ್ಲ ಎಂದು ನಾನು ಉತ್ತರ ಕೊಟ್ಟಿರುವೆ. ಅವುಗಳು ಸರಿ ಇಲ್ಲ. ನಮ್ಮ ಆಡಳಿತದಲ್ಲಿ ಚಿಕ್ಕ ಪುಟ್ಟ ತೊಂದರೆಗಳಿದ್ದಲ್ಲಿಲ್ಲ ನಾನು ಕೇಂದ್ರ ಗೃಹ ಮಂತ್ರಿಗಳೆದುರು ಒಪ್ಪಿಕೊಂಡಿರುವೆ. ಚಳುವಳಿಯನ್ನು ನಿಯಂತ್ರಿಸುವಾಗ ಪೊಲೀಸರು ಮಾಡಿದ ಈ ಕೃತ್ಯಗಳೆಲ್ಲ ತುಂಬ ಚಿಕ್ಕ ಘಟನೆಗಳು. ಚಳುವಳಿ ಶಾಂತವಾಗಿ ನಡೆದಾಗ ನಮ್ಮ ಪೊಲೀಸ ಅಧಿಕಾರಿಗಳೂ ಸ್ವಾಭಾವಿಕವಾಗಿ ಶಾಂತವಾಗಿರುತ್ತಾರೆ. ಆದರೆ ಅವರು ಜಗಳ ತೆಗೆದರೆ, ಹಿಂಸೆಯನ್ನು ಪ್ರಚೋದಿಸಿದರೆ, ಕೆಲಮಟ್ಟಿಗಾದರೂ ಪೊಲೀಸರೂ ಆಕ್ರಮಣಶೀಲರಾಗಬೇಕಾಗುತ್ತದೆ. ಇಲ್ಲವಾದಲ್ಲಿ ಚಳುವಳಿಯನ್ನು ನಿಯಂತ್ರಿಸುವುದೇ ಸಾಧ್ಯವಾಗುವುದಿಲ್ಲ. ಇದು ನಡೆದ ಸಂಗತಿ. ನಡೆದ ಕೆಲವು ಘಟನೆಗಳಲ್ಲಿ ಮಾತ್ರ ಒಬ್ಬಿಬ್ಬರು ಮಾತ್ರ ಆ ರೀತಿ ವರ್ತಿಸಿದ್ದಾರೆ. ಅಲ್ಲಿ ಕೂಡ ಅವರು ಮಾಡಿದ್ದನ್ನು ನಾನು ಒಪ್ಪಿಕೊಂಡಿರುವೆ. ಎಲ್ಲಿಯೇ ತಪ್ಪುಗಳಾಗಿದ್ದರೆ ಅಥವ ಪೋಲಿಸ ಪೇದೆ, ಅಧಿಕಾರಿಗಳ ಪರವಾಗಿ ತಪ್ಪುಗಳಿದ್ದರೆ, ಅವುಗಳು ತಪ್ಪು ಎಂದು ನಾನು ಹೇಳಿರುವೆ ಮತ್ತು ಹಾಗೆ ಅನುಚಿತವಾಗಿ ವರ್ತಿಸಬಾರದೆಂದು ನಾನು ಎಲ್ಲ ಪೊಲೀಸ ಅಧಿಕಾರಿಗಳಿಗೆ ಸಲಹೆಗಳನ್ನು ಕಳಿಸಿರುವೆ ಒಟ್ಟಾರೆಯಾಗಿ ಚಳುವಳಿಗಾರರಿಗಿಂತ ಅವರು ಅಧಿಕೃತವಾಗಿ ಅಹಿಂಸೆಯಿಂದ ವರ್ತಿಸಿದ್ದಾರೆ. ನಾವು ಅವರಿಗೆ ಪೂರ್ತಿ ಪ್ರಶಸ್ತಿ ಕೊಡಬೇಕು. ಪೊಲೀಸ ಇಲಾಖೆಯನ್ನು ಕಂಡೆಮ್ ಮಾಡುವುದು ನನ್ನ ಸಹಿತವಾಗಿ ಎಲ್ಲರ ಚಟವಾಗಿದೆ. ಪೋಲಿಸರು ಏನಾದರೂ ಮಾಡಿದಾಗ ಅವರಲ್ಲಿ ಒಳ್ಳೆಯದನ್ನು ಮಾಡಿದವರ ಬೆನ್ನನ್ನಾದರೂ ಚಪ್ಪರಿಸಬೇಕು. ಆಗ ಅವರಿಗೂ ಕೂಡ ಒಳ್ಳೆಯದನ್ನು ಮಾಡಬೇಕೆಂದು ಅನಿಸುತ್ತದೆ. ಹಗಲು - ರಾತ್ರಿ ಯಾವಾಗಲೂ ಅವರನ್ನು ಕಂಡೆಮ್ ಮಾಡುವುದರಲ್ಲಿ ಜಾಣತನವಿಲ್ಲ. ಬೆಳಗಾವಿ ಡಿ.ಎಸ್.ಪಿ. ಮತ್ತು ಪೊಲೀಸ ಪೇದೆಗಳಿಗೆ ಅವರ ಪ್ರಾಮಾಣಿಕತನಕ್ಕಾಗಿ ಮತ್ತು ಕರ್ತವ್ಯ ನಿಷ್ಠರಾಗಿ ಕೆಲಸ ಮಾಡಿದ್ದಕ್ಕಾಗಿ ನಾನು ಅವರಿಗೆ ಗೌರವ ಸಲ್ಲಿಸಲೇಬೇಕು ಮತ್ತು ಅವರು ಬಹಳ ಒಳ್ಳೆಯ ಕೆಲಸವನ್ನು ಮಾಡುತ್ತಿದ್ದಾರೆ ಎಂಬುದನ್ನು ಒಪ್ಪಬೇಕು.

ವಿರೋಧಿ ಬಣದಲ್ಲಿರುವ ಮಹಾರಾಷ್ಟ್ರ ಏಕೀಕರಣ ಸಮಿತಿಯ ಸ್ನೇಹಿತರೂ ಇದನ್ನು ಒಪ್ಪುತ್ತಾರೆ. ಯಾಕೆಂದರೆ ಅವರಿಗೆ ಡಿ.ಎಸ್.ಪಿ ಗೊತ್ತು ಈಗಷ್ಟೇ ಅಲ್ಲ, ಬಹಳ ದಿನಗಳಿಂದ ಅವರಿಗೆ ಗೊತ್ತು. ಅವರು ಮುಂಬಯಿಯಲ್ಲಿ ಕೆಲಸ ಮಾಡುತ್ತಿದ್ದರು. ಅವರು ಪರಸ್ಪರ ಪರಿಚಿತರು ಎಂಬುದು ನನಗೆ ಗೊತ್ತು.

* ಶ್ರೀ ವಿ.ಎಸ್. ಪಾಟೀಲ : ಈಗಿನ ಡಿ.ಎಸ್.ಪಿ. ಅವರು ತಮ್ಮ ದೌರ್ಜನ್ಯಗಳಿಂದ ಹೆಸರಾಗಿದ್ದಾರೆ.

* ಶ್ರೀ ಬಿ.ಡಿ. ಜತ್ತಿ : ಜೊತೆಗೆ ಅವರು ತಮ್ಮ ಒಳ್ಳೆಯ ವರ್ತನೆಯಿಂದಲೂ ಹೆಸರಾಗಿದ್ದರೆಂಬುದು ಬಹುಶಃ ಶ್ರೀ ವಿ.ಎಸ್. ಪಾಟೀಲರಿಗೂ ಗೊತ್ತಿರಬೇಕು. ಅವರು ಜಲಮಂದಿರ ಕೇಸನ್ನು ಶೋಧಿಸಿದರು. ಇನ್ನಾರೂ ಆ ರೀತಿಯಲ್ಲಿ ಚೆನ್ನಾಗಿ ತನಿಖೆ ಮಾಡುತ್ತಿರಲಿಲ್ಲ. ಕನಿಷ್ಟ ಪಕ್ಷ ಮೈಸೂರು ರಾಜ್ಯಕ್ಕೆ ಬಂದ ಮೇಲಾದರೂ ಸನ್ಮಾನ್ಯ ಸದಸ್ಯರು ಮುಂಬಯಿ ರಾಜ್ಯದಲ್ಲಿ ಅವರು ಮಾಡಿದ ಒಳ್ಳೆಯ ಕೆಲಸವನ್ನು ಮೆಚ್ಚಬೇಕು. ಅದರಲ್ಲಿ ಏನಾದರೂ ಗಮನಿಸಬಹುದಾದದ್ದು ಇದೆಯೇ ಎಂಬುದೇ ಪ್ರಧಾನ ಅಂಶವೆಂಬುದನ್ನು ಗಮನಿಸಬೇಕಾಗಿದೆ. ಗಡಿ ಸಮಸ್ಯೆಯನ್ನು ಬಗೆಹರಿಸುವಲ್ಲಿ ಮೈಸೂರು ಸರಕಾರ ಸರಿಯಾಗಿ ನಡೆದುಕೊಳ್ಳುತ್ತಿಲ್ಲ ಎಂದು ಬೆಳಗಾವಿಯ ನನ್ನ ಕೆಲ ಮಿತ್ರರು ಹೇಳಿದರು. ಆದಷ್ಟು ಬೇಗ ಈ ಸಮಸ್ಯೆಯನ್ನು ಬಗೆಹರಿಸಲು ನಾನು ಉತ್ಸುಕನಾಗಿರುವೆ ಎಂದು ಈ ಸಭೆಯಲ್ಲಿ ಹೇಳಬಯಸುವೆ. ನಾನು ಅಧಿಕಾರ ವಹಿಸಿಕೊಂಡ ದಿನದಿಂದ ಇಂದಿನ ವರೆಗೆ ಎಲ್ಲೆಲ್ಲಿ ಸಾಧ್ಯವಿದೆಯೋ, ಕೇಳಿದಾಗಲೆಲ್ಲ ಕೇಂದ್ರ ಗೃಹ ಮಂತ್ರಿಗಳನ್ನು ಕಾಣಲು ಪ್ರಯತ್ನಿಸಿರುವೆ. ಶ್ರೀ ಯಶವಂತರಾವ ಚವ್ಹಾಣರು ನನ್ನ ಆತ್ಮೀಯ ಮಿತ್ರರು. ಅವರೀಗ ಮುಂಬಯಿ ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾರೆ ಮತ್ತು ನಾನು ಮೈಸೂರು ರಾಜ್ಯದ ಮುಖ್ಯ ಮಂತ್ರಿಯಾಗಿರುವೆ. ನಾವು ಪರಸ್ಪರ ಭೇಟಿಯಾಗಿದ್ದೇವೆ. ಮಾತನಾಡಿದ್ದೇವೆ ಮತ್ತು ಈ ಪ್ರಶ್ನೆಯನ್ನು ಬಗೆಹರಿಸಲು ಪ್ರಯತ್ನಿಸಿದ್ದೇವೆ. ನಾವು ಎರಡು ಗಂಟೆಗಳಿಗಿಂತ ಅಧಿಕವಾಗಿ ಮಾತನಾಡಿದ್ದೇವೆ. ನಾವಿಬ್ಬರೂ ಒಪ್ಪಂದಕ್ಕೆ ಬರಲು ಸಾಧ್ಯವಾಗಲಿಲ್ಲ. ಅಲ್ಲಿ ನಾವಿಬ್ಬರೂ ಒಪ್ಪದಿರುವುದನ್ನು ಒಪ್ಪಿದೆವು. ಕೆಲ ಸಮಯದ ಹಿಂದೆ ನಾನು ಮುಂಬಯಿಗೆ ಹೋದಾಗ ಹಾಗೆ ಘಟಿಸಿತು. ಅನಂತರ ಮತ್ತೆ ಕೇಂದ್ರ ಗೃಹ ಮಂತ್ರಿಗಳ ಎದುರಿಗೆ ಮುಂಬಯಿ ಮುಖ್ಯಮಂತ್ರಿಗಳೊಂದಿಗೆ ಮಾತನಾಡುವ ಅವಕಾಶ ಸಿಕ್ಕಿತ್ತು ಮತ್ತು ಶ್ರೀ ಧೇಬರಭಾಯಿ ಹಾಗೂ ಪ್ರಧಾನ ಮಂತ್ರಿಗಳ ಎದುರಿನಲ್ಲೂ ಸಿಕ್ಕಿದರು. ಆದರೆ ಈ ವಿಷಯದಲ್ಲಿ ಇತ್ಯರ್ಥಕ್ಕೆ ಬರುವಲ್ಲಿ ನಮ್ಮಿಬ್ಬರಲ್ಲಿಯ ಯಾರೊಬ್ಬರಿಗೂ ಸಾಧ್ಯವಾಗಲಿಲ್ಲ. ಸಮಸ್ಯೆ ಸೂಕ್ಷ್ಮವಾಗಿದೆ. ಜಟಿಲವಾಗಿದೆ, ಗೂಢವಾಗಿದೆ. ಶಾಂತ ಮನಸ್ಸಿನಿಂದ - ತಿಳಿಯಾದ ವಾತಾವರಣದಲ್ಲಿ ಕುಳಿತುಕೊಂಡಾಗ ಮಾತ್ರ ಚರ್ಚಿಸಿ ಇತ್ಯರ್ಥಕ್ಕೆ ಬರಬಹುದು. ಕೇವಲ ಬೆದರಿಕೆಗಳಿಂದ ಅಥವ ಚಳುವಳಿಗಳಿಂದ ಈ ಸಮಸ್ಯೆಯನ್ನು ಇತ್ಯರ್ಥಪಡಿಸುವುದು ಯಾವ ಸರಕಾರದಿಂದಲೂ ಸಾಧ್ಯವಿಲ್ಲ.

* ಶ್ರೀ ಎಂ.ಸಿ. ನರಸಿಂಹನ್ : ಮುಂಬಯಿ ಮುಖ್ಯಮಂತ್ರಿಗಳಿಂದ ಬೆದರಿಕೆ ಬಂತೆ?

* ಶ್ರೀ ಬಿ.ಡಿ. ಜತ್ತಿ : ನಾನೆಂದೂ ಹಾಗೆ ಹೇಳಲಿಲ್ಲ. ಈ ವಿಷಯಗಳನ್ನು ನಾನು ತುಂಬ ಸಿರಿಯಸ್ಸಾಗಿ ಹೇಳುತ್ತಿರುವೆ.

(ಶ್ರೀ ಎನ್.ಓ. ಸಾಮಜಿ ಅವರು ಮರಾಠಿಯಲ್ಲಿ ಮಾತನಾಡಿದರು)

* ಶ್ರೀ ಬಿ.ಡಿ. ಜತ್ತಿ : ಆ ವಿಷಯಗಳನ್ನು ಬಹಿರಂಗ ಪಡಿಸುವ ಅವಶ್ಯಕತೆ ಇಲ್ಲ ನಾವಿಬ್ಬರೂ ಪ್ರಾಮಾಣಿಕವಾಗಿ ಸಮಸ್ಯೆಯನ್ನು ಬಿಡಿಸಲು ಪ್ರಯತ್ನಿಸಿದೆವು, ಆದರೆ ನಾವು ಒಂದು ಇತ್ಯರ್ಥಕ್ಕೆ ಬರುವುದಾಗಲಿಲ್ಲ. ಯಾಕೆಂದರೆ ಮುಂಬಯಿ ಮುಖ್ಯ ಮಂತ್ರಿಗಳ ದಾರಿ ನನ್ನದಕ್ಕಿಂತ ತುಂಬ ಬೇರೆಯಾಗಿತ್ತು. ನಾವು ಒಂದು ಸಮಾನ ಭೂಮಿಕೆಗೆ ಬರಲು ಸಾಧ್ಯವಾಗಲೇ ಇಲ್ಲ ಆದ್ದರಿಂದ ಅದನ್ನು ಒಪ್ಪಲು ಸಾಧ್ಯವಾಗಲಿಲ್ಲ. ಅದು ಸಾಧ್ಯವಾಗಬೇಕಾದರೆ, ಶಾಂತ ಮತ್ತು ತಿಳಿ ವಾತಾವರಣದಲ್ಲಿ ಚರ್ಚಿಸಬೇಕು. ಅದಕ್ಕೆ ನಾನು ಪ್ರಯತ್ನಿಸುತ್ತಿರುವೆ, ಆದರೆ ನನ್ನ ಸನ್ಮಾನ್ಯ ಸ್ನೇಹಿತರು ಚಳುವಳಿಯನ್ನು ನಿಲ್ಲಿಸಲು ಸಿದ್ಧರಿಲ್ಲ. ಆದ್ದರಿಂದ ಯಾವುದೇ ಪರಿಹಾರವನ್ನು ಕಂಡುಹಿಡಿಯಲು ನನಗೆ ತುಂಬ ಕಷ್ಟವಾಗುತ್ತಿದೆ. ಭಾರತ ಸರಕಾರ ಈ ವಿಷಯವನ್ನು ಮುಚ್ಚಿಲ್ಲ ಎಂದು ಮತ್ತೆ ಮತ್ತೆ ಅವರು ಹೇಳುತ್ತಿದ್ದಾರೆ. ಕೇಂದ್ರ ಗೃಹ ಮಂತ್ರಿಗಳ ಭಾಷಣಗಳ ವೃತ್ತ ಪತ್ರಿಕಾ ವರದಿಗಳನ್ನು ಶ್ರೀ ಸುಂಠಣಕರ ಅವರು ಓದಿದರು. ಆದರೆ ಕೇಂದ್ರ ಗೃಹ ಮಂತ್ರಿಗಳು ಹೇಳಿದ್ದು, ಚಿಕ್ಕ ಪುಟ್ಟ ಗಡಿ ವಿವಾದಗಳನ್ನು ಉಭಯ ಸರಕಾರಗಳು ಒಪ್ಪಿದರೆ ಜೋನಲ್ ಕೌನ್ಸಿಲ್‌ನಲ್ಲಿ ಬಗೆಹರಿಸಿಕೊಳ್ಳಬಹುದು ಎಂಬುದಾಗಿ ಅವರಿಗೂ ಗೊತ್ತಿದೆ. ಉಭಯ ಮುಖ್ಯ ಮಂತ್ರಿಗಳು ಒಪ್ಪಲಿ - ಬಿಡಲಿ ನಾನು ಅದನ್ನು ಪರಿಹರಿಸುತ್ತೇನೆ ಎಂದು ಅವರೆಂದೂ ಹೇಳಲಿಲ್ಲ. ಈ ವಿಷಯಗಳು ನನ್ನ ಸ್ನೇಹಿತರ ಗಮನಕ್ಕೆ ಬರಲಿಲ್ಲ. ಇಂದು ಕೂಡ ನಾನು ಈ ಸಭೆಯಲ್ಲಿ ಹೇಳಬಯಸುವೆ. ಒಂದು ವೇಳೆ ನನ್ನ ಎಲ್ಲ ಸ್ನೇಹಿತರು ಸುಮ್ಮನಿದ್ದರೆ ಮತ್ತು ಪ್ರಜಾತಂತ್ರ ವ್ಯವಸ್ಥೆಯನ್ನು ಅನುಸರಿಸಿದರೆ ಒಂದು ಇತ್ಯರ್ಥಕ್ಕೆ ಬರಲು ಸಾಧ್ಯವಾಗುತ್ತದೆ. ಸಮಸ್ಯೆಯನ್ನು ಬಗೆಹರಿಸಲು ನಾನು ಸಿದ್ಧನಿದ್ದೇನೆ. ಅವರು ಬೆದರಿಕೆಗಳನ್ನು ಹಾಕುತ್ತ ಹೋಗುತ್ತಿದ್ದಾರೆ. ಅಂಥ ಬೆದರಿಕೆಗಳಿಗೆ ಯಾರೇ ಆಗಲಿ, ಯಾವ ಸರಕಾರವೇ ಆಗಲಿ ಮಣಿಯುವುದಿಲ್ಲ. ಅದಕ್ಕೆ ಮಣಿದರೆ ನಾವು ಸರಕಾರವನ್ನೆ ನಡೆಸಲು ಅಸಮರ್ಥರು ಎನಿಸುತ್ತೇವೆ. ಅದು ತಿಳುವಳಿಕೆಯ ಪ್ರಶ್ನೆಯಾಗಿದೆ. ಪರಸ್ಪರ ಒಪ್ಪಂದದ ಪ್ರಶ್ನೆಯಾಗಿದೆ. ಅಂಥ ವಾತಾವರಣ ಇದ್ದರೆ ನಾನು ಸಿದ್ಧನಿರುವೆ. ಇಂಥ ಸಂದರ್ಭದಲ್ಲಿ ಕೂಡ ನಾನು 'ಹೊಲಸು' ಶಬ್ದವನ್ನು ಉಪಯೋಗಿಸುವುದಿಲ್ಲ. ದೋಷಯುಕ್ತ ವಾತಾವರಣವಿದೆ. ಏನು ಮಾಡಬಹುದೆಂಬ ಬಗ್ಗೆ ನಾನೊಂದು ಇತ್ಯರ್ಥಕ್ಕೆ ಬರಲು ಪ್ರಯತ್ನಿಸುವೆ. ಆದರೆ ಅದು ಚಿಕ್ಕ - ಪುಟ್ಟ ಗಡಿ ಹೊಂದಾಣಿಕೆ ಎಂಬುದನ್ನು ಮೊದಲು ತಿಳಿಯಬೇಕು. ವಿಷಯ ಚಿಕ್ಕದಾಗಿರಬೇಕು. ಅದು ಮುಂಬಯಿ ಮತ್ತು ಮೈಸೂರು ರಾಜ್ಯಗಳ ಮಧ್ಯದ್ದಾಗಿರಬೇಕು. ಅದು ಮುಂಬಯಿ ಮತ್ತು ಮೈಸೂರುಗಳ ಮಧ್ಯದ್ದಾಗಿರದ್ದರೆ ಅದನ್ನು ತೆಗೆದುಕೊಳ್ಳಲು ಬರುವುದಿಲ್ಲ. ಯಾಕೆಂದರೆ, ವಿವಾದ ಇದ್ದುದು ಕೇವಲ ಮುಂಬಯಿ ಮತ್ತು ಮೈಸೂರುಗಳ ಮಧ್ಯ. ಮತ್ತು ಗಡಿ ಎಂದಾಕ್ಷಣ ನೂರು ಅಥವ ಸಾವಿರ ಮೈಲುಗಳದ್ದಲ್ಲ ಅದು ನಾಲ್ಕು ಅಥವ ಐದು ಮೈಲುಗಳದ್ದಾಗಿರಬೇಕು ಹೆಚ್ಚೆಂದರೆ ಹತ್ತು ಮೈಲಿಗಳಾಗಬಹುದು. ಇಲ್ಲವಾದಲ್ಲಿ ಗಡಿ ಎನ್ನಲಾಗುವುದಿಲ್ಲ. ಅದನ್ನು ಕೇರಳದ ವರೆಗೆ ವಿಸ್ತರಿಸಿದರೆ ಅದ್ಹೇಗೆ ಗಡಿ ಎನ್ನಲಾದೀತು? ಎರಡು ಆಯೋಗಗಳು

ಇಂದಿನ ಮೈಸೂರು ಮತ್ತು ಮುಂಬಯಿ ರಾಜ್ಯಗಳ ಸುತ್ತೆಲ್ಲ ತಿರುಗಾಡಿದ್ದಾರೆ. ಜನರ ಅಹವಾಲುಗಳನ್ನು ಕೇಳಿದ್ದಾರೆ. ಈ ಎಲ್ಲ ಸ್ನೇಹಿತರು ಲಿಖಿತ ರೂಪವಾಗಿ, ಮೌಖಿಕವಾಗಿ ಆಯೋಗಗಳ ಮುಂದೆ ಹೇಳಿದ್ದಾರೆ. ಲೋಕ ಸಭೆಯಲ್ಲಿ ಚರ್ಚೆಯಾಗಿದೆ. ಹೊಸದಾಗಿ ಈಗ ಎತ್ತಬಹುದಾದದ್ದು ಏನೂ ಇಲ್ಲ. ಈಗಿರುವ ಅಂಶವೆಂದರೆ ಒಂದು ಇತ್ಯರ್ಥಕ್ಕೆ ಬರಲು ಸಾಧ್ಯವಿದೆಯೇ ಎಂಬುದು. ನಾವು ಇಲ್ಲಿ ಒಪ್ಪಿದರೆ ಅದಕ್ಕೆ ಮುಂಬಯಿ ಸರಕಾರ ಒಪ್ಪುವುದೆಂಬ ಗ್ಯಾರಂಟಿ ಇದೆಯೆ? ಅದರಂತೆ ನಾವು ಕೂಡ ಅವರ ನಿರ್ಧಾರಗಳನ್ನು ಒಪ್ಪುತ್ತೇವೆ ಎಂದು ಹೇಳಲಿಲ್ಲ. ಆಯೋಗಗಳ ಶಿಫಾರಸ್ಸುಗಳ ತಳಹದಿಯ ಮೇಲೆಯೇ ಈ ವಿಷಯವನ್ನು ಸೆಟಲ್ ಮಾಡಬೇಕಾಗಿದೆ. ಮರಾಠಿ ಅಥವ ಕನ್ನಡ ಮಾತನಾಡುವ ಪ್ರತಿಶತ 70 ರಷ್ಟು ಜನರಿದ್ದ ಮತ್ತು ಹತ್ತಿರದವರಾಗಿದ್ದರೆ ಅಂಥ ಪ್ರದೇಶಗಳನ್ನು ಮಹಾರಾಷ್ಟ್ರ ಅಥವ ಕರ್ನಾಟಕದಲ್ಲಿ ಸೇರಿಸಬಹುದು ಎಂದು ಹೇಳಿದ್ದಾರೆ. ಆದರೆ ಆ ತಳಹದಿಯು ಮಹಾರಾಷ್ಟ್ರ ಏಕೀಕರಣ ಸಮಿತಿಯವರಿಗೆ ಒಪ್ಪದಿದ್ದರೆ ಮತ್ತು ತಾತ್ವಿಕವಾಗಿ ನಾವು ಒಪ್ಪಿದ್ದನ್ನು ಮುಂಬಯಿ ಮುಖ್ಯ ಮಂತ್ರಿಗಳು ಒಪ್ಪದಿದ್ದರೆ ಅದರಲ್ಲಿ ಅರ್ಥವೇ ಇಲ್ಲ. ಪರಸ್ಪರ ಆಲೋಚಿಸದ ಹೊರತು ಅದರಲ್ಲಿ ಅರ್ಥವಿಲ್ಲ. ಅದುವೇ ನಮ್ಮಲ್ಲಿರುವ ಮುಖ್ಯ ತೊಂದರೆ. ಆದ್ದರಿಂದ ನಾನು ಕೇಂದ್ರ ಗೃಹ ಮಂತ್ರಿಗಳೊಂದಿಗೆ ಪತ್ರ ವ್ಯವಹಾರ ಮಾಡುವೆ. ಪ್ರತಿಯಾಗಿ ಅವರು ಮುಂಬಯಿ ಮುಖ್ಯ ಮಂತ್ರಿಗಳೊಂದಿಗೆ ವ್ಯವಹರಿಸುತ್ತಾರೆ. ಯಾವ ಹಂತದ ಮಟ್ಟಿಗೆ ನಾವು ಪರಸ್ಪರ ಒಪ್ಪಬಹುದು ಮತ್ತು ಹಾಗೆ ಮುಂಬಯಿ ಮುಖ್ಯಮಂತ್ರಿಗಳಿಂದ ಭರವಸೆ ಅಥವ ತಿಳುವಳಿಕೆ ಗೊತ್ತಾದರೆ, ಯಾವ ತಳಹದಿಯ ಮೇಲೆ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದು ಎಂದು ಪ್ರಯತ್ನ ಮಾಡಲು ಸಾಧ್ಯವಾಗುತ್ತದೆ. ದೆಹಲಿಯಲ್ಲಿ ನಾವು ಭೇಟಿಯಾದಾಗ ಈ ಪ್ರಶ್ನೆಯನ್ನು ತೆಗೆದುಕೊಳ್ಳೋಣ ಎಂದು ಗೃಹ ಮಂತ್ರಿಗಳು ಬರೆದಿದ್ದಾರೆ. ಏಪ್ರಿಲ್ ಮೊದಲವಾರ ಅಥವ ಅದಕ್ಕೂ ಮೊದಲೇ ನಾವು ದೆಹಲಿಗೆ ಹೋಗುವ ಸಾಧ್ಯತೆ ಇದೆ. ಯಾವುದೇ ತಳಹದಿ ಅದು ಮುಂಬಯಿ ಮುಖ್ಯಮಂತ್ರಿಗಳಿಗೆ ಒಪ್ಪಿಗೆಯಾದರೆ, ಅನಂತರ ಒಂದು ಇತ್ಯರ್ಥಕ್ಕೆ ಬರುವ ಸಾಧ್ಯತೆ ಇದೆ. ಒಂದು ವಿಶಿಷ್ಟ ಪ್ರದೇಶ ಮುಂಬಯಿ ರಾಜ್ಯಕ್ಕೆ ಸೇರಬೇಕೆಂದು ಕೆಲವು ಜನರಿಗೆ ಆತುರತೆ ಇದ್ದ ಹಾಗೆ, ಅದರಂತೆ ಈ ಸರಕಾರಕ್ಕಾದರೂ ಕನ್ನಡ ಪ್ರದೇಶಗಳನ್ನು ಸೇರಿಸಬೇಕೆಂಬ ಆತುರತೆ ಇದೆ. ಅದು ಕೂಡ ಒಂದು ಮಹತ್ವದ ಅಂಶವಾಗಿದೆ. ಅಡ್‌ಹಾಕ್ ತಳಹದಿಯ ಮೇಲೆ ನಾವು ಸಮಾಲೋಚಿಸಬೇಕು. ಉಭಯತರು ಒಂದೆಡೆ ಕೂಡಬೇಕು ಮತ್ತು ಒಂದು ಇತ್ಯರ್ಥಕ್ಕೆ ಬರಬೇಕು. ನಮಗೆ ಐದೋ - ಆರೋ ಹಳ್ಳಿಗಳು ದೊರೆತರೆ ಅದು ವಿಷಯವಲ್ಲ. ನಾವು ಅಷ್ಟೊಂದು ಮಿತಿ ಮೀರಿ ಅದರಲ್ಲಿ ತಲೆ ಹಾಕಬಾರದು. ಮರಾಠಿ ಮತ್ತು ಕನ್ನಡ ಮಾತನಾಡುವ ಜನರ ಸಾಮಾನ್ಯ ಮತ್ತು ತಕ್ಷಣ ಒಪ್ಪುವ ತತ್ವಗಳ ಆಧಾರಗಳ ಮೇಲೆ ಒಂದು ಇತ್ಯರ್ಥಕ್ಕೆ ಬರಬೇಕು. ಈ ಎಲ್ಲ ವಿಷಯಗಳನ್ನು ಗಣನೆಗೆ ತೆಗೆದುಕೊಂಡರೆ ನಾವು ಒಂದು ಇತ್ಯರ್ಥಕ್ಕೆ ಬರಬಹುದು. ನಾನು ಕೆಲವು ವಿಷಯಗಳನ್ನು ಬಹಿರಂಗಗೊಳಿಸಿದೆ ಮತ್ತು ಇನ್ನು ಕೆಲವು

ವಿಷಯಗಳು ನನ್ನ ಮತ್ತು ಮುಂಬಯಿ ಮುಖ್ಯ ಮಂತ್ರಿಗಳ ಮಧ್ಯ ನಡೆದ ಚರ್ಚೆಯನ್ನು ಬಹಿರಂಗಗೊಳಿಸಿಲ್ಲ ಇಲ್ಲಿಗೆ ನಾನು ಈ ವಿಷಯವನ್ನು ನಿಲ್ಲಿಸುವೆ.

ಇನ್ನು ಸನ್ಮಾನ್ಯ ಸದಸ್ಯರಾದ ಶ್ರೀ ಆರ್ಮುಗಮ್‌ರವರು 1958 ರ ಪಬ್ಲಿಕ್ ಸರ್ವಿಸ್ ಕಮಿಶನ್ ನಿಬಂಧನೆಗಳ ಅನೆಕ್ಸರ್ 2 ರ ಬಗ್ಗೆ ಹೇಳಿದರು. ಇದರಡಿಯಲ್ಲಿ ನೇಮಕಾತಿ ಆಗುವ ಎಲ್ಲ 60 ತೆರನಾದ ಸಿಬ್ಬಂದಿಯ ನೇಮಕಾತಿಯ ಬಗ್ಗೆ ಓದುವ ಕಾಳಜಿಯನ್ನು ವಹಿಸಬೇಕಾಗಿತ್ತೆಂದು ನನಗೆ ಅನಿಸುತ್ತದೆ. ಈ ರೀತಿಯಾಗಿ ಇದೊಂದೇ ರಾಜ್ಯದಲ್ಲಿಲ್ಲ. ಉಳಿದ ರಾಜ್ಯಗಳಲ್ಲೂ ಇದೇ ತೆರನಾಗಿದೆ ಮತ್ತು ಈ ಪೋಸ್ಟಗಳನ್ನು ಪಬ್ಲಿಕ್ ಸರ್ವಿಸ ಕಮೀಶನ್ನಿನ ಕಾನೂನುಗಳ ವ್ಯಾಪ್ತಿಯ ಹೊರಗಡೆ ಇಡಲಾಗಿದೆ.

* ಶ್ರೀ ಎಂ.ಪಿ. ನರಸಿಂಹನ್ : ಕೇರಳದಲ್ಲಿ ಹಾಗಿಲ್ಲ.

* ಶ್ರೀ ಬಿ.ಡಿ. ಜತ್ತಿ : ಕೇರಳದ ಬಗ್ಗೆ ನನಗೆ ಗೊತ್ತಿಲ್ಲ ಆದರೆ, ನನಗೆ ಗೊತ್ತಿದ್ದಂತೆ ಬಹುತೇಕ ರಾಜ್ಯಗಳಲ್ಲಿ ಈ ರೂಢಿ ಇದೆ. ನಾವು ವಿಚಾರಿಸಿದಾಗ ಆ ರಾಜ್ಯಗಳಲ್ಲಿ ಈ ಪೋಸ್ಟಗಳನ್ನು ಪಿ.ಇಸ್.ಸಿ. ಯ ಪರಿಧಿಯ ಹೊರಗೆ ಇಟ್ಟದ್ದು ಗೊತ್ತಾಯಿತು. ನಾವು ಕೂಡ ಇಲ್ಲಿ ಅದೇ ರೂಢಿಯನ್ನು ಅನುಸರಿಸಿದ್ದೇವೆ. ನಮ್ಮ ಸ್ನೇಹಿತರು ಅದನ್ನು ವಿರೋಧಿಸುತ್ತಿದ್ದಾರೆ. ನಾವು ಪುನರ್‌ವಿಮರ್ಶಿಸೋಣ ಮತ್ತು ಆದರಿಂದ ಒಂದು ವೇಳೆ ಯಾವುದೇ ಸಮಾಜಕ್ಕೆ ಅನ್ಯಾಯವಾಗುತ್ತಿದೆ ಎಂದು ಕಂಡು ಬಂದರೆ, ಅದರ ಬಗ್ಗೆಯೂ ನಾವು ವಿಚಾರಿಸೋಣ, ಇದರಲ್ಲಿ ಸಂಶಯವೇ ಇಲ್ಲ.

ಎರಡನೆಯದಾಗಿ, ಎಲ್ಲ ಕ್ಲಾಸ್ 1,2 ಮತ್ತು 3 ನೇಮಕಾತಿಯನ್ನು ಪಬ್ಲಿಕ್ ಸರ್ವಿಸ ಕಮೀಶನ್ನಿನ ಮುಖಾಂತರವೇ ಮಾಡಲಾಗುತ್ತದೆಯೆಂದು ನಾನು ಸನ್ಮಾನ್ಯ ಸದಸ್ಯರ ಗಮನಕ್ಕೆ ತರಬಯಸುತ್ತೇನೆ. ಪಿ.ಎಸ್.ಪಿ ಹೊರತಾಗಿ ಬೇರೆ ಎಜನ್ಸಿಗಳ ಮೂಲಕ ನೇಮಕಾತಿ ಮಾಡುವಾಗಲೂ ಕೂಡ ಜಾತಿವಾರು ಶೇಕಡಾವನ್ನು ಗಣಿಸುತ್ತೇವೆ. ಮತ್ತು ನೇಮಕಾತಿ ಪಿ.ಎಸ್.ಸಿ. ಮುಖಾಂತರವಾಗಿರಲಿ ಅಥವ ಬೇರೆ ಎಜೆನ್ಸಿ ಮೂಲಕವಾಗಿರಲಿ ಎಲ್ಲ ಜನರೂ ತಮ್ಮ ಪಾಲನ್ನು ಪಡೆಯುತ್ತಾರೆ. ಆದ್ದರಿಂದ ಈ ದಿಶೆಯಲ್ಲಿ ಯಾವುದೇ ಪ್ರತ್ಯೇಕ ವ್ಯಕ್ತಿಗಾಗಲೀ ಅಥವ ಸಮುದಾಯಕ್ಕಾಗಲೀ ಅನ್ಯಾಯವಾಗುತ್ತದೆ ಎಂಬ ಅಂಜಿಕೆ ಯಾವ ಸದಸ್ಯರಿಗೂ ಬರುವುದು ಬೇಡ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸಂಬಂಧಿಸಿದಂತೆ, ಸಂವಿಧಾನದಲ್ಲಿ ನಿರ್ಧರಿಸಿದ ಪ್ರಮಾಣವನ್ನು ಸ್ವೀಕರಿಸಲೇ ಬೇಕಾಗುತ್ತದೆ. ಇದರಲ್ಲಿ ಸರಕಾರದಿಂದ ಏನಾದರೂ ತಪ್ಪುಗಳಾಗಿದ್ದರೆ ಅವುಗಳನ್ನು ತಿದ್ದಲು ನಾವು ಸಿದ್ಧರಾಗಿದ್ದೇವೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಂದ ನೇಮಕ ಮಾಡಬೇಕಾದಷ್ಟು ಜನರನ್ನು ನೇಮಕಾತಿ ಮಾಡಿಲ್ಲವೆಂದು ಕಳೆದ ಹತ್ತು - ಹನ್ನೊಂದು ವರುಷಗಳಿಂದ ಮತ್ತೆ - ಮತ್ತೆ ಹೇಳಲಾಗುತ್ತಿದೆ. ಅದು ಸತ್ಯವೂ ಇರಬಹುದು. ಅದಕ್ಕೆ ನಾವು ವಿವರಗಳನ್ನು

ಕೊಡಲು ಸಾಧ್ಯವಿಲ್ಲ. ಅದಕ್ಕೆ ಹಲವಾರು ಕಾರಣಗಳಿರಬಹುದು ಮತ್ತು ಅದು ಸಚಿವರ, ಕಾರ್ಯದರ್ಶಿಗಳ ಅಥವ ಮುಖ್ಯ ಕಾರ್ಯದರ್ಶಿಗಳ ತಪ್ಪು ಎಂದು ಹೇಳಲಾಗುವುದಿಲ್ಲ. ಆದಾಗ್ಯೂ ಇಂದಿಗೂ ಕೂಡ ನಮ್ಮ ಪಾಲಿಸಿಯನ್ನು ಹೇಳಬೇಕೆಂದರೆ, ಇಬ್ಬರು ಸಮಾನ ಅರ್ಹತೆಯವರು ಇದ್ದಾಗ ಅವರಲ್ಲಿಯ ಪರಿಶಿಷ್ಟ ವರ್ಗದವರಿಗೆ ಅವಕಾಶವನ್ನು ಕೊಡುತ್ತೇವೆ. ಯಾಕೆಂದರೆ ಬಹು ದಿನಗಳಿಂದ ನಿರ್ಲಕ್ಷಕ್ಕೊಳಗಾದ ಸಮಾಜದ ಬಗ್ಗೆ ನಮ್ಮ ಒಲವು ಇದೆ. ಅದು ಸರಕಾರದ ರೀತಿಯಾಗಿದೆ. ಇದಿಷ್ಟರಿಂದ ಸನ್ಮಾನ್ಯ ಸದಸ್ಯರಾದ ಶ್ರೀ ಆರ್ಮುಗಮ್ ಅವರಿಗೆ ಸಮಾಧಾನವಾದರೆ ನಾನು ಮತ್ತೆ ಹೆಚ್ಚಿಗೆ ಹೇಳುವುದಿಲ್ಲ.

* ಶ್ರೀ ಸಿ.ಎಂ. ಆರ್ಮುಗಮ್ : ಯಾವ ಪ್ರೊವಿಜನ್ನಿನ ಅಡಿಯಲ್ಲಿ ಈ 60 ವರ್ಗಗಳಿಗೆ ವಿನಾಯಿತಿ ನೀಡಿದ್ದೀರಿ ಮತ್ತು ಅವುಗಳನ್ನು ಪಿ.ಎಸ್.ಸಿ. ವ್ಯಾಪ್ತಿಯ ಹೊರಗಿಟ್ಟಿದ್ದೀರಿ ಎಂಬುದನ್ನು ನಾನು ತಿಳಿಯಬಯಸುವೆ. ಸಂವಿಧಾನದ 309 ನೇಯ ಅಧಿನಿಯಮವನ್ನು ತಮ್ಮ ಗಮನಕ್ಕೆ ತರಬಯಸುವೆ. ಆ ಅಧಿನಿಯಮದಂತೆ ನೇಮಕಾತಿಯ ಮೊದಲು ಈ ಸಭೆಯಲ್ಲಿ ನೀವು ಶಾಸನವನ್ನು ತರಬೇಕಾಗಿತ್ತು. ಅದನ್ನು ನೀವು ಮಾಡಿಲ್ಲ.

* ಶ್ರೀ ಬಿ.ಡಿ. ಜತ್ತಿ : ವಸ್ತುಸ್ಥಿತಿಯನ್ನು ವಿವರವಾಗಿ ಹೇಳಿರುವೆ. ಏನಾದರೂ ಮಾಡಬೇಕಿದ್ದರೆ, ಅವರು ಹಾಗೆ ಮಾಡಲು ಹೇಳಲಿ. ಅದರಲ್ಲೇನಾದರೂ ಹೆಚ್ಚಿಗೆ ಮಾಡಬೇಕಿದ್ದರೂ ಸರಕಾರ ಅದನ್ನು ಮಾಡಲು ಸಿದ್ಧವಿದೆ. ಆ ವಿಷಯದಲ್ಲಿ ಸಲಹೆ ಕೊಡಲು ಯಾರಿಗೂ ನಿಷೇಧವಿಲ್ಲ.

* ಶ್ರೀ ಸಿ.ಎಂ. ಆರ್ಮುಗಮ್ : ಈ 60 ವರ್ಗಗಳಿಗೆ ವಿನಾಯಿತಿ ನೀಡಲು ಅಂಥ ಯಾವ ವಿಶೇಷ ಸಂದರ್ಭ ಬಂದಿತು. ಉಳಿದ ಯಾವುದೋ ರಾಜ್ಯಗಳು ವಿನಾಯತಿ ನೀಡಿದರೆಂದು ಅವರನ್ನು ಅನುಸರಿಸಿದಿರಾ?

* ಶ್ರೀ ಬಿ.ಡಿ. ಜತ್ತಿ : ಕೆಲವು ವಿಷಯಗಳ ಕುರಿತು ನನ್ನ ಸಹೊದ್ಯೋಗಿ ಅರ್ಥ ಮಂತ್ರಿಗಳು ಆಗಲೇ ಹೇಳಿದ್ದಾರೆ. ಸಚಿವರು ತಮ್ಮ ಜಾತಿಯವರನ್ನು ಚಪರಾಸಿಯನ್ನಾಗಿ ನೇಮಕಾತಿ ಮಾಡಿದರೆಂಬ ಒಂದು ವಿಷಯದಲ್ಲಿ ಮಾತ್ರ ಉತ್ತರ ಕೊಡುವೆ. ನನಗೆ ಗೊತ್ತಿದ್ದಂತೆ ಯಾವ ಸಚಿವರೂ ತಮ್ಮ ಚಪರಾಸಿಗಳನ್ನು ತಾವೇ ನೇಮಿಸಿಕೊಂಡಿಲ್ಲ. ಅಂದಾಗ ತಮ್ಮ ಜಾತಿಯ ಚಪರಾಸಿಯನ್ನು ನೇಮಿಸಿಕೊಳ್ಳುವ ಪ್ರಶ್ನೆಯೇ ಇಲ್ಲ. ಸಚಿವರು ಯಾವುದೇ ಚತುರ್ಥ ವರ್ಗದ ನೌಕರರನ್ನು ನೇಮಿಸುವುದಿಲ್ಲ. ಕೆಲವು ತತ್ವಗಳ ಆಧಾರದ ಮೇಲೆ ಆ ನೇಮಕಾತಿಗಳನ್ನು ಇಲಾಖಾ ಮುಖ್ಯಸ್ಥರು ಮಾಡುತ್ತಾರೆ. ಅದನ್ನೆ ನಾನೀಗ ಹೇಳಿದೆ. ಆ ತತ್ವಗಳನ್ನು ಉಲ್ಲಂಘಿಸಿದ ಸಂದರ್ಭಗಳಿದ್ದರೆ ವಿರೋಧ ಪಕ್ಷಗಳ ಸದಸ್ಯರಾಗಲೀ ಅಥವ ನಮ್ಮ ಪಕ್ಷದ ಸದಸ್ಯನೇ ಆಗಲಿ ನನ್ನ ಗಮನಕ್ಕೆ ತಂದರೆ, ಇಂಥ ಒಬ್ಬ ಸಚಿವರು ತಮ್ಮ ಜಾತಿಗೆ ಸೇರಿದ ಇಂಥ ಒಬ್ಬನನ್ನು ನೇಮಕಾತಿ ಮಾಡಿಕೊಂಡಿದ್ದಾರೆ ಎಂದು ಹೇಳಿದರೆ ನಾನು ಅದನ್ನು ನೋಡುವೆ ಮತ್ತು ಅದು ತಪ್ಪು ಎಂದು ಒಪ್ಪುವೆ ಮತ್ತು ಅದನ್ನು ತಿದ್ದುವೆ.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ಶ್ರೀ ಗುಂಡ್ಲಿ ಅವರ ನೇಮಕಾತಿ ಬಗ್ಗೆ ಏನು ಹೇಳುತ್ತೀರಿ?

* ಶ್ರೀ ಬಿ.ಡಿ. ಜತ್ತಿ : ಅದು ಪಬ್ಲಿಕ್ ಸರ್ವಿಸ ಕಮೀಶನ್ನಿನ ವ್ಯಾಪ್ತಿಯ ಹೊರಗೆ ಬರುವ ಪೋಸ್ಟು. ಅವರಿಗೆ ಅರ್ಹತೆಗಳಿದ್ದುವೆಂದು ಅವರನ್ನು ನೇಮಕಾತಿ ಮಾಡಲಾಯಿತು. ಉಳಿದವರಿಗಿಂತ ಅಧಿಕವಾದ ಅನೇಕ ವಿದ್ಯಾರ್ಹತೆಗಳು ಅವರಲ್ಲಿವೆ. ಅದನ್ನು ಒಪ್ಪಿಕೊಳ್ಳಲಾಗಿದೆ ಮತ್ತು ಅದಕ್ಕಾಗಿ ಆ ಪೋಸ್ಟನ್ನು ಪಬ್ಲಿಕ್ ಸರ್ವಿಸ್ ಕಮೀಶನ್ನಿನ ವ್ಯಾಪ್ತಿಯಲ್ಲಿ ತರಲಿಲ್ಲ. ಯಾವ ಸಚಿವರಾಗಲೀ, ಮುಖ್ಯ ಮಂತ್ರಿಯಾಗಲೀ ಅಥವ ಕಾರ್ಯದರ್ಶಿಯಾಗಲೀ ಅವರ ನೇಮಕಾತಿಯನ್ನು ಮಾಡಲಿಲ್ಲ ಎಂದು ಗೌರವಾನ್ವಿತ ಸದಸ್ಯರಿಗೆ ನಾನು ಭರವಸೆ ಕೊಡುವೆ. ಸದಸ್ಯರು ಅದನ್ನು ಪಬ್ಲಿಕ್ ಸರ್ವೀಸ ಕಮೀಶನ್ನಿನ ವ್ಯಾಪ್ತಿಗೆ ಒಳಪಡಿಸಬೇಕು ಎಂದು ಬಯಸಿದರೆ ಆ ಬಗ್ಗೆ ನಾವು ಯೋಚಿಸೋಣ, ಹಾಗೆ ಮಾಡಲು ನಮಗೆ ಸಂತೋಷವೆನಿಸುತ್ತದೆ. ನಾನು ಮತ್ತು ನನ್ನ ಸಹೋದ್ಯೋಗಿಗಳು ಯಾವ ಸದ್ಗೃಹಸ್ಥನನ್ನು ನೇಮಕಾತಿ ಮಾಡಲು ಆತುರರಾಗಿಲ್ಲ. ಅದರಲ್ಲಿಯ ತೊಂದರೆಗಳು ನಮಗೆ ಗೊತ್ತು. ಕೆಲವು ಜನ ನಮ್ಮ ಮೇಲೆ ಒತ್ತಡ ತರಲು ಪ್ರಯತ್ನಿಸುತ್ತಾರೆ. ಒಬ್ಬ ಒಳ್ಳೆಯ ಸಚಿವನಿಗೆ ಅಂಥ ಪ್ರಭಾವಗಳಿಂದ ದೂರವಿರಲು ಕಷ್ಟವಾಗುತ್ತದೆ. ನನ್ನ ಸಹೋದ್ಯೋಗಿ ಶ್ರೀ ಚನ್ನಬಸಪ್ಪನವರು ನಾವು ಸಿಲೆಕ್ಟ ಮಾಡಲು ಪ್ರಯತ್ನಿಸಬಾರದೆಂದು ಒತ್ತಾಯಪೂರ್ವಕ ಹೇಳಿದರು. ಪೇಚಿಗೆ ಸಿಲುಕಿಸುವ ಸಂದರ್ಭಗಳು ಬರುತ್ತವೆ. ಅದರಿಂದ ಮುಕ್ತರಾಗಲು ನಾವು ಪ್ರಯತ್ನಿಸುತ್ತಿದ್ದೇವೆ. ಇದಿಷ್ಟು ನನ್ನ ಹಾಗು ನನ್ನ ಸಹೋದ್ಯೋಗಿಗಳ ದೃಷ್ಟಿ. ಇಷ್ಟಾಗಿಯೂ ನಾವು ಏನೋ ಮಾಡಿದ್ದೇವೆ ಎಂದು ಸದಸ್ಯರಿಗೆ ಅನಿಸಿದರೆ ಆ ಬಗ್ಗೆ ವಿಚಾರಿಸಲೂ ನಾನು ಸಿದ್ಧನಿದ್ದೇನೆ.

ಮಾನ್ಯರೆ, ಆಡಳಿತ ಸುಧಾರಣೆಗಾಗಿ ಹಲವಾರು ಸಲಹೆಗಳು ಬಂದುವು. ಸರಕಾರದ ವಿವಿಧ ಇಲಾಖೆಗಳಲ್ಲಿಯ ಆಡಳಿತ ವಿಧಾನಗಳನ್ನು ಪರೀಕ್ಷಿಸಿ ಏಕ ರೂಪ ವಿಧಾನಗಳ ಶಿಫಾರಸಿಗಾಗಿ ಶ್ರೀ ಎ.ಡಿ. ಗೋರವಾಲಾ ಅವರನ್ನು ನೇಮಿಸಿದ್ದು ಮಾನ್ಯ ಸದಸ್ಯರಿಗೆ ಗೊತ್ತಿದೆ. ಅವರ ವರದಿ ನಮಗೆ ಬಂದಿದೆ. ಸುಧಾರಣೆಗಾಗಿ ಅವರು ನೀಡಿದ ಸಲಹೆಗಳನ್ನು ನಾವು ಗಣನೆಗೆ ತೆಗೆದುಕೊಂಡಿದ್ದೇವೆ ಮತ್ತು ಅವುಗಳಲ್ಲಿಯ ಕೆಲವನ್ನು ಜಾರಿಗೆ ತಂದಿದ್ದೇವೆ. ಅವರು ನೀಡಿದ ಕೆಲವು ಶಿಫಾರಸ್ಸುಗಳನ್ನು ಸರಕಾರ ಪರಿಗಣಿಸಲಿಕ್ಕೂ ಇಲ್ಲ. ಆ ಬಗ್ಗೆ ನಾನು ವಿವರಗಳಿಗೆ ಹೋಗುವುದಿಲ್ಲ. ಈ ಎಲ್ಲ ಅಂಶಗಳನ್ನು ಬಜೆಟ್ ಚರ್ಚೆಯಲ್ಲಿ ಚರ್ಚಿಸಬಹುದು. ಅದರಲ್ಲಿ ನಾವು ಒಂದೋ ಅಥವ ಎರಡು ದಿನಗಳನ್ನು ಗೋರವಾಲಾ ವರದಿಯ ಮೇಲಿನ ಚರ್ಚೆಗೆಂದೇ ಕೊಟ್ಟಿದ್ದೇವೆ. ಆ ಹಂತದಲ್ಲಿ ಸದಸ್ಯರು ಸಲಹೆಗಳನ್ನು ಕೊಡಲು ಬಾಧ್ಯರಾಗಿದ್ದಾರೆ.

ನನ್ನ ಸ್ನೇಹಿತರಾದ ಶ್ರೀ ಪುಟ್ಟಣ್ಣ ಅವರು, ನ್ಯಾಯಾಂಗದಲ್ಲಿ ಮಧ್ಯ ಬರುತ್ತಿದ್ದೇವೆಂದು ಕೆಲವು ಟೀಕೆಗಳನ್ನು ಮಾಡಿದರು. ನನ್ನ ಸಹೋದ್ಯೋಗಿಗಳಾದ ಅರ್ಥಮಂತ್ರಿಗಳು ಸಾಕಷ್ಟು ಉತ್ತರಿಸಿದ್ದಾರೆ. ಯಾಕೆಂದರೆ ಅವರಿಗೆ ಶ್ರೀ ಪುಟ್ಟಣ್ಣ ಅವರು ಚೆನ್ನಾಗಿ ಗೊತ್ತು ಮತ್ತು ನನಗೆ

ಅವರ ಬಗ್ಗೆ ಅಧಿಕ ಪರಿಚಯವಿಲ್ಲ. ಸಚಿವರು ಸಿವಿಲ ಮತ್ತು ಕ್ರಿಮಿನಲ್ ಕೋರ್ಟುಗಳಲ್ಲಿ ಅಡ್ಡ ಬರುತ್ತಾರೆಂದು ಶ್ರೀ ಪುಟ್ಟಣ್ಣನವರು ಆಪಾದಿಸಿದ್ದಾರೆ.

* ಶ್ರೀ ಜಿ.ಎನ್. ಪುಟ್ಟಣ್ಣ : ನೀವು ಬಯಸಿದರೆ, ನಿಮ್ಮ ಚೇಂಬರಿನಲ್ಲಿ ಆಪಾದನೆಗಳನ್ನು ಸಿದ್ದ ಮಾಡಿ ತೋರಿಸುವೆ.

* ಶ್ರೀ ಬಿ.ಡಿ. ಜತ್ತಿ : ಏನೇ ಇರಲಿ ಆಪಾದನೆಗಳು ಇಷ್ಟು ಸಾಮಾನ್ಯವಾಗಿವೆಯಲ್ಲಾ.

* ಶ್ರೀ ಜಿ.ಎನ್. ಪುಟ್ಟಣ್ಣ : ಎಲ್ಲ ಸಚಿವರು ಅಡ್ಡ ಬರುತ್ತಾರೆಂದು ನಾನು ಹೇಳಿಲ್ಲ. ಕೇವಲ ಕೆಲವರು

* ಶ್ರೀ ಬಿ.ಡಿ. ಜತ್ತಿ : ಆ ಕೆಲವರೆ ಎಲ್ಲರಲ್ಲೂ ಅಡಕವಾಗಿದ್ದಾರೆ. ನನ್ನ ಜವಾಬ್ದಾರಿ ನನ್ನದೊಂದೆ ಅಲ್ಲ. ಅದು ಎಲ್ಲ ಸಚಿವರದ್ದೂ ಆಗಿದೆ. ಮಾನ್ಯ ಸದಸ್ಯರು ಎಲ್ಲ ಸಚಿವರೆಂದು ಹೇಳಿರಲಿಕ್ಕಿಲ್ಲ. ಅವರ ಮಾತಿಗೆ ಬೆಲೆ ಕೊಡುತ್ತ ಅವರ ಆಪಾದನೆಗಳು ತಳ ಬುಡ ಇಲ್ಲದವುಗಳೆಂದು ಹೇಳಬಯಸುವೆ. ಶ್ರೀ ಪುಟ್ಟಣ್ಣ ಹೇಳಿದ್ದು ತಪ್ಪು. ಒಂದು ಮೊಕದ್ದಮೆ ನನ್ನ ಗಮನಕ್ಕೆ ಬಂದಿದೆ ಅದರಲ್ಲಿ ಸರಕಾರಿ ಗಿಡಗಳನ್ನು ಕಡಿದದ್ದರ ಬಗ್ಗೆ ಪೊಲೀಸ ಅಧಿಕಾರಿಗಳು ಕ್ರಿಮಿನಲ್ ಕೋರ್ಟಿನಲ್ಲಿ ಮೊಕದ್ದಮೆ ಹಾಕಿದ್ದಾರೆ. ನನಗೊಂದು ರಿಪ್ರೆಸೆಂಟೇಶನನ್ನು ಕೊಟ್ಟಿದ್ದಾರೆ. ಅದೊಂದು ನಂಬಿಕೆಗೆ ಅರ್ಹವಾದ ತಪ್ಪು. ಅವುಗಳು ಖಾಸಗಿ ಒಡೆತನವಾಗಿದ್ದರೂ ಆ ವ್ಯಕ್ತಿ ಗಿಡಗಳನ್ನು ಕಡಿದಿದ್ದಾನೆ. ಹೈಸ್ಕೂಲನ್ನು ಕಟ್ಟುವ ಉದ್ದೇಶಕ್ಕಾಗಿ ಗಿಡಗಳನ್ನು ಕಡಿಯಲಾಗಿದೆ. ನಾವು ಕೇಸನ್ನು ಪರಿಶೀಲಿಸುತ್ತಿದ್ದೇವೆ. ಅದು ನಿಜವಾಗಿಯೂ ತಪ್ಪು ಎಂದು ನಮಗೆ ಎನಿಸಿದರೆ, ..........

* ಶ್ರೀ ಜಿ.ಎನ್. ಪುಟ್ಟಣ್ಣ : ನಾನು ಈ ಕೇಸಿನ ಬಗ್ಗೆ ಹೇಳಲೆ ಇಲ್ಲ. ಇದು ನಿಜವಾಗಿಯೂ ನನಗೆ ಹೊಸ ಸುದ್ದಿ. ಉಳಿದ ಕೇಸುಗಳಿವೆ.

* ಶ್ರೀ ಬಿ.ಡಿ. ಜತ್ತಿ : ನಾವು ತಪ್ಪು ಮಾಡಿದ್ದರೆ, ಈ ಸಭೆಯಲ್ಲಿ ನಾನು ಅವುಗಳನ್ನು ಒಪ್ಪಿಕೊಳ್ಳುವೆ.

ವಿವರಗಳಿಗೆ ಹೋಗಲು ನನ್ನಿಂದ ಸಾಧ್ಯವಿಲ್ಲ. ನಾನು ತುಂಬ ಸಂಕ್ಷಿಪ್ತನಾಗುವೆ. ಯೋಜನೆ ಮತ್ತು ಅಭಿವೃದ್ಧಿ ಕುರಿತು ಸರಕಾರದ ಕಾರ್ಯ ನಿರ್ವಹಣೆ ತುಂಬ ಕಳಪೆಯದ್ದು ಎಂದು ವಿಮರ್ಶಿಸಲಾಯಿತು. ಕೇಂದ್ರದಿಂದ ಬರುವ ಸಹಾಯದಲ್ಲಿ ಕಡಿತವಾಗಬಹುದೆಂದೂ ಹೇಳಲಾಯಿತು. ಕೇಂದ್ರದಿಂದ ರಾಜ್ಯಕ್ಕೆ ಬಂದ ಸಹಾಯ ಧನದ ಅಂಕಿ ಸಂಖ್ಯೆಗಳನ್ನು ಕೊಡಬಯಸುವೆ.

| | |
|---|---|
| 1956 - 57 | 7.1 (ಕೋಟಿಗಳಲ್ಲಿ) |
| 57-58 | 13.2 |

| | |
|---|---|
| 58-59 | 13.2 |
| 59-60 | 14.5 |

ಆದ್ದರಿಂದ ಕೇಂದ್ರ ಸರಕಾರವು ರಾಜ್ಯ ಸರಕಾರಕ್ಕೆ ಕೊಡುವ ಸಹಾಯ ಧನದಲ್ಲಿ ಕಡಿತ ಮಾಡುತ್ತದೆ ಎಂದು ಹೇಳುವುದು ಸರಿಯಲ್ಲ. ಪ್ರತಿಯಾಗಿ ಹೆಚ್ಚಿಗೆ ಕೊಡುತ್ತಿದ್ದಾರೆ ಅದಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿರಬೇಕು. ಅನೇಕ ಅಭಿವೃದ್ಧಿ ಕೆಲಸಗಳಿಗಾಗಿ ಅವರು ಉದಾರವಾಗಿ ಸಹಾಯ ಮಾಡುತ್ತಿದ್ದಾರೆ. ಗಣಿಗಳ ಅಭಿವೃದ್ಧಿಯಲ್ಲಿ 'Inclusive' ಎಂಬ ಶಬ್ದದ ಬದಲಾಗಿ 'In addition to' ಎಂಬ ಶಬ್ದವನ್ನು ಉಪಯೋಗಿಸಬೇಕಾಗಿತ್ತು. ಅದಕ್ಕಾಗಿ ವಿಷಾದಿಸುತ್ತೇವೆ. ಆದರೆ ಕೊಟ್ಟ ಅಂಕಿ ಸಂಖ್ಯೆಗಳು ರಾಜ್ಯಪಾಲರ ಭಾಷಣಕ್ಕಿಂತ ಚೆನ್ನಾಗಿವೆ. ಮೈಸೂರು ಪ್ರದೇಶ ಮತ್ತು ದೇಶದ ಉಳಿದ ಭಾಗಗಳಿಂದ 1959 ರ ಜನವರಿ 31 ರ ವರೆಗೆ ರಫ್ತಾದ ಸರಿಯಾದ ಸಂಖ್ಯೆಗಳು ಹೀಗಿವೆ.

| | | |
|---|---|---|
| ಮದ್ರಾಸ | 1.60 | ಲಕ್ಷ ಟನ್ನುಗಳು |
| ಮಸಲಿಪಟ್ಟಣ | .33 | ಲಕ್ಷ ಟನ್ನುಗಳು |
| ಕಾಕಿನಾಡ | .29 | ಲಕ್ಷ ಟನ್ನುಗಳು |
| ವಿಶಾಖಾಪಟ್ಟಣ | .88 | ಲಕ್ಷ ಟನ್ನುಗಳು |
| ಮುಂಬಯಿ | .19 | ಲಕ್ಷ ಟನ್ನುಗಳು |
| ಕಾರವಾರ | .84 | ಲಕ್ಷ ಟನ್ನುಗಳು |
| ಕಡಲೂರ | .60 | ಲಕ್ಷ ಟನ್ನುಗಳು |
| 1958 - 59 ರ ಒಟ್ಟು | 4.82 | ಲಕ್ಷ ಟನ್ನುಗಳು |
| 57 - 58 | 4.86 | ಲಕ್ಷ ಟನ್ನುಗಳು |

ನಿಜವಾಗಿ ಪಬ್ಲಿಕ್ ಸೆಕ್ಟರಿಗಿಂತ ಪ್ರಾಯವೇಟ ಸೆಕ್ಟರದವರು ಅಧಿಕ ರಫ್ತ ಮಾಡುವಲ್ಲಿ ಜವಾಬ್ದಾರರಾಗಿದ್ದಾರೆ.

ರೈಲು ಸಂಪರ್ಕದ ಕುರಿತು, ಸದಸ್ಯರು ರಾಜ್ಯಕ್ಕೆ ಅಧಿಕ ರೈಲು ಸಂಪರ್ಕವನ್ನು ಕಲ್ಪಿಸಲು ಪ್ರಯತ್ನಿಸಬೇಕೆಂದು ಕೇಳಿಕೊಂಡಿದ್ದಾರೆ. ಹೊಸ ರಾಜ್ಯ ನಿರ್ಮಾಣವಾದಂದಿನಿಂದ, ಹೊಸ ರೈಲು ದಾರಿಗಳನ್ನು ಪಡೆಯಲು ಸಾಧ್ಯವಾಗದಿದ್ದುದು ನಮ್ಮ ದುರ್ದೈವ. ಈಗ ಸುದ್ದಿ ಬರಬಹುದು. ಲೋಕ ಸಭೆಯ ಕಾರ್ಯಕಲಾಪಗಳು ಮುಗಿಯುವ ಮುನ್ನ ಹಾಸನ - ಮಂಗಳೂರು ರೈಲಿಗೆ ಮಂಜೂರಿ ದೊರೆತು ಅಂತಿಮ ಹೇಳಿಕೆ ಬರಬಹುದೆಂಬ ಆಶೆ ಇದೆ. ಆನಂತರ ಆದಷ್ಟು ಬೇಗ ಕಾರ್ಯವನ್ನು ಕೈಕೊಳ್ಳಬಹುದು.

* ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ : ಕಳೆದ ಪಲವಾರು ವರುಷಗಳಿಂದ ಆ ಆಶ್ವಾಸನೆ ಇದೆ. ಶರಾವತಿ ಕೊಳ್ಳದ ಯೋಜನೆಯಷ್ಟೇ ಅದೂ ಮಹತ್ವದ್ದಾಗಿದೆ. ನಾವು ಅದಕ್ಕಾಗಿ ಸಾಕಷ್ಟು ಒತ್ತಾಯ ತರಬೇಕು.

* ಶ್ರೀ ಬಿ.ಡಿ. ಜತ್ತಿ : ನಿಮ್ಮ ಮಾತಿಗೆ ನನ್ನ ಸಂಪೂರ್ಣ ಒಪ್ಪಿಗೆ ಇದೆ. ನೀವು ಆತುರರಾಗಿದ್ದಂತೆ ಸರಕಾರವೂ ಕೂಡ ಆತುರವಾಗಿದೆ ಮತ್ತು ಸರಕಾರ ಹಾಗೆ ಮಾಡುತ್ತದೆಂಬ ಭರವಸೆ ಇದೆ.

* ಶ್ರೀ ಜೆ.ಬಿ. ಮಲ್ಲಾರಾಧ್ಯ : ದಯಪಿಟ್ಟು ಬ್ರಾಡಗೇಜಗಾಗಿ ಈಲ್ದ ಆಗಬೇಡಿರಿ ನಾವು ಮೀಟರ್‌ಗೇಜನ್ನು ಪಡೆಯಬೇಕು.

* ಶ್ರೀ ಬಿ.ಡಿ. ಜತ್ತಿ : ಹೌದು. ಬಂದರುಗಳ ಅಭಿವೃದ್ಧಿ ಕುರಿತಾಗಿಯೂ, ಮಂಗಳೂರು ಬಂದರದ ಅಭಿವೃದ್ಧಿಗಾಗಿ 10 ಕೋಟಿ ರೂಪಾಯಿಗಳ ಯೋಜನೆಯೊಂದನ್ನು ಸಿದ್ದಪಡಿಸಿದ್ದು ಅದು ಈಗ ಪ್ಲ್ಯಾನಿಂಗ ಕಮಿಶನ್ನಿನ ಮುಂದೆ ಇದ್ದು - ಅದನ್ನು ಅವರು ಒಪ್ಪಿದ್ದಾರೆಂದು ತಿಳಿದು ಬಂದಿದೆ. ಅದನ್ನು ಸರ್ವ ಋತು ಬಂದರವನ್ನಾಗಿ ಗುರುತಿಸಿ ಸಾಧ್ಯವಾದಷ್ಟು ಬೇಗ ಕೆಲಸ ಪ್ರಾರಂಭಿಸುತ್ತಾರೆ ಕಾರವಾರ ಹಾಗು ಹೊನ್ನಾವರದಂತ ಕಿರಿಯ ಬಂದರುಗಳೂ ಇವೆ. ಮಂಗಳೂರಿಗಿಂತ ಕಾರವಾರವು ಬಹು ಮಹತ್ವದ್ದಾಗಿದೆ, ಆದ್ದರಿಂದ ಅದಕ್ಕೆ ಅಧಿಕ ಗಮನ ಕೊಡಬೇಕು ಮತ್ತು ಪರಿಣತರನ್ನು ಕಳಿಸಿ ಪೋರ್ಟ ಅಥವ ಹಾರ್ಬರನ್ನಾಗಿ ಪರಿವರ್ತಿಸಲು ಭಾರತ ಸರಕಾರವನ್ನು ವಿನಂತಿಸಿಕೊಳ್ಳುವ ಪ್ರಯತ್ನದಲ್ಲಿದ್ದೇವೆ. ತಕ್ಷಣ ಕನಿಷ್ಟ ಪಕ್ಷ ಒಂದು ಬಂದರವನ್ನಾದರೂ ಹೊಂದಲು ಮೈಸೂರು ಸರಕಾರ ಆತುರವಾಗಿದೆ. ಇಲ್ಲವಾದಲ್ಲಿ ನಮ್ಮ ಎಲ್ಲ ಮ್ಯಾಂಗನೀಸ್ ಖನಿಜ ಮತ್ತು ಇತರ ಖನಿಜ ಪದಾರ್ಥಗಳನ್ನು ಮುಂಬಯಿಗೆ ಕಳಿಸಲು ತುಂಬ ಕಷ್ಟವಾಗುತ್ತದೆ.

ಕೆಲ ಮಾನ್ಯ ಸದಸ್ಯರು ಗಣಿ ಅಭಿವೃದ್ಧಿ ಮಂಡಳಿಯ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ.

* ಶ್ರೀ ಜೇ.ಬಿ. ಮಲ್ಲಾರಾಧ್ಯ : ಅದು ಯಾಕೆ ಕೇವಲ ಅಧಿಕಾರಿಗಳನ್ನು ಅವಲಂಬಿಸಿದೆ? ಸಮಿತಿಯಲ್ಲಿ ಒಬ್ಬನೇ ಒಬ್ಬ ಅಧಿಕಾರೇತರ ಸದಸ್ಯನಿಲ್ಲ. ಇಂಥ ಕೊರತೆಗಳಿಂದ ಆ ಸಮಿತಿ ಎದ್ದು ಕಾಣುತ್ತಿದೆ.

* ಶ್ರೀ ಬಿ.ಡಿ. ಜತ್ತಿ : ಶ್ರೀ ಜೇ. ಬಿ. ಮಲ್ಲಾರಾಧ್ಯರ ಸಲಹೆಯನ್ನು ಗಮನಿಸುತ್ತೇವೆ. ಬೇರೆ ಇಲಾಖೆಗಳಲ್ಲಿ ಕೆಲಸ ಮಾಡುವ ನುರಿತವರು ಉಪಯೋಗವಾಗಬಹುದೆಂದು ತಿಳಿದಿದ್ದೇವೆ ಹಾಗೆ ಉಪಯೋಗವಾಗುವ ಶಾಸಕರಾಗಲೀ ಅಥವ ಕಾಂಗ್ರೆಸ್ ಮತ್ತು ಇತರರಲ್ಲಾಗಲೀ ಇದ್ದರೆ ತೆಗೆದುಕೊಳ್ಳಲು ಸಿದ್ಧರಿದ್ದೇವೆ. ಯಾಕೆಂದರೆ ಅವರು ಈ ಕೆಲಸವನ್ನು ತುಂಬ ಆಸ್ಥೆಯಿಂದ ಮತ್ತು ತತ್ಪರತೆಯಿಂದ ಮಾಡುತ್ತಾರೆ. ಅದನ್ನು ನಾವು ವಿರೋಧಿಸುವುದಿಲ್ಲ.

ಸಿಮೆಂಟ ಉದ್ಯೋಗ ಕುರಿತು ಶ್ರೀ ಮಲ್ಲಾರಾಧ್ಯರಿಗೆ ಗೊತ್ತಿದೆ. ಸರಕಾರವು ತುಮಕೂರು ಜಿಲ್ಲೆಯಲ್ಲಿ ಸಾರಂಗಪಾಣಿ ಕನ್ಸರ್ನದವರಿಗೆ ಶಿಫಾರಸು ಮಾಡಿದೆ.

ಸಾರಂಗಪಾಣಿಗಳಿಗೆ ಏಪ್ರಿಲ್‌ದಲ್ಲಿ ಲಾಯಸೆನ್ಸ ಸಿಗುತ್ತದೆ ಎಂಬುದು ನನ್ನ ಊಹೆ. ಅವರಿಗೆ ಲಾಯಸೆನ್ಸ ದೊರೆಯುತ್ತದೆ ಮತ್ತು ತುಮಕೂರು ಜಿಲ್ಲೆಯಲ್ಲಿ ಸಿಮೆಂಟ ಫ್ಯಾಕ್ಟರಿ ಪ್ರಾರಂಭವಾಗುತ್ತದೆ ಎಂದು ಭಾವಿಸುವೆ.

ಪೋರ್ಸಲೀನ ಫ್ಯಾಕ್ಟರಿ ಕುರಿತು ಹೇಳುವುದಾದರೆ, ಮಂಡಳಿಯಲ್ಲಿ ಕೆಲಸ ಮಾಡುವ ನನ್ನ ಸ್ನೇಹಿತರಿಗೆ ಗೊತ್ತಿದೆ. ಈ ತಿಂಗಳ ಕೊನೆಯ ಹೊತ್ತಿಗೆ ಪ್ರತಿ ತಿಂಗಳು 200 ಟನ್ ಉತ್ಪಾದನೆಯ ಕ್ಷಮತೆಯನ್ನು ಮುಟ್ಟಬೇಕು, ಆದರೆ ನಾವು 160 ಟನ್ ಕ್ಷಮತೆಗೆ ಬಂದು ಮುಟ್ಟಿದ್ದೇವೆ. ಇನ್ನು ಎರಡು ಮೂರು ತಿಂಗಳುಗಳಲ್ಲಿ ಆ ಟಾರ್ಗೆಟ್‌ನ್ನು ಮುಟ್ಟುತ್ತೇವೆ ಎಂದು ಭಾವಿಸುವೆ. ಪೋರ್ಸಲೀನ ಫ್ಯಾಕ್ಟರಿಯ ಕೆಲಸದಲ್ಲಿ ಯಾಕೆ ಪುನಾರಚನೆ ಮಾಡಬಾರದೆಂದು ಶ್ರೀ ಮಲ್ಲಾರಾಧ್ಯರು ಕೇಳಿದ್ದಾರೆ. ಅವರ ಮಾತು ನನಗೆ ಒಪ್ಪಿಗೆ ಇದೆ. ಪೋರ್ಸಲಿನ ಫ್ಯಾಕ್ಟರಿಯು ದಿನದಿಂದ ದಿನಕ್ಕೆ ವಿಸ್ತಾರವಾಗುತ್ತಿದೆ. ಆದ್ದರಿಂದ ಪುನರ್‌ರಚನೆಯ ಕೆಲಸವನ್ನು ನಮ್ಮಿಂದ ತೆಗೆದುಕೊಳ್ಳುವುದಾಗಿಲ್ಲ. ಸಭೆಯಲ್ಲಿ ಅದನ್ನೀಗ ನಿರ್ಧರಿಸಲಾಗಿದೆ. ಅವರು ಒಂದು ಉಪಸಮಿತಿಯನ್ನು ನೇಮಿಸಿದ್ದಾರೆ. ಅನಿತರಲ್ಲಿ ನಾವು ವರದಿಯನ್ನು ಅಪೇಕ್ಷಿಸಿದ್ದೇವೆ ಮತ್ತು ಕ್ರಮ ತೆಗೆದುಕೊಳ್ಳುತ್ತೇವೆ. ಮ್ಯಾನೇಜರ್ ಮತ್ತು ಟೆಕ್ನಿಶಿಯನ್‌ರ ನೇಮಕಾತಿಯ ಬಗ್ಗೆಯೂ ಒಂದು ಇತ್ಯರ್ಥಕ್ಕೆ ಬಂದಿದ್ದೇವೆ ಮತ್ತು ಶೀಘ್ರದಲ್ಲಿ ನೇಮಕಾತಿಯನ್ನು ಮಾಡುತ್ತೇವೆ.

ಇನ್ನೊಂದು ವಿಷಯ, ಕಚ್ಚಾ ಫಿಲ್ಮ ಉದ್ಯೋಗ ಬಗ್ಗೆ, ನಾವು ಒಂದು ಸಲ ಪ್ರಯತ್ನಿಸಿದೆವು. ನಮಗೆ ಯಶ ಸಿಗಲಿಲ್ಲ ಆದಕ್ಕಾಗಿ ಸರಕಾರವನ್ನು ಯಾರೂ ದೂಷಿಸಬಾರದು. ಎಲ್ಲರೂ ಪ್ರಯತ್ನಿಸಿದರು ಮೊದಲ ಸಲವೇ ದೊರೆಯುವ ದೈವ ಇರಲಿಲ್ಲ. ನಾನು ಮತ್ತು ನನ್ನ ಸಂಪುಟ ಸಹೊದ್ಯೋಗಿಗಳು ಕೇಂದ್ರ ಮಂತ್ರಿಗಳನ್ನು ವಿನಂತಿಸಿಕೊಂಡಿದ್ದೆವು. ಅವರು ಮೊದಲ ಯುನಿಟ್‌ನ್ನು ಕೊಡಲು ಸಾಧ್ಯವಾಗುವುದಿಲ್ಲ, ಆದರೆ ಎರಡನೆಯ ಯುನಿಟ್‌ನ್ನು ಕೊಡಬಹುದು ಎಂದಿದ್ದಾರೆ.

ಇನ್ನೊಂದು ವಿಷಯ, ಹುಬ್ಬಳ್ಳಿಯ ಕರ್ನಾಟಕ ಸ್ಪಿನ್ನಿಂಗ ಮಿಲ್ಲ ಕುರಿತಾಗಿ ಎತ್ತಿದರು. ಧಾರವಾಡದ ಸಹಕಾರಿ ನೂಲಿನ ಗಿರಣಿಯು ಹುಬ್ಬಳ್ಳಿಯಲ್ಲಿ ಸ್ಥಗಿತಗೊಂಡ ಮಿಲ್ಲನ್ನು ಖರೀದಿಸುವ ಕುರಿತು ಚರ್ಚೆ ಮಾಡಿದ್ದರು. ಕೇಂದ್ರ ಸರಕಾರವು ಯೋಜನೆಯನ್ನು ಒಪ್ಪಿತ್ತು ಮತ್ತು ಮೈಸೂರು ಸರಕಾರವು ಪ್ರತಿಶತ 50 ರ ಪಾಲನ್ನು ಭರಿಸಲು ಒಪ್ಪಿತ್ತು. ಒಟ್ಟು ಶೇರು 50 ಲಕ್ಷಗಳಷ್ಟಾಗಿದ್ದರೆ ನಾವು ಉಳಿದ ಸಹಕಾರಿ ನೂಲಿನ ಗಿರಣಿಗಳ ಶೇರುಗಳೊಂದಿಗೆ 25 ಲಕ್ಷ ರೂಪಾಯಿಗಳನ್ನು ತೊಡಗಿಸಬೇಕು. ಸರಕಾರ ಶೀಘ್ರವೇ ಅಂತಿಮ ನಿರ್ಣಯ ತೆಗೆದುಕೊಳ್ಳುವುದು ಮತ್ತು ಕೆಲಸ ಅತಿ ವೇಗದಲ್ಲಿ ಪ್ರಾರಂಭವಾಗಬಹುದು.

ಮತ್ತೆ ಎರಡು ಉಲ್ಲೇಖಗಳು ಬಂದವು. ಒಂದು ನಂಜನಗೂಡಿನ ಕಪಿಲಾ ಟೆಕ್ಸಟೈಲ್ಸ ಚನ್ನಪಟ್ಟಣ ಸ್ಪನ್ನ ಸಿಲ್ಕ ಮಿಲ್ಲಿನದು. ಎರಡೂ ವಿಷಯಗಳು ಹೈಕೋರ್ಟಿನ ಮುಂದಿವೆ

ಮತ್ತು ಮಾತನಾಡುವುದು ಸಬ್ ಜುಡೀಸ ಆಗುತ್ತದೆ, ಆದರೆ ಒಂದು ಮಾತನ್ನು ಹೇಳಬಲ್ಲೆ, ಅವುಗಳನ್ನು ಖರೀದಿಸಿ ಕೆಲಸ ಮುಂದುವರಿಸಲು ಯಾರೂ ಬರದಿದ್ದರೆ ಸರಕಾರಕ್ಕೆ ಖರೀದಿಸಲು ಆಸ್ಥೆ ಇದೆ. ಆದರೆ ಅದಕ್ಕೆ ಕಾನೂನಿನ ತೊಡಕು ಬರಬಾರದು.

ಶ್ರೀ ಎಂ. ಸಿ. ನರಸಿಂಹನ್ನರು ಆಯರನ್ ಮತ್ತು ಸ್ಟೀಲ್ ವರ್ಕ್ಸ್ ಹಾಗೂ ಕೆ.ಜಿ.ಎಫ್. ಮೈನ್ಸಗಳ ಬಗ್ಗೆ ಒಂದು ಕಾರ್ಪೊರೇಶನ್ನ ಮಾಡಬೇಕೆಂದು ಉಲ್ಲೇಖಿಸಿದರು. ಸೂಚಿತ ಕಾರ್ಪೊರೇಶನ್ನವು ಖಾಸಗೀ ಕುಂಪನಿಗಳಂತೆ, ಇಂಡಿಯನ್ ಕಂಪನಿ ಆಕ್ಟದ ಮೇರೆಗೆ, ಹಿಂದುಸ್ತಾನ ಏರ್‌ಕ್ರಾಪ್ಟ, ಇಂಡಿಯನ್ ಟೆಲಿಪೋನ ಇಂಡಸ್ಟ್ರೀಸ್ ತರಹ ಇರುತ್ತದೆ, ಹಾಗೆ ನಾವು ಮಾಡುತ್ತೇವೆ.

ಇನ್ನೊಂದು ವಿಷಯ, ಹೈಗ್ರೇಡ ಓರ ಮತ್ತು ಲೋ ಗ್ರೇಡ ಓರ ಬಗ್ಗೆ ಉಲ್ಲೇಖಿಸಲಾಯಿತು. ಸಧ್ಯ ರಾಜ್ಯದ ಹೊರಗಷ್ಟೇ ಅಲ್ಲ, ರಾಷ್ಟ್ರದ ಹೊರಗೂ ಹೈಗ್ರೇಡ ಓರ ಹೋಗುತ್ತಿದೆ. ಲೋ ಗ್ರೇಡ ಓರನ್ನು ಕೊಳ್ಳಲು ಪರರಾಷ್ಟ್ರದ ವ್ಯಾಪಾರಿಗಳು ಇಲ್ಲ. ಮೊನ್ನೆ ಎಸ್.ಟಿ.ಸಿ.ಯ ಶ್ರೀ ಚಾಂದೀ ಬಂದಿದ್ದರು. ನನ್ನೊಂದಿಗೆ ಸುದೀರ್ಘ ಚರ್ಚಿಸಿದರು. ಲೋಗ್ರೇಡ ಓರನ್ನು ರಫ್ತು ಮಾಡಲು ಅನುಮತಿ ನೀಡುವುದಾಗಿ ಅವರು ನನಗೆ ಹೇಳಿದರು. ಅದೊಂದು ಒಳ್ಳೆಯ ಸುದ್ದಿ. ಅರ್ಧ ಹೈಗ್ರೇಡ ಹಾಗೂ ಅರ್ಧ ಲೋಗ್ರೇಡ ಓರನ್ನು ರಫ್ತು ಮಾಡಬಹುದು. ಗಣಿಗಳಿಂದ ಬಂದರುಗಳವರೆಗೆ, ಹುಬ್ಬಳ್ಳಿ ಕಾರವಾರ ಮತ್ತಿತರೆಡೆ ರಸ್ತೆಗಳನ್ನು ನಿರ್ಮಿಸಲು ಅಧಿಕ ಹಣವನ್ನು ಕೊಡಲು ಸಹ ಅವರು ಒಪ್ಪಿದ್ದಾರೆ.

* **ಡಾ|| ಆರ್ ನಾಗನಗೌಡ** : ಇದು ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರು ಎರಡಕ್ಕೂ ಉಲ್ಲೇಖವಾಗುತ್ತದೆಯೆ?

* ಶ್ರೀ ಬಿ.ಡಿ. ಜತ್ತಿ : ಎರಡಕ್ಕೂ, ನನ್ನ ಸ್ನೇಹಿತರಾದ ಶ್ರೀ ಚೆನ್ನಬಸಪ್ಪ ಮತ್ತು ಶ್ರೀ ಮರಿಯಪ್ಪನವರು ಆಗಲೇ ಹೇಳಿದಂತೆ ಹಣ ಮಂಜೂರಾಗಿದೆ.

* ಶ್ರೀ ಟಿ. ಮರಿಯಪ್ಪ : ಮೊನ್ನೆಯಷ್ಟೆ ಬಜೆಟ್ ಪ್ರಾವಿಜನ್ ಮಾಡಲಾಗಿದೆ. ನನ್ನ ಭಾಷಣದಲ್ಲಿ ಅದನ್ನು ಹೇಳಿರುವೆ.

* ಶ್ರೀ ಬಿ.ಡಿ. ಜತ್ತಿ : ಅದರ ಹೊರತಾಗಿ, ಮಿನರಲ ಡೆವಲೊಪಮೆಂಟ ಬೋರ್ಡಗಾಗಿ ಧಾರವಾಡ ಮತ್ತು ಗುಲ್ಬರ್ಗಾಗಳಲ್ಲಿ ವಿಭಾಗೀಯ ಕಾರ್ಯಾಲಯಗಳನ್ನು ತೆರೆಯಲಾಗಿದೆ. ಉಳಿದ ಪ್ರದೇಶಗಳಿಂದ ದೂರುಗಳು ಬಂದಿವೆ. ಅವುಗಳನ್ನು ಪರಿಶೀಲಿಸಿ ಖನಿಜ ಸಂಪತ್ತು ಇದ್ದಲ್ಲೆಲ್ಲ ಹುಡುಕಿ ಅಲ್ಲಿ ಫ್ಯಾಕ್ಟರಿಗಳನ್ನು ತೆರೆಯಲಾಗುವುದು.

ಸಭೆಯ ಮತ್ತಷ್ಟು ಸಮಯವನ್ನು ತೆಗೆದುಕೊಳ್ಳದೆ ಇನ್ನು ಒಂದೆರಡು ವಿಷಯಗಳನ್ನಷ್ಟೇ ನಾನು ಉಲ್ಲೇಖಿಸುವೆ. ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ ಅವರು ಒಂದು ವಿಷಯವನ್ನು ಎತ್ತಿ, ರೇಷ್ಮೆ ಇಲಾಖೆಯವರು ಸೆಂಟ್ರಲ ಸಿಲ್ಕ ಬೋರ್ಡು ಮಂಜೂರು

ಮಾಡಿದ ಹಣವನ್ನು ಪೂರ್ತಿಯಾಗಿ ಬಳಸುತ್ತಿಲ್ಲ ಎಂದರು. ನನ್ನ ಹತ್ತಿರ ಇದ್ದ ಅಂಕಿ ಸಂಖ್ಯೆಗಳನ್ನು ಹೇಳುವೆ.

| | | |
|---|---|---|
| 1955 - 56 ರಲ್ಲಿ | ಗ್ರ್ಯಾಂಟ ಬಂದದ್ದು | ರೂ. 8,71,521 |
| | ಖರ್ಚಾದ ಹಣ | ರೂ. 8,53,081 |

ಉಳಿದ ಅಂಕಿ ಸಂಖ್ಯೆಗಳು ಹೀಗಿವೆ.

| | | |
|---|---|---|
| 1956 - 57 ರಲ್ಲಿ | ಗ್ರ್ಯಾಂಟ ಬಂದದ್ದು | ರೂ. 10,62,250 |
| | ಖರ್ಚಾದ ಹಣ | ರೂ. 10,62,250 ಪೂರ್ತಿ |
| 1957 - 58 ರಲ್ಲಿ | ಗ್ರ್ಯಾಂಟ ಬಂದದ್ದು | ರೂ. 7,34,994 |
| | ಖರ್ಚಾದ ಹಣ | ರೂ. 6,57,429 |

ಬಾಕಿ ಉಳಿದ ಹಣವನ್ನು ಬಳಕೆ ಮಾಡದ ಕಾರಣವೆಂದರೆ ಅದು ಸಿಬ್ಬಂದಿಗಾಗಿ, ಕೊಕೂನ ಫಾರ್ಮ್ಸ ಮತ್ತು ಕಟ್ಟಡಕ್ಕಾಗಿ ಇತ್ತು. ಕಟ್ಟಡ ಕಟ್ಟಬೇಕೆಂದರೆ ಸ್ಥಳ ಬೇಕು. ಸ್ಥಳ ತೆಗೆದುಕೊಳ್ಳಲು ಸಮಯ ಬೇಕು. ಈಗ ಸ್ಥಳವನ್ನು ಪಡೆದಿದ್ದೇವೆ. ಈಗ ಖರ್ಚು ಮಾಡಲು ಸಾಧ್ಯವಾಗುತ್ತದೆ. ನಾವು ಬೇಕು ಎಂದರೆ ಸೆಂಟ್ರಲ ಸಿಲ್ಕ ಬೋರ್ಡು ಅಧಿಕ ಹಣವನ್ನು ಕೊಡಲು ಒಪ್ಪುತ್ತದೆ.

ನಾನು ಅಧಿಕ ಸಮಯವನ್ನು ತೆಗೆದುಕೊಳ್ಳಲು ಇಚ್ಛಿಸುವುದಿಲ್ಲ. ನನ್ನ ಸ್ನೇಹಿತರು ಎತ್ತಿದ ವಿಷಯಗಳ ಕುರಿತು ಅತಿ ಸಂಕ್ಷಿಪ್ತವಾಗಿ ಹೇಳಲು ಪ್ರಯತ್ನಿಸಿರುವೆ. ಅವರ ಸಹಕಾರಕ್ಕೆ ಕೃತಜ್ಞತೆಗಳು.

ಮೈಸೂರು ಅಪ್ರೊಪ್ರಿಯೇಶನ್ (ನಂ.2) ಮಸೂದೆ 1959

31, ಮಾರ್ಚ್ 1959

* ಶ್ರೀ ಬಿ.ಡಿ. ಜತ್ತಿ :

ಮಾನ್ಯರೆ ಹಲವಾರು ಸದಸ್ಯರು ಚರ್ಚೆಯಲ್ಲಿ ಭಾಗವಹಿಸಿದ್ದಾರೆ ಮತ್ತು ಔದ್ಯೋಗಿಕ ಬೇಡಿಕೆಯ ಕುರಿತು ಕೆಲವರು ಅತ್ಯಂತ ಗುಣಾತ್ಮಕ ಸಲಹೆಗಳನ್ನು ನೀಡಿದ್ದಾರೆ. ಈ ಚರ್ಚೆ ನಿನ್ನೆಯೇ ನಡೆಯಬೇಕಾಗಿತ್ತು, ಆದರೆ ಕೆಲವು ತೊಂದರೆಗಳಿಂದಾಗಿ ಅದು ಈ ಬದಿಯದಾಗಿರಬಹುದು ಅಥವಾ ಆ ಬದಿಯದಾಗಿರಬಹುದು ಚರ್ಚೆ ನಡೆಯಲಿಲ್ಲ. ಇವತ್ತಾದರು ಕೆಲವು ಸದಸ್ಯರು ಆಸ್ಥೆ ವಹಿಸಿದ್ದಾರೆ ಹಾಗೂ ಅವರು ಒಳ್ಳೆಯ ಸಲಹೆಗಳನ್ನು ಕೂಡ ಕೊಟ್ಟಿದ್ದಾರೆ. ಉದ್ಯೋಗಗಳ ಕುರಿತು ಮೈಸೂರು ಸರಕಾರದ ಧೋರಣೆ ಏನಿರಬೇಕು. ಎಂಬ ಬಗ್ಗೆ ಹಲವಾರು ಸದಸ್ಯರು ಹೇಳಿದ್ದಾರೆ. ವಿವಿಧ ಉದ್ಯೋಗಗಳನ್ನು ಪ್ರಾರಂಭಿಸಿದ ಬಗ್ಗೆ ಈ ರಾಜ್ಯ ಹಲವಾರು ವರುಷಗಳಿಂದ ಗುರುತಿಲ್ಪಟ್ಟಿದೆ. ಈಗಲೂ ಕೂಡ ರಾಜ್ಯ ಸಾಧ್ಯವಾದಷ್ಟು ಅಧಿಕ ಉದ್ಯೋಗಗಳನ್ನು ಪ್ರಾರಂಭಿಸಲು ಅತಿ ಆತುರವಾಗಿದೆ, ಆದರೆ ಮುಖ್ಯ ತೊಂದರೆಗಳೆಂದರೆ, (1) ವಿದೇಶ ವಿನಿಮಯ ಮತ್ತು (2) ವಿದ್ಯುತ್ ಕೊರತೆ ವಿವಿಧ ಉದ್ಯೋಗಗಳನ್ನು ಪ್ರಾರಂಭಿಸಲು ಇವುಗಳು ಪ್ರಮುಖ ತೊಂದರೆಗಳಾಗಿ ದಾರಿಯಲ್ಲಿ ಅಡ್ಡ ಬರುತ್ತಿವೆ. ಆದ್ದರಿಂದ ಈ ಹಿನ್ನೆಲೆಯೊಂದಿಗೆ ನಾನು ಕೆಲವು ಸದಸ್ಯರು ಎತ್ತಿದ ಕೆಲವು ವಿಷಯಗಳ ಬಗ್ಗೆ 15 ನಿಮಿಷಗಳಲ್ಲಿ ಉತ್ತರ ಕೊಡಲು ಪ್ರಯತ್ನಿಸುವೆ. ಇಂಡಸ್ಟ್ರಿಯಲ್ ಎಸ್ಟೇಟುಗಳ ಪ್ರೊಗ್ರೆಸ್ ಬಗ್ಗೆ ಮೊದಲು ಟೀಕೆ ಮಾಡಲಾಯಿತು. ಮೈಸೂರಿನಲ್ಲಿ ಶೆಡ್ಡುಗಳನ್ನು ಕಟ್ಟುವುದು ಪೂರ್ತಿಗೊಂಡಿದೆ. ಇಸ್ಟೇಟನ್ನು ಇಷ್ಟರಲ್ಲಿ ಓಪನ್ ಮಾಡಲಾಗುತ್ತದೆ. ಬೆಂಗಳೂರು ಮತ್ತು ಹುಬ್ಬಳ್ಳಿಗಳಲ್ಲಿ ಶೆಡ್ಡುಗಳ ಕಟ್ಟೋಣವು ತ್ವರಿತಗತಿಯಲ್ಲಿ ನಡೆದಿದೆ. ಹರಿಹರ ಮತ್ತು ಬೆಳಗಾವಿಗಳಲ್ಲಿ ಫೆಬ್ರುವರಿ 1959 ರಲ್ಲಿ ಕಟ್ಟೋಣವು ಪ್ರಾರಂಭವಾಗಿದೆ. ಮಂಗಳೂರು - ಗುಲ್ಬರ್ಗಾಗಳಲ್ಲಿ ಟೆಂಡರುಗಳನ್ನು ಕರೆಯಲಾಗಿದೆ. ಟೆಂಡರ ಹಿಡಿಯಲು ಯಾರೂ ಬರದ್ದರಿಂದ ಮತ್ತೆ ಸಮಯವನ್ನು ವಿಸ್ತರಿಸಲಾಗಿದೆ, ಯಾರಾದರೂ ಟೆಂಡರುಗಳನ್ನು ಹಿಡಿಯಬಹುದು ಮತ್ತು ಕೆಲಸ ಪ್ರಾರಂಭವಾಗಬಹುದೆಂದು ಆಶಿಸುತ್ತೇನೆ.

ಸಣ್ಣ ಕೈಗಾರಿಕೆಗಳ ಪ್ರಗತಿಯ ಕುರಿತು ಸದಸ್ಯರಲ್ಲೊಬ್ಬರು ವಿಷಯವನ್ನು ಎತ್ತಿದ್ದಾರೆ. ಔದ್ಯೋಗಿಕ ವಸಾಹತಿಗಾಗಿ ಹಣವನ್ನು ತೆಗೆದಿರಿಸಿದ್ದು ರೂ. 20 ಲಕ್ಷ ಅದರಲ್ಲಿ ರೂ. 14.75 ಲಕ್ಷ ದಷ್ಟು ಸಣ್ಣ ಪ್ರಮಾಣದ ಉದ್ಯೋಗಗಳ ಮೇಲೆ ಖರ್ಚು ಮಾಡಿದೆ. ಇಂಡಸ್ಟ್ರಿಯಲ್ ಕೋ - ಅಪರೇಟಿವ ಸೊಸೈಟಿಗಳ ಲೂಮ್ಸಗಳಿಗಾಗಿ ರೂ. 30.69 ಲಕ್ಷ ತೆಗೆದಿರಿಸಿದ್ದು ಅದರಲ್ಲಿ 20.34 ಲಕ್ಷ ಖರ್ಚಾಗಿದೆ.

ಗ್ರಾಮೀಣ ಉದ್ಯೋಗದ ಕುರಿತು ಒಂದಿಷ್ಟು ಟೀಕೆಗಳು ಬಂದುವು. ಆ ಟೀಕೆಗಳಲ್ಲಿಯ ಕೆಲವಂಶಗಳನ್ನು ತೆಗೆದುಕೊಂಡು ಸ್ಥಿತಿಯನ್ನು ಸರಿಪಡಿಸಬಹುದು. ಇತ್ತೀಚಿಗಷ್ಟೆ

ನಾವು ಕಮೀಟಿಯೊಂದನ್ನು ನೇಮಿಸಿದ್ದೇವೆ ಮತ್ತು ಸರಕಾರವು ಅಂತಿಮ ನಿರ್ಣಯವನ್ನು ತೆಗೆದುಕೊಳ್ಳುತ್ತದೆ. ಕೆಲವು ಅಂಕಿ ಸಂಖ್ಯೆಗಳನ್ನು ಕೊಡುವೆ.

| | ಹಣ (ಲಕ್ಷಗಳಲ್ಲಿ) | |
|---|---|---|
| ಹ್ಯಾಂಡಲೂಮ ಅಭಿವೃದ್ಧಿ ಯೋಜನೆ | ಮಂಜೂರಾದದ್ದು | ಖರ್ಚಾದದ್ದು. |
| ಸಣ್ಣ ಪ್ರಮಾಣದ ಉದ್ಯೋಗ | 36.09 | 34.37 |
| ಸಣ್ಣ ಪ್ರಮಾಣದ ಉದ್ಯೋಗ | 50.69 | 38.09 |
| ಕಾಟೇಜ್ ಇಂದಸ್ಟ್ರೀ | 6 | 5.26 |
| ಕಾಯ್‌ರ್ ಇಂಡಸ್ಟ್ರೀ | 1 | 1 |
| ಹ್ಯಾಂಡಿ ಕ್ರಾಪ್ಟ | 7 | 4.50 |
| ಗ್ರಾಮೀಣ ಉದ್ಯೋಗ ಯೋಜನೆ | 51. | 9.27 |

ಉತ್ತರ ಕರ್ನಾಟಕ ಜಿಲ್ಲೆಯನ್ನು ನಿರ್ಲಕ್ಷಿಸಿದೆ ಎಂದೂ ಮತ್ತು ಅಲ್ಲಿ ಯಾವ ಉದ್ಯೋಗಗಳನ್ನು ಸ್ಥಾಪಿಸಿಲ್ಲ ಎಂದು ಹೇಳಲಾಯಿತು. ಅದು ಇತ್ತೀಚಿನವರೆಗೆ ಮುಂಬಯಿ ರಾಜ್ಯದಲ್ಲಿತ್ತು ಸ್ಥಾಪಿಸಲಿಲ್ಲ ಮತ್ತು ಅದೀಗ ಹೊಸ ಮೈಸೂರು ರಾಜ್ಯದಲ್ಲಿ ಸೇರಿದೆ. ಅಲ್ಲಿ ಕೆಲವು ಉದ್ಯೋಗಗಳನ್ನು ಪ್ರಾರಂಭಿಸಲಾಗುತ್ತದೆ. ಹಂಚಿನ ಕಾರ್ಖಾನೆಯೊಂದು ತಲೆ ಎತ್ತಲಿದೆ ಎಂಬ ಸಿಹಿ ಸುದ್ದಿಯನ್ನು ಹೇಳಬಯಸುವೆ. ಅದಕ್ಕಾಗಿ ಮಂಜೂರಿಯೂ ದೊರೆತಿದೆ. ಅದಕ್ಕೆ ಕೇಂದ್ರ ಸರಕಾರದಿಂದ ರೂ. 1,,12, 500-00 ದೊರೆಯಲ್ಲಿದ್ದು, ರಾಜ್ಯ ಸರಕಾರವು ರೂ. 37, 500-00 ಸಾಲ ನೀಡಲಿದೆ. ಒಟ್ಟು 1,50 ಲಕ್ಷ ರೂ. ದೊರೆಯಲಿದೆ. ಸಾಲ ಮರುಪಾವತಿಗೆ 10 ವರುಷಗಳಿದ್ದು ಬಡ್ಡೀ ದರ ಶೇಕಡಾ 2,5 ಇದೆ.

ಮಾನ್ಯ ಸದಸ್ಯರಾದ ಶ್ರೀ ಮಲ್ಲಾರಾಧ್ಯರು ಸಾಬೂನು ವಿತರಣೆ ಎಜೆಂಟರ ನೇಮಕಾತಿಯ ಬಗ್ಗೆ ಒಂದಿಷ್ಟು ಹೇಳಿದರು. ನನಗೆ ಸರಿಯಾಗಿ ನೆನಪಿದ್ದಂತೆ ಸರಕಾರ ಕೆಲವು ವ್ಯಕ್ತಿಗಳ ಬಗ್ಗೆ ಸ್ಥಳೀಯ ಹಿತಾಸಕ್ತಿ ಮೈಸೂರಿನವರ ಬಗ್ಗೆ ಒಲವು ತೋರಿಸುತ್ತದೆ ಎಂದು ಹೇಳಿದಂತೆ ನೆನಪು.

* ಶ್ರೀ ಜೆ.ಬಿ. ಮಲ್ಲಾರಾಧ್ಯ : ನಾನು ಹೇಳಿದ್ದು ಕಾಂಗ್ರೆಸ್ ಪಕ್ಷದ ಕಾನ್ಡಿಡಸ್ಟನ್ನು ಪಡೆದವರೆ ಏಜೆನ್ಸಿಯನ್ನು ಪಡೆಯುತ್ತಿದ್ದಾರೆ ಎಂದು. ನನ್ನಲ್ಲಿ ಇನ್ನಷ್ಟು ಮಾಹಿತಿ ಇದೆ. ಈ ಸಭೆಯಲ್ಲಿ ಅವರ ಹೆಸರನ್ನು ಹೇಳಲಿಚ್ಛಿಸುವುದಿಲ್ಲ. ಅವರಲ್ಲಿ ನೇರ ಹಿತಾಸಕ್ತಿ ಇದೆ. ಅದು ನನ್ನ ಟೀಕೆಯಲ್ಲ ಆದರ ಬದಲಾಗಿ ನೀವು ರಾಜ್ಯದ ಹೊರಗಿನ ಕೆಲವರನ್ನು ಬಿಡುತ್ತಿದ್ದೀರಿ ಎಂದು ಟೀಕಿಸಿರುವೆ.

* ಶ್ರೀ ಬಿ.ಡಿ. ಜತ್ತಿ : ಅದು ಕೂಡ ಸರಿಯಲ್ಲ ಯಾಕೆಂದರೆ ಅದರಲ್ಲಿ ಮುಂಬಯಿ ಮದ್ರಾಸ್ ಮಲಬಾರ್‌ಗಳ ಜನರೂ ಇದ್ದಾರೆ. ನನಗೆ ಗೊತ್ತಿದ್ದಂತೆ ಕಳೆದ 11 ತಿಂಗಳುಗಳಿಂದ ಚೆನ್ನಾಗಿ ವ್ಯಾಪಾರ ಮಾಡುತ್ತಿರುವವರನ್ನು ಮುಂದುವರಿಸಿದ್ದೇವೆ. ಅವರ ಬಗ್ಗೆ ವಿರೋಧವೇನೂ ಇಲ್ಲ ಅವರ ಹೆಸರುಗಳನ್ನು ಕೊಡುವ.

* ಸೂರ್ಯ ಎಜೆನ್ಸೀಸ್ ಆಂಧ್ರ ಪ್ರದೇಶ : ದೇಶಮುದ್ರೆ ಅಂಡ ಸನ್ಸ್ ಮೈಸೂರು ಉತ್ತರ, ಕೆ. ಆಯ್. ಮಲ್ಲಿಕಾರ್ಜುನ ಬ್ರಾಂಚಿ ದಕ್ಷಿಣ, * ಶ್ರೀ ಮೂರ್ತಿ ಎಜೆನ್ಸೀಜ್ : ಬೆಂಗಳೂರು, ಬಿಹಾರ, ಓರಿಸ್ಸಾ, ಮತ್ತು ಅಸ್ಸಾಮ. * ಶ್ರೀ ವೀರಾಂಜನೇಯ ಗೌಡ : ಮೈಸೂರು ಜಿಲ್ಲೆ ಹೊರತಾಗಿ ಮೈಸೂರು ದಕ್ಷಿಣ. * ಶ್ರೀ ಕೆ.ಎಸ್.ಗೌಡರ : ಮತ್ತು ಕಂಪನಿ ಮದ್ರಾಸ ರಾಜ್ಯ, ಕೇರಳ, ದಕ್ಷಿಣ ಕನ್ನಡ ಮತ್ತು ಕೊಳ್ಳೆಗಾಲ.

ಇದಿಷ್ಟು ಅರ್ಜಿಗಳು ಬಂದಿವೆ. ನಾವಿನ್ನೂ ನಿರ್ಣಯ ತೆಗೆದುಕೊಂಡಿಲ್ಲ. ಆದರೆ ಯಾರು ಒಳ್ಳೆಯವರೋ ಮತ್ತು ಚೆನ್ನಾಗಿ ವ್ಯಾಪಾರ ಮಾಡಿ ಸಾಕಷ್ಟು ಹಣ ಕೊಡುತ್ತಾರೋ ಆ ವ್ಯಕ್ತಿಗಳನ್ನು ನೇಮಿಸುತ್ತೇವೆ. ಅಲ್ಲಿ ರಾಜಕೀಯ ಪಕ್ಷಗಳ ಪ್ರಭಾವ ಇಲ್ಲ. ನಾನಿದನ್ನು ಸನ್ಮಾನ್ಯ ಸದಸ್ಯರ ಅವಗಾಹನೆಗಾಗಿ ಹೇಳುತ್ತಿರುವೆ. ಯಾಕೆಂದರೆ ಅದರಲ್ಲಿ ಗೊಂದಲವಿರಬಾರದು.

ಮುಂದಿನ ಉಲ್ಲೇಖ ಸ್ಟೇಟ ಫಾಯನಾನ್ಸ್ ಕಾರ್ಪೋರೇಶನ್ ಸೆಟ್ಟಿಂಗ್‌ದ ಬಗ್ಗೆ ಬಂತು ಅದನ್ನು ವಿಶೇಷ ರಾಜ್ಯ ಪರಿಪತ್ರದಲ್ಲಿ ಹೊರಡಿಸಲಾಗುವುದು.

* ಶ್ರೀ ಜೆ.ಬಿ. ಮಲ್ಲಾರಾಧ್ಯ : ಕೆಲವು ಕೇಸುಗಳಲ್ಲಿ ಕೆಲವರಿಗೆ ಐದು ವರುಷ ಮುಂದುವರಿಸಿದ್ದೀರಿ. ಇನ್ನು ಕೆಲವು ಕೇಸುಗಳಲ್ಲಿ ನೀವು ಟೆಂಡರುಗಳನ್ನು ಕರೆದಿದ್ದೀರಿ. ಯಾಕೆ ಕೆಲವರಿಗೆ ಟೆಂಡರ ಕರೆಯಲಾಗಿದೆ ಶಿಫಾರಸ್ಸು ಮಾಡಿದ್ದೀರಿ?

* ಶ್ರೀ ಬಿ.ಡಿ. ಜತ್ತಿ : ಈ ಪ್ರಶ್ನೆಯನ್ನು ಬೋರ್ಡ ಸದಸ್ಯರು ಚರ್ಚಿಸಿದ್ದಾರೆ. ಯಾರು ಒಳ್ಳೆಯ ವ್ಯವಹಾರ ಮಾಡಿದ್ದಾರೋ ಅವರನ್ನು ಮುಂದುವರಿಸಬೇಕೆಂದು ನಿರ್ಣಯಿಸಿದ್ದಾರೆ. ಅದು ವ್ಯವಹಾರ ನಿಯಮ, ಇಲ್ಲವಾದಲ್ಲಿ ವ್ಯವಹಾರ ನಡೆಯುವುದಿಲ್ಲ.

ಲೋಕ ಸಭೆಯ ಅಂದಾಜು ಸಮಿತಿಯ ವರದಿಯ ಬಗ್ಗೆ ಉಲ್ಲೇಖಿಸಿದರು. ಅದು ಮಾರ್ಚ 5 ರ 'ದಿ ಹಿಂದು' ಪತ್ರಿಕೆಯಲ್ಲಿ ಬಂದಿದೆ. ಅದನ್ನೆಲ್ಲ ಓದುವ ಇಚ್ಛೆ ನನಗಿಲ್ಲ. ಅದರಲ್ಲಿ ಎರಡು - ಮೂರು ವಾಕ್ಯಗಳನ್ನು ಓದುವೆ.

"ಮೈಸೂರು ಆಯರ್ನ ಮತ್ತು ಸ್ಟೀಲ ವರ್ಕ್ಸ ಬಗ್ಗೆ ಕಾರ್ಪೋರೇಶನ್ ಅಥವ ಕಂಪನಿಯನ್ನು ಫಾರ್ಮ ಮಾಡುವ ಕುರಿತು, ಸಮಿತಿ ಈ ರೀತಿ ಸಲಹೆ ನೀಡಿದೆ. ಯುನಿಟ್ಟಿನ ವಿಸ್ತರಣೆಗೆ ಅನುಕೂಲವಾಗುವಂತೆ ಈ ಪ್ರಶ್ನೆಯನ್ನು ಕೇಂದ್ರ ಮತ್ತು ರಾಜ್ಯ ಸರಕಾರಗಳು

ಪರಸ್ಪರ ಸಮಾಲೋಚಿಸಿ ನಿರ್ಧರಿಸಬೇಕು. ಸ್ಟೇನಲೆಸ್ ಮತ್ತು ಇತರ ಸ್ಪೆಶಲ್ ಸ್ಟೀಲನ್ನು ನಿರ್ಮಾಣ ಮಾಡುವ ಕೆಲಸವನ್ನು ಮೈಸೂರು ವರ್ಕ್ಸ್‌ಗೆಯೇ ಕೊಡಬೇಕು. ಬದಲಾಗಿ ಅದಕ್ಕಾಗಿ ಪ್ರತ್ಯೇಕ ಪ್ಲ್ಯಾಂಟನ್ನು ತೆರೆಯಬಾರದೆಂದು ಸಮಿತಿ ಅಭಿಪ್ರಾಯ ಪಟ್ಟಿದೆ.”

ನಾವು ಅದಕ್ಕಾಗಿ ಒತ್ತಾಯಿಸುತ್ತಿದ್ದೇವೆ. ಮತ್ತು ತುಸುವೆ ದಿನಗಳಲ್ಲಿ ನಮಗೆ ಒಳ್ಳೆಯ ಫಲಿತಾಂಶ ಬರಬಹುದು.

* ಶ್ರೀ ಜೆ.ಬಿ. ಮಲ್ಲಾರಾಧ್ಯ : ನಿಮಗೆ ಒಳ್ಳೆಯದಾಗಲಿ ಎಂದು ನಾನು ಬಯಸುವೆ.

* ಶ್ರೀ ಬಿ.ಡಿ. ಜತ್ತಿ : ಇದು ನಿಜವಾದ ಸಂಗತಿ ಮತ್ತು ಇದನ್ನು ನಾವು ಒಪ್ಪಬೇಕು. ಕಳೆದ ಹತ್ತು ವರುಷಗಳಿಂದ ಈ ಸರಕಾರವು ಸ್ಟೇನಲೆಸ್ ಸ್ಟೀಲ ಪ್ಲ್ಯಾಂಟನ್ನು ಪಡೆಯಲು ಪ್ರಯತ್ನಿಸುತ್ತಿದೆ, ಆದರೆ ಈವರೆಗೆ ನಮಗೆ ಯಶ ದೊರೆತಿಲ್ಲ. ಈ ಸಲ ನಮ್ಮ ಪ್ರಯತ್ನಗಳಿಗೆ ಯಶ ದೊರೆಯಬಹುದೆಂದು ನಾವು ಭಾವಿಸಿದ್ದೇವೆ.

ಶ್ರೀ ಮಲ್ಲಾರಾಧ್ಯರು ಸೂಚಿಸಿದಂತೆ ಭದ್ರಾವತಿಯಲ್ಲಿ ಇನ್ನಿತರ ಉದ್ಯೋಗಗಳನ್ನು ಪ್ರಾರಂಭಿಸುವತ್ತ ನಾವು ಪ್ರಯತ್ನಗಳನ್ನು ಮಾಡುತ್ತಿದ್ದೇವೆ ಮತ್ತು ನಮ್ಮ ಬೇಡಿಕೆಗೆ ಒತ್ತಾಯವನ್ನು ತರುತ್ತಿದ್ದೇವೆ. ದೇಶದಲ್ಲಿಯೇ ‘ಫೆರೋ ಸಿಲಿಕಾನನ್ನು’ ಉತ್ಪಾದಿಸುವವರು ನಾವು ಒಬ್ಬರೇ. ಅದನ್ನು ಈಗಿದ್ದ 5000 ಟನ್ನುಗಳಿಂದ ಪ್ರತಿ ವರುಷ 20,000 ಟನ್ನ ಉತ್ಪಾದನೆಗೆ ಕ್ರಮ ತೆಗೆದುಕೊಳ್ಳುತ್ತಿದ್ದೇವೆ.

ಸ್ಪೊಂಜ ಆಯರ್ನ ಕುರಿತಾಗಿ ಹೇಳಬೇಕೆಂದರೆ, ಕಾರ್ಯವಿಧಾನ ಇನ್ನೂ ನಮಗೆ ಹೊಸದು. ಕೇಂದ್ರ ಸರಕಾರವು ಅಭ್ಯಾಸ ಮಾಡಿ ವರದಿ ನೀಡಲು ಒಂದು ಪರಿಣಿತರ ಗುಂಪನ್ನು ಕಳಿಸಿದೆ. ನಮಗೆ ಸುದೈವ ಎಂಬಂತೆ ಭದ್ರಾವತಿಯಲ್ಲಿ ಕೆಲಸ ಮಾಡುತ್ತಿದ್ದ ಶ್ರೀ ಶರ್ಮಾ ಅವರನ್ನು ಕಳಿಸಿದ್ದರು. ನಾವು ಅವರು ಬರುವ ಹಾಗು ವರದಿಯ ದಾರಿಯನ್ನು ಕಾಯುತ್ತಿದ್ದೇವೆ. ವರದಿ ಬರುತ್ತಿದ್ದಂತೆಯೇ ನಾವು ಬಳ್ಳಾರಿ ಹತ್ತಿರದ ಸಂಡೂರಿನಲ್ಲಿ ಪ್ರಯೋಗ ಮಾಡಲು ಪ್ರಯತ್ನಿಸುತ್ತಿದ್ದೇವೆ.

ಪಿಗ್ ಆಯರ್ನ ಬಗ್ಗೆ ನಮಗೆ ಸಾಕಷ್ಟು ಅನುಭವ ಇದೆ. ಸಂಡೂರಿನ ಹತ್ತಿರ ಒಂದು ಪಿಗ್ ಆಯರ್ನ ಪ್ಲಾಂಟನ್ನು ಹಾಕಿ ಅಲ್ಲಿ ಮಶೀನುಗಳಿಂದ ಅದಿರನ್ನು ಅಗೆಯುವ ಬಗ್ಗೆ ಸಲಹೆಯೊಂದಿದೆ. ರುಮಾನಿಯನ್ ಫರ್ಮಿನಿಂದ ಒಂದು ಸಲಹೆಯು ಬಂದಿದೆ. ರುಮಾನಿಯನ್ ಫರ್ಮ ಕಳಿಸಿದ ಸಲಹೆಗಳನ್ನು ಅದರಲ್ಲಿಯ ಅಂಶಗಳನ್ನು ಪರಿಶೀಲಿಸುತ್ತಿದ್ದೇವೆ. ಅವುಗಳು ನಮಗೆ ಒಳ್ಳೆಯದೆನಿಸಿದರೆ ಈ ಪ್ಲ್ಯಾಂಟನ್ನು ಸ್ಥಾಪಿಸಲು ನಾವು ಪ್ರಯತ್ನಿಸುತ್ತೇವೆ.

* ಶ್ರೀ ಜೆ. ಬಿ. ಮಲ್ಲಾರಾಧ್ಯ : ಬಂದರದವರೆಗೆ ರೈಲು ಮಾರ್ಗವನ್ನು ಹಾಕಲು ಅವರು ಖರ್ಚು ಭರಿಸಲು ಒಪ್ಪಲಿಲ್ಲವೆ?

* ಶ್ರೀ ಬಿ.ಡಿ. ಜತ್ತಿ : ಈ ವಿಷಯದ ಕುರಿತಾಗಿಯೂ ಸಹ ನಾವು ಭಾರತ ಸರಕಾರದೊಂದಿಗೆ ಸಮಾಲೋಚಿಸುತ್ತಿದ್ದೇವೆ, ಮತ್ತು ಅದನ್ನು ಪರಿಶೀಲಿಸುತ್ತಿದ್ದೇವೆ.

ಸ್ವಸ್ತ ಸಿಲ್ಕ ಮಿಲ್ಲುಗಳ ಕುರಿತು ಹಲವಾರು ಸಂದರ್ಭಗಳಲ್ಲಿ ಉಲ್ಲೇಖ ಮಾಡಲಾಗಿದೆ. ಈ ಪ್ರಶ್ನೆ ಹೈ ಕೋರ್ಟಿನ ಮುಂದಿದೆ ಮತ್ತು ಒಬ್ಬ ಪ್ರಾವಿಜಿನಲ್ ಲಿಕ್ವಿಡೇಟರನ್ನು ನೇಮಿಸಲಾಗಿದೆ. ಆದ್ದರಿಂದ ಈ ವಿಷಯದಲ್ಲಿ ವಿವರವಾಗಿ ಚರ್ಚಿಸುವುದು ಉಚಿತವಲ್ಲ. ಒಂದೇ ಒಂದು ಸಂಗತಿಯನ್ನು ಈ ಸಭೆಗೆ ನಾನು ಹೇಳಬಯಸುತ್ತೇನೆ. ಗುತ್ತಿಗೆಯ ಆಧಾರದ ಮೇಲೆ ತೆಗೆದುಕೊಳ್ಳುವ ಜನರನ್ನು ಲಿಕ್ವಿಡೇಟರ ಕೇಳಿದ್ದಾನೆ. ನನಗೆ ಗೊತ್ತಿದ್ದ ಇತ್ತೀಚಿನ ವರದಿಯಂತೆ ಒಬ್ಬ ವೃದ್ಧ ವ್ಯಕ್ತಿ ಅದನ್ನು ಗುತ್ತಿಗೆಯ ಮೇಲೆ ಪಡೆಯಲು ಒಪ್ಪಿದ್ದಾನೆ ಮತ್ತು ಒಂದು ಪ್ರಸ್ತಾವನೆಯನ್ನು ಸಲ್ಲಿಸಿದ್ದಾನೆ ಮತ್ತು ಆ ಪ್ರಸ್ತಾಪವು ಈ ಮೊದಲು ಜನರಲ್ ಬಾಡಿ ಮತ್ತು ಬೋರ್ಡ ಆಫ್ ಡಾಯರೆಕ್ಟರರಿಗೆ ಸಲ್ಲಿಸಿದ ಮತ್ತು ಮೈಸೂರು ಸರಕಾರ ಅಪ್ರೊವ್ ಮಾಡಿದ ಪ್ರಸ್ತಾಪಕ್ಕಿಂತ ಚೆನ್ನಾಗಿಲ್ಲ.

* ಶ್ರೀ ಜೀ.ಬಿ. ಮಲ್ಲಾರಾಧ್ಯ : ಯಾಕೆ ಸರಕಾರವೇ ಅದನ್ನು ತೆಗೆದುಕೊಳ್ಳಬಾರದೆ?

* ಶ್ರೀ ಬಿ.ಡಿ. ಜತ್ತಿ : ಈ ಮಿಲ್ಲನ್ನು ಪ್ರಾರಂಭಿಸಲು ಸರಕಾರ ಉತ್ಸುಕವಾಗಿದೆ ಎಂದು ನಾನು ಸ್ಪಷ್ಟವಾಗಿ ಹೇಳಬಯಸುವೆ. ಹೈಕೋರ್ಟಿನ ಅಂತಿಮ ನಿರ್ಣಯಕ್ಕಾಗಿ ನಾವು ಕಾಯುತ್ತಿದ್ದೇವೆ. ಹೈ ಕೋರ್ಟಿನ ಅಂತಿಮ ನಿರ್ಣಯದ ನಂತರ ಸರಕಾರವು ಒಂದು ನಿಶ್ಚಿತ ನಿರ್ಧಾರವನ್ನು ತೆಗೆದುಕೊಳ್ಳುತ್ತದೆ ಮತ್ತು ಮಿಲ್ಲು ಮತ್ತೆ ಪ್ರಾರಂಭವಾಗುವಂತೆ ನಾವು ನೋಡಿಕೊಳ್ಳುತ್ತೇವೆ.

* ಶ್ರೀ ಎಂ. ಲಿಂಗೇಗೌಡ : ಅವರೀಗ 1951ನೇ ಇಂಡಿಯನ್ ಕಂಪನೀಜ ಆಕ್ಟ್ ಪ್ರಕಾರ ಕೇಸ್ ಹಾಕಿದ್ದಾರೆಯೆ?

* ಶ್ರೀ ಬಿ.ಡಿ. ಜತ್ತಿ : ವಿಷಯ ಹೈಕೋರ್ಟಿನ ಮುಂದೆ ಇರುವವರೆಗೆ ಇಲ್ಲಿ ಆ ಕುರಿತು ವಿವರವಾಗಿ ಚರ್ಚಿಸುವುದು ಸರಿಯಲ್ಲ ನಾವು ಈ ವಿಷಯದಲ್ಲಿ ಏನಾದರೂ ಮಾಡುವ ಮುನ್ನ ಅದು ಕಾನೂನಿನ ಪ್ರಕಾರ ಇರಬೇಕು ಎಂಬುದನ್ನು ಸದಸ್ಯರೂ ಒಪ್ಪಿಕೊಳ್ಳುತ್ತಾರೆ.

ಮಿನರಲ್ ಡೆವಲೆಪ್‌ಮೆಂಟ್ ಬೋರ್ಡ್ ನಿರ್ಮಿಸಿರುವ ಕುರಿತು ಬೋರ್ಡಿನಲ್ಲೆ ಮೈನಿಂಗ್ ಅನುಭವ ಹೊಂದಿದ ಅಧಿಕಾರೇತರ ಒಬ್ಬ ಸದಸ್ಯನೂ ಇಲ್ಲವೆಂದೂ ಹೇಳಲಾಗಿದೆ. ಅಂಥ ವ್ಯಕ್ತಿಯನ್ನು ಹುಡುಕುವುದು ತುಂಬ ಕಷ್ಟದ್ದಾಗಿದೆ. ಮೈಸೂರು ರಾಜ್ಯದ ಹೊರಗಿನಿಂದ ಅಂಥ ಯಾರನ್ನಾದರೂ ತರುವುದು ನನ್ನಿಂದ ಸಾಧ್ಯವಿಲ್ಲ. ಸಭೆಯ ತಿಳುವಳಿಕೆಗಾಗಿ ಬೋರ್ಡಿನಲ್ಲಿದ್ದ ಅಧಿಕಾರೇತರ ಸದಸ್ಯರ ಹೆಸರನ್ನು ನಾನು ಹೇಳಬಲ್ಲೆ. ಅವರು ಶ್ರೀ ಬಿ. ರಾಮರಾವ್ ಅಂತ ಭೂಗರ್ಭ ಇಲಾಖೆಯ ನಿವೃತ್ತ ನಿರ್ದೇಶಕರು ಅವರಿಗೆ ತುಸು ಅನುಭವ ಇದೆ.

ಆನಂತರ, ಸಿಲ್ಕ ಫಿಲೇಚರ ಬಗ್ಗೆ ಮಾತನಾಡುವಾಗ ಸನ್ಮಾನ್ಯ ಸದಸ್ಯರಾದ ಶ್ರೀ ಮಲ್ಲಾರಾಧ್ಯರು ಪರೀಕ್ಷಿಸಿದ ಶೇಕಡಾವಾರು ಬೀಜ, ಬಗ್ಗೆ ಉಲ್ಲೇಖಿಸಿದರು. ನನಗೆ ದೊರೆತ ಮಾಹಿತಿಯ ಪ್ರಕಾರ, ಸಧ್ಯ ಸಂರಕ್ಷಿತ ಸೀಡಿನ ಶೇಕಡಾವಾರು 55 ಇದೆ. ಅದನ್ನು ನಾವು ಪೂರ್ಣ ಪ್ರತಿಶತಕ್ಕೆ ಏರಿಸಲು ಪ್ರಯತ್ನಿಸುತ್ತಿದ್ದೇವೆ.

ಒಂದು ಪ್ರತ್ಯೇಕ ರೇಷ್ಮೆ ಅಭಿವೃದ್ಧಿ ಮಂಡಳಿ ಇರಬೇಕೆಂದೂ ಒಂದು ಸೂಚನೆಯನ್ನು ಮಾಡಲಾಗಿದೆ. ಸಧ್ಯ ರೇಷ್ಮೆ ಸಲಹಾ ಸಮಿತಿ ಇದೆ. ಅದರಲ್ಲಿ ರೇಷ್ಮೆ ಉದ್ಯೋಗಕ್ಕೆ ಸಂಬಂಧಿಸಿದ ಎಲ್ಲ ತರದ ಜನರೂ ಇದ್ದಾರೆ. ಸಮಿತಿಯಲ್ಲಿ 35 ಜನ ಸದಸ್ಯರಿದ್ದಾರೆ. ಮೂರು ಯೂನಿಟ್ಟುಗಳು ಮೂವರು ಅಧಿಕಾರಿಗಳು ಅದರಲ್ಲಿದ್ದಾರೆ. ಇದಲ್ಲದೆ, ಈ ಮೂರು ಯೂನಿಟ್ಟುಗಳನ್ನು ನೋಡಿಕೊಳ್ಳಲು ಒಂದು ಬೋರ್ಡ ಇದೆ. ಏನೇ ಪಾಲಸಿಗಳನ್ನು ನಿರ್ಧರಿಸುವ ನಿರ್ಧರಿಸಬೇಕಾದರೂ ಈ ಬೋರ್ಡಿನಲ್ಲೆ ನಿರ್ಧರಿಸಲಾಗುತ್ತದೆ. ಇದು ಸಧ್ಯದಲ್ಲಿ ಇದ್ದ ಪರಿಸ್ಥಿತಿ. ಒಂದು ವೇಳೆ ಪ್ರತ್ಯೇಕ ಸ್ವತಂತ್ರ ಬೋರ್ಡು ಇರಬೇಕು ಎಂದು ಸೂಚಿಸುವುದಾದರೆ, ಅದೊಂದು ಪರಿಶೀಲಿಸಬೇಕಾದ ವಿಷಯ ಮತ್ತು ಸೂಚನೆಯನ್ನು ಪರಿಶೀಲಿಸಲಾಗುವುದು.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ಅದು ಆನರರಿಯಾ ಅಥವಾ ಪೇಡ ಆಗಿರುತ್ತಾ?

* ಶ್ರೀ ಬಿ.ಡಿ. ಜತ್ತಿ : ಆದು ಆನರರಿಯಾಗಿರಲಿ ಅಥವಾ ಪೇಡ ಆಗಿರಲಿ, ಬೋರ್ಡು, ಒಂದು ಸ್ವಾಯತ್ತ ಬೋರ್ಡ ಆಗಿರಬೇಕು ಮತ್ತು ನಿರ್ಧಾರ ತೆಗೆದುಕೊಳ್ಳುವ ಅಧಿಕಾರಯುಕ್ತವಾಗಿರಬೇಕು. ನಿರ್ದೇಶಕನು ಶಕ್ತಿಯುತನಾಗಿ ಮಾರ್ಗದರ್ಶನ ಮಾಡುತ್ತಾ ನಿರ್ದೇಶಿಸಬೇಕು. ಗೌರವಧನ ಅಥವ ಸಂಬಳದ ಪ್ರಶ್ನೆ ಇಡೀ ಸೆಟ್ ಆಪ್‌ನಲ್ಲಿ ನಗಣ್ಯವಾದೀತು.

ದೇಶೀಯ ಚರಖಾಗಳ ಅಭಿವೃದ್ಧಿ ಬಗ್ಗೆ ಹೇಳಬೇಕೆಂದರೆ, ಇತ್ತೀಚಿನ ವರದಿಯಂತೆ 1500 ಚರಖಾಗಳನ್ನು ಸುಧಾರಿಸಿದ ಬಸಿನಗಳೊಂದಿಗೆ ಬದಲಾಯಿಸಲಾಗಿದೆ ಮತ್ತು 500ನ್ನು ಜೂನ್ 1959ರ ಮುನ್ನ ವಿತರಿಸಲಾಗುವುದು. ಉದ್ಯೋಗ ಇಲಾಖೆಯ ಪುನಾರಚನೆ ಕುರಿತು ಎತ್ತಿದ ಅಂಶದ ಬಗ್ಗೆ ಹೇಳಬೇಕೆಂದರೆ, ಈ ವಿಷಯವನ್ನು ಸರಕಾರವು ಅತ್ಯಂತ ಗಂಭೀರವಾಗಿ ಪರಿಶೀಲಿಸುತ್ತಿದೆ. ನಾವು ಅದನ್ನು ಗಮನಿಸಿದ್ದೇವೆ. ಮತ್ತು ಸನ್ಮಾನ್ಯ ಸದಸ್ಯರು ನೀಡಿದ ಸಲಹೆಗಳನ್ನು ಗಮನದಲ್ಲಿ ಇಟ್ಟುಕೊಳ್ಳುತ್ತೇವೆ. ಈ ಉದ್ಯೋಗ ನಿರ್ದೇಶಕರುಗಳ ಬಗ್ಗೆ ನಾವು ಯೋಚಿಸುತ್ತಿದ್ದೇವೆ. ಬಹುಶಃ ಅದು ಡೈರೆಕ್ಟರ ಆಫ್ ಇಂಡಸ್ಟ್ರೀಸ್ ಎಂಬುದಾಗಿರುತ್ತದೆ, ಮತ್ತೊಬ್ಬ ಜೊಯಿಂಟ ಡಾಯರೆಕ್ಟರ ಆಫ್ ಇಂಡಸ್ಟ್ರೀಸ್. ಸಧ್ಯದ ನಿರ್ದೇಶಕರುಗಳು, ಕಾರಖಾನೆಗಳ ನಿರ್ದೇಶಕರೆಂದು ಅಥವ ವ್ಯವಸ್ಥಾಪಕರೆಂದು ಕೆಲಸ ಮಾಡುತ್ತಿದ್ದಾರೆ. ಆ ದೃಷ್ಟಿಯಿಂದ ಅವರಿಗೆ, ಬೇರೆ - ಬೇರೆ ಫ್ಯಾಕ್ಟರಿಗಳನ್ನು ನೋಡಿಕೊಳ್ಳುವುದು ಸುಲಭ ಸಾಧ್ಯವಾಗಲಿಕ್ಕಿಲ್ಲ. ಆದ್ದರಿಂದ ಡಾಯಕ್ಟರಿಗಳ ಸೈಜು ಮತ್ತು ಆದಾಯಗಳನ್ನು ಅವಲಂಬಿಸಿ ಸ್ವತಂತ್ರ ನಿರ್ದೇಶಕರುಗಳನ್ನು ನೇಮಿಸುವುದು ಅವಶ್ಯವಾಗಿದೆ. ಸರಕಾರವು ತುಂಬ ಗಂಭೀರವಾಗಿ ಈ ವಿಷಯವನ್ನು ಪರಿಶೀಲಿಸುತ್ತಿದೆ.

ಈಗ ಉದ್ಯೋಗ ಇಲಾಖೆಯಲ್ಲಿ ಯಾರನ್ನು ತರಬೇತು ಗೊಳಿಸಬೇಕು ಎಂಬ ಬಗ್ಗೆ ಕೂಡ ನಾನು ಹೇಳಬಯಸುವೆ. ಇದು ಒಂದು ಸೂಚನೆ ಮಾತ್ರ. ಆ ಬಗ್ಗೆ ಕೂಡ ನಾವು ಯೋಚಿಸುತ್ತಿದ್ದೇವೆ ಮತ್ತು ಉದ್ಯೋಗ ಇಲಾಖೆಯಲ್ಲಿ ಚೆನ್ನಾಗಿ ಕೆಲಸ ಮಾಡಬಲ್ಲಂಥ ಜನರನ್ನು ಆದಷ್ಟು ಬೇಗ ಆಯ್ಕೆ ಮಾಡುತ್ತೇವೆ. ಒಂದು ಸಲ ಆಯ್ಕೆ ಪ್ರಕ್ರಿಯೆ ಮುಗಿಯಿತೆಂದರೆ ಅವರನ್ನು ಇಲ್ಲಿ ಅಥವ ಬೇರೆಡೆ ಕಳಿಸಿ ಅವರಿಗೆ ಪೂರ್ತಿ ತರಬೇತಿ ಕೊಡಿಸುತ್ತೇವೆ. ಅನಂತರ ಉದ್ಯೋಗ ಇಲಾಖೆಗೆ ಸೇರಿಸಿಕೊಂಡ ನಂತರ ಸಾಧ್ಯವಾದಷ್ಟು ಅವರನ್ನು ಉದ್ಯೋಗ ಇಲಾಖೆಯಿಂದ ಬೇರೆ ಇಲಾಖೆಗಳಿಗೆ ಸ್ಥಳಾಂತರ ಮಾಡುವುದಿಲ್ಲ. ಇನ್ನೊಂದು ವಿಷಯ ಪ್ಲಾಂಟ ಸ್ಥಾಪನೆ ಕುರಿತು ಎತ್ತಲಾಯಿತು. ಈ ವಿಷಯದ ಕುರಿತು ಭಾರತ ಸರಕಾರಕ್ಕೆ ಬರೆಯಲಾಗಿದೆ ಮತ್ತು ಅಲ್ಲಿಂದ ಅದು ತಾಂತ್ರಿಕ ಸಮಿತಿಗೆ ಕಳಿಸಲಾಗಿದೆ ಎಂದು ತಿಳಿದು ಬಂದಿದೆ. ಭಾರತ ಸರಕಾರದ ತಾಂತ್ರಿಕ ಸಮಿತಿಯ ಮುಖ್ಯಸ್ಥರಾಗಿ ಡಾ|| ಕಾನೇಶ್ವರರಿದ್ದಾರೆ. ಅದನ್ನು ಎರಡು ಹಂತಗಳಲ್ಲಿ ತೆಗೆದುಕೊಳ್ಳಲಾಗುತ್ತದೆ. ಅದು ಒಪ್ಪಿಗೆಯಾಯಿತೆಂದರೆ ಮೊದಲ ಹಂತದಲ್ಲಿ 50,000 ಟನ್ನುಗಳು. ಅನಂತರ ಎರಡನೆಯ ಹಂತದಲ್ಲಿ 1 ಲಕ್ಷ ಟನ್ನುಗಳು. ಹಾಗೆ ಪ್ರಸ್ತಾಪವಿದೆ. ವರದಿಗಾಗಿ ಕಾಯುತ್ತಿದ್ದೇವೆ. ಬಹು ಬೇಗ ಬರಬಹುದು. ಇನ್ನೊಂದು ಅಂಶ, ಇಂಗಳಧಾಳ ಪ್ಯಾರೈಟ್ಸ ಬಗ್ಗೆ ಶ್ರೀ ಮಲ್ಲಾರಾಧ್ಯರು ಎತ್ತಿದ್ದಾರೆ. ಧನಬಾದದ ಸಂಶೋಧನಾ ಪ್ರಯೋಗಾಲಯವು, ಆ ಅದಿರನ್ನು ಸಲ್ಫುರಿಕ್ ಆಸಿಡ್‌ಗಾಗಿ ಚೆನ್ನಾಗಿ ಉಪಯೋಗಿಸಬಹುದೆಂದೂ, ಸಲ್ಪರ ಎಕ್ಸ್ಟ್ರಾಕ್ಷನ್‌ಗಾಗಿ ಅಲ್ಲವೆಂದೂ ಹೇಳಿದೆ.. ಆ ದೃಷ್ಟಿಯಿಂದ ನಾವು ಅದನ್ನು ಗಂಭೀರವಾಗಿ ಪರಿಶೀಲಿಸುತ್ತಿದ್ದೇವೆ ಮತ್ತು ಏನೆಲ್ಲ ಸಾಧ್ಯವೋ ಅಷ್ಟನ್ನು ಚೆನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದೇವೆ.

ಅಧ್ಯಕ್ಷರೆ, ರಾಜ್ಯದಲ್ಲಿ ಹೊಸ ಇಂಡಸ್ಟ್ರಿಗಳನ್ನು ಸ್ಥಾಪಿಸುವ ಬಗ್ಗೆ ಹೇಳಿದರು. ಈ ಸರಕಾರಕ್ಕೆ ಅದರ ಕಲ್ಪನೆ ಇದೆಯೆ? ಈ ಸರಕಾರ ಹೊಸ ಇಂಡಸ್ಟ್ರಿಗಳನ್ನು ಪ್ರಾರಂಭಿಸುತ್ತದೆಯೆ? ಎಂದು ಕೇಳಿದ್ದಾರೆ. ಅಧ್ಯಕ್ಷ ಮಹಾಶಯರೆ, ತುಮಕೂರು ಜಿಲ್ಲೆಯಲ್ಲಿ ಸಿಮೆಂಟ ಪ್ಲಾಂಟನ್ನು ಪ್ರಾರಂಭಿಸಲಾಗುತ್ತಿದೆ. ಈ ಮೊದಲೆ ನಾನು ಹೇಳಿದಂತೆ, ಏಪ್ರಿಲ್ ಅಂತ್ಯದ ಹೊತ್ತಿಗೆ ನಮಗೆ ಲಾಯಸೆನ್ಸ ದೊರೆಯುವ ಸಾಧ್ಯತೆ ಇದೆ. ಆದ್ದರಿಂದ ತೊಂದರೆ ಇಲ್ಲ. ಎರಡನೆಯದಾಗಿ ಕೃಷ್ಣರಾಜಸಾಗರದಲ್ಲಿ ರಾಫಿಲ್ಮ ಪ್ಲ್ಯಾಂಟ ಬಗ್ಗೆ, ಈ ಸಭೆಯ ಎದುರು ನಾನು ಹೇಳಬಯಸುವುದೆಂದರೆ, ಎಕ್ಸಪರ್ಟ ಕಮಿಟಿಯು ಒಂದು ಸಲ ಬಂದು ಹೋಗಿದೆ ಮತ್ತು ಅದು ವರದಿಯನ್ನು ಸಲ್ಲಿಸಿದೆ. ಅವರು ಮೈಸೂರು ಯೋಗ್ಯವಲ್ಲ ಎಂದು ಹೇಳಿಲ್ಲ. ಅವರು ಮೈಸೂರು ಅತ್ಯಂತ ಸೂಕ್ತ ಸ್ಥಳವೆಂದು ಹೇಳಿದ್ದಾರೆ. ನಾವು ಹೇಳಿದ ಸ್ಥಳ ಕೂಡ ಅವರಿಗೆ ಒಪ್ಪಿಗೆಯಾಗಿದೆ ಆದರೂ ಕೂಡ ನಮಗೆ ಮೊದಲ ಯುನಿಟ್ ದೊರೆಯಲಿಲ್ಲ. ಎರಡನೆಯ ಯುನಿಟ್ಟು ಆದಷ್ಟು ಬೇಗ ನಮಗೆ ದೊರೆಯುತ್ತದೆ ಎಂಬ ಭರವಸೆ ಇದೆ.

ಆಲ್ಯುಮಿನಿಯಮ್ ಪ್ಲ್ಯಾಂಟ ಬಗ್ಗೆ ನಾನು ಹೇಳಿದಂತೆ, ಮುಂಬಯಿಯಿಂದ ಅಪ್ರೂವಲ್ ಬಂದ ನಂತರ ನಾವು ಬೆಳಗಾವಿಯಲ್ಲಿ ಸ್ಥಾಪಿಸಲು ಯೋಚಿಸಿದ್ದೇವೆ ಮತ್ತು

ಅದಕ್ಕಾಗಿ ಅಧಿಕ ಸಮಯ ಬೇಕಾಗುತ್ತದೆ ಅಲ್ಯುಮಿನಿಯಮ್ ಪ್ಲಾಂಟಿಗೆ, ಬಹಳಷ್ಟು ಜನ ನುರಿತ ಅನುಭವಿಗಳಿಗೆ ಗೊತ್ತಿದ್ದಂತೆ ಉಳಿದೆಲ್ಲ ಫ್ಯಾಕ್ಟರಿಗಳಿಗಿಂತ ಅಧಿಕ ವಿದ್ಯುತ್ತು ಬೇಕು. ಅಲ್ಲದೆ ಹಣ ಹೂಡಿಕೆಗೆ ತಕ್ಕಂತೆ ಫ್ಯಾಕ್ಟರಿಗಳಲ್ಲಿ ದೊರೆಯುವ ಉದ್ಯೋಗಕ್ಕೆ ಹೋಲಿಸಿದರೆ ಇಲ್ಲಿ ಕಡಿಮೆ ಅವಕಾಶಗಳಿವೆ. ಕೊನೆಯದಾಗಿ ಇಲ್ಲಿರುವ ಅಂಶವೆಂದರೆ ಇಲ್ಲಿನ ನಿಕ್ಷೇಪವು 25 ವರುಷಗಳಿಗೆ ಸಾಲುವಷ್ಟಿದೆ. ಮುಂಬಯಿ ಸರಕಾರ ಸಹಕರಿಸದಿದ್ದರೆ ಮತ್ತು ಸಾಕಷ್ಟು ನಿಕ್ಷೇಪ ದೊರೆಯದಿದ್ದರೆ ತುಂಬ ತೊಂದರೆಯಾಗುತ್ತದೆ ಮತ್ತು ಹೂಡಿದ 10 - 12 ಕೋಟಿ ರೂಪಾಯಿಗಳು ವ್ಯರ್ಥ ಎನಿಸುತ್ತಿದೆ.

* ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ : ಭದ್ರಾವತಿ ಬಾಕ್ಸಾಯಿಟ ಹೇಗೆ, ಅದು ಸೂಕ್ತವೆ?

* ಶ್ರೀ ಬಿ.ಡಿ. ಜತ್ತಿ : ಇಲ್ಲ, ಅಧ್ಯಕ್ಷರೆ, ಮೈಸೂರಿನಿಂದ ಆರು ಮೈಲುಗಳ ಅಂತರದಲ್ಲಿ ಪೇಪರ್ ಪ್ಲ್ಯಾಂಟನ್ನು ಅತಿ ಶೀಘ್ರದಲ್ಲಿ ಪ್ರಾರಂಭವಾಗುವ ಸಾಧ್ಯತೆ ಇದೆ. ಅದು ಅಮೇರಿಕನ್ನರ ಸಹಕಾರದೊಂದಿಗೆ ಮತ್ತು ಒಂದು ವರುಷದಲ್ಲಿ ಮಶಿನರಿಗಳೂ ಬರುತ್ತವೆಂಬ ಭರವಸೆ ಇದೆ. ಕಬ್ಬಿನ ಸಿಪ್ಪೆಯನ್ನು ಕಚ್ಚಾ ಮಾಲನ್ನಾಗಿ ಉಪಯೋಗಿಸಲಾಗುತ್ತದೆ. ಧಾರವಾಡ ಜಿಲ್ಲೆಯ ಮುಂಡಗೋಡದ ಹತ್ತಿರ ಇನ್ನೊಂದು ಪೇಪರ ಫ್ಯಾಕ್ಟರಿಯನ್ನು ತೆರೆಯುವ ಪ್ರಸ್ತಾಪವೂ ಬಂದಿದೆ. ಅದು ಕೂಡ ಪರಿಶೀಲನೆಯಲ್ಲಿದೆ. ರೆಯಾನ ಪಲ್ಪ ಪ್ಲ್ಯಾಂಟಿಗಾಗಿ ಇತ್ತೀಚಿಗಷ್ಟೆ ಪ್ರಸ್ತಾಪವೊಂದನ್ನು ನಾವು ಸ್ವೀಕರಿಸಿದ್ದೇವೆ. ಅದು ಬಹುಶಃ ಉತ್ತರ ಮಲೆನಾಡಿನಲ್ಲಿ ಆಗಬಹುದು. ಅದಕ್ಕೆ ಕಚ್ಚಾ ವಸ್ತುವಾಗಿ ಬ್ಯಾಂಬೂಗಳನ್ನು ಉಪಯೋಗಿಸಲಾಗುವುದು. ಅದಿನ್ನೂ ನಿರ್ಧಾರವಾಗಿಲ್ಲ. ಪ್ರಯೋಗ ಮಾಡಲಾಗಿದೆ ಮುಂಬಯಿಯ ಸಂಶೋಧನಾ ಪ್ರಯೋಗಾಲಯದವರು ಅದು ಸಾಧ್ಯ ಎಂದಿದ್ದಾರೆ. ಫೆರೋ ಮ್ಯಾಂಗನೀಸ್ ಪ್ಲ್ಯಾಂಟ ಬಗ್ಗೆ ನಾನಾಗಲೇ ಹೇಳಿದಂತೆ ಅದನ್ನು ಬಳ್ಳಾರಿಯ ಹತ್ತಿರದ ಸಂಡೂರಿನಲ್ಲಿ ಸ್ಥಾಪಿಸಬಹುದು. ಇನ್ನೊಂದು ವಿಷಯವೆಂದರೆ, ಬೈಸಿಕಲ್ ಮತ್ತು ಬೈಸಿಕಲ್ಲ ಬಿಡಿ ಭಾಗಗಳ ಬಗ್ಗೆ ಅವುಗಳನ್ನು ಪ್ರಾರಂಭಿಸಲು ನಮಗೊಂದು ಪ್ರಸ್ತಾಪ ಬಂದಿದ್ದು, ಕಟ್ಟಡವೂ ರೆಡಿಯಾಗಿದೆ. ಬಹು ಬೇಗ ಅದು ಮೈಸೂರಿನಲ್ಲಿ ಪ್ರಾರಂಭವಾಗಬಹುದು. ಅದು ಸ್ಟೇಟ ಎಂಟರ್‌ಪ್ರೈಸ್ ಆಗಬೇಕೆಂಬ ಆವಶ್ಯಕತೆ ಇಲ್ಲ. ಅದು ಇಂಡಸ್ಟ್ರಿಯಲ್ ಇಸ್ಟೇಟನಲ್ಲಿ ಆಗುತ್ತದೆ. ದಾಂಡೇಲಿಯ ಫೆರೋ ಮ್ಯಾಂಗನೀಜ ಪ್ಲ್ಯಾಂಟದ ವಿಸ್ತರಣೆ ಮತ್ತು ಸ್ಥಳಾಂತರ ಕುರಿತು ಹೇಳುವುದಾದರೆ, ಅದನ್ನು 25,000 ದಿಂದ 50,000 ಟನ್ನುಗಳಿಗೆ ಏರಿಸಲಾಗುವುದು. ಭದ್ರಾವತಿಯ ಫೆರೋ ಸಿಲಿಕಾನ ಪ್ಲ್ಯಾಂಟದ ಕ್ಷಮತೆಯನ್ನು 5 ಸಾವಿರದಿಂದ 10 ಸಾವಿರ ಟನ್ನಗಳಿಗೆ ಏರಿಸಲಾಗುವುದು. ಅಲ್ಲಿಯ ಸ್ಟೀಲ ಉತ್ಪಾದನೆಯನ್ನು 30 ಸಾವಿರದಿಂದ 1 ಲಕ್ಷ ಟನ್ನುಗಳಿಗೆ, ಸಿಂಟರಿಂಗ ಪ್ಲಾಂಟನ್ನು 270 ರಿಂದ ಹೆಚ್ಚಿಸಲಾಗುವುದು. ನಾಲ್ಕು ಇಂಡಸ್ಟ್ರಿಗಳನ್ನು ಸ್ಥಳಾಂತರಿಸಬೇಕಾಗುವುದು. ಒಂದು ಹುಬ್ಬಳ್ಳಿಯ ನ್ಯೂ ಕರ್ನಾಟಕ ಮಿಲ್ಸು, ಎರಡನೆಯದು ಮೈಸೂರು ಕ್ರೋಮ ಟ್ಯಾನಿಂಗ ಕಂಪನಿ, ಮೂರನೆಯದು ಮೈಸೂರು ಸ್ಪನ್ನ ಸಿಲ್ಕ ಮಿಲ್ಲು ಮತ್ತು ನಾಲ್ಕನೆಯದು ಮೈಸೂರು ಮ್ಯಾಚ್ ಫ್ಯಾಕ್ಟರಿ.

* ಶ್ರೀ ಜೇ.ಬಿ. ಮಲ್ಲಾರಾಧ್ಯ : ಕಪಿಲ ಟೆಕ್ಸಟೈಲ್ ಫ್ಯಾಕ್ಟರಿ ಮರೆತುಬಿಟ್ಟಿರಿ!

* ಶ್ರೀ ಬಿ.ಡಿ. ಜತ್ತಿ : ಕೆಲವು ಸಮಯದ ಹಿಂದೆ ಅದು ನನಗೆ ಬಂದಿದೆ. ಆದ್ದರಿಂದ ಆ ಕುರಿತು ಉತ್ತರಿಸಲಾರೆ. ಅಧ್ಯಕ್ಷ ಮಹಾಶಯರೆ, ಸರಕಾರಿ ವಿದ್ಯುತ್ ಕಾರ್ಖಾನೆ ವಿಸ್ತರಣೆ ಬಗ್ಗೆ, ಕಾಂಟ್ರಾಕ್ಟಿಗೆ ಇನ್ನೂ ಸಹಿ ಬೀಳಬೇಕಾಗಿದೆ. ಎಲ್ಲವೂ ಸಿದ್ಧವಾಗಿದೆ ಮತ್ತು ಆದ್ದರಿಂದ ಆ ಕುರಿತು ಏನನ್ನೂ ಕಮೆಂಟ ಮಾಡುವಂತೆ ಉಳಿದಿಲ್ಲ. ಸೆಂಟ್ರಲ್ ಇಂಡಸ್ಟ್ರಿಯಲ್ ವರ್ಕಶಾಪ್ ರೆಡಿಯಾಗಿದೆ, ರೆಡಿಯೋ ಫ್ಯಾಕ್ಟರಿಯು ಮೀಟರುಗಳನ್ನು ಲ್ಯಾಂಪ ಫ್ಯಾಕ್ಟರಿಯು ಫ್ಲುರೇಸೆಂಟ ಲ್ಯಾಂಪಗಳನ್ನು ಉತ್ಪಾದಿಸಲು ಉದ್ಯುಕ್ತವಾಗಿವೆ. ಈ ಕೆಲವು ಅನೇಕ ವಿಷಯಗಳನ್ನು ಸಭೆಯ ಗಮನಕ್ಕೆ ತರಬಯಸುತ್ತೇನೆ.

* **ಡಾ|| ನಾಗನಗೌಡ** : ಬಳ್ಳಾರಿಯ ಫೆರೋ ಮ್ಯಾಂಗನೀಸ್ ಫ್ಯಾಕ್ಟರಿ ಏನಾಯಿತು?

* ಶ್ರೀ ಬಿ.ಡಿ. ಜತ್ತಿ : ನಾನಾಗಲೇ ಉತ್ತರಿಸಿರುವೆ. ಸನ್ಮಾನ್ಯ ಸದಸ್ಯರಾದ ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ ಅವರು ಜಮಶೇಡಪುರದ ನ್ಯಾಶನಲ್ ಮೆಟಲ್ಯೂರಿಜಿಕಲ್ ಲ್ಯಾಬೋರೇಟರಿಯವರು ಅಭಿವೃದ್ಧಿ ಪಡಿಸಿದ ವಿವಿಧ ಸ್ಟೇನಲೆಸ್ ಸ್ಟೀಲ ಉತ್ಪಾದನೆಯ ಕುರಿತು ಉಲ್ಲೇಖಿಸಿದರು. ದಿ ಮೈಸೂರು ಆಯರ್ನ ಆ್ಯಂಡ ಸ್ಟೀಲ ವರ್ಕದವರು ಪ್ರೋಫೆಸರ್ ಡಕ್ಕರ್ ಜೊತೆಗೆ ಟಚ್ ಇಟ್ಟುಕೊಂಡಿದ್ದಾರೆ. ಭದ್ರಾವತಿಯು ಠಕ್ಕರಾನನ್ನು ವಿದ್ಯುತ್‌ದೊಂದಿಗೆ ಉಪಯೋಗಿಸಲು ಒಪ್ಪಿಕೊಂಡಿದೆ ಮತ್ತು ಅದಕ್ಕೆ ಭಾರತ ಸರಕಾರದ ಅಪ್ರೂವಲ್‌ನ್ನು ಪಡೆಯಬೇಕಾಗುತ್ತದೆ. ಅದಕ್ಕಾಗಿ ನಾವು ಬಹು ಕಾತರತೆಯಿಂದ ಕಾಯುತ್ತಿದ್ದೇವೆ. ಪಡೆದ ತಕ್ಷಣ ಪ್ರಾರಂಭಿಸುತ್ತೇವೆ. ಅಧ್ಯಕ್ಷ ಮಹಾಶಯರೆ, ಸನ್ಮಾನ್ಯ ಸದಸ್ಯರು ಎತ್ತಿದ ಬಹುತೇಕ ಪ್ರಶ್ನೆಗಳಿಗೆ ನಾನು ಸಾಧ್ಯವಿದ್ದಷ್ಟು ಸಂಕ್ಷಿಪ್ತವಾಗಿ ಉಲ್ಲೇಖಮಾಡಿ ಉತ್ತರಿಸಲು ಪ್ರಯತ್ನಿಸಿರುವೆ. ಮತ್ತೊಂದು ಅವಕಾಶ ಸಿಕ್ಕಾಗ ಇನ್ನಷ್ಟು ವಿವರಗಳನ್ನು ಕೊಡಲು ಪ್ರಯತ್ನಿಸುವೆ.

* ಶ್ರೀ ಸಿ.ಜೆ. **ಮುಕ್ಕಣ್ಣಪ್ಪ** : ನೀವು ಕಾರ್ಪೋರೇಷನ್ನ ಬಗ್ಗೆ ಏನನ್ನೂ ಹೇಳಲಿಲ್ಲ.

* ಶ್ರೀ ಬಿ.ಡಿ. ಜತ್ತಿ : ಮಾನ್ಯ ಸದಸ್ಯರಾದ ಶ್ರೀ ಮುಕ್ಕಣ್ಣಪ್ಪನವರು ಅದನ್ನು ಎತ್ತಿ ಹೇಳಿ ಒಳ್ಳೆಯದನ್ನೆ ಮಾಡಿದರು. ಅವರು ಆ ಕುರಿತು ಅಷ್ಟು ಗಂಭೀರವಾಗಿದ್ದರೆ, ಸಭೆಯ ಅಭಿಪ್ರಾಯವನ್ನು ನಾನು ತಿಳಿಯ ಬಯಸುತ್ತೇನೆ. ಕಾರ್ಪೋರೇಶನ್ ನಿರ್ಮಾಣ ಕುರಿತು ನಿಶ್ಚಿತ - ಅಂತಿಮ ರೂಪವನ್ನು ಕೊಡದ ಹೊರತು ಹಣ ಹೂಡುವುದು ತುಂಬ ಕಷ್ಟದ ಕೆಲಸವಾಗುತ್ತದೆ. ನಾವು ಇಂಡಸ್ಟ್ರಿಗಳ ವಿಸ್ತರಣೆಯನ್ನು ಮಾಡಬೇಕಾದರೆ, ಕಾರ್ಪೋರೇಷನ್ನಿನ ಅವಶ್ಯಕತೆ ಇದೆ. ಎರಡು ಬಗೆಯ ಕಾರ್ಪೋರೇಶನ್ನುಗಳಿವೆ. ಒಂದು ನಮ್ಮ ರಾಜ್ಯಕ್ಕಷ್ಟೆ ಸಂಬಂಧಿತವಾದದ್ದು, ಇನ್ನೊಂದು ಅದರಲ್ಲಿ ಭಾರತ ಸರಕಾರವೂ ಬರಲು ಆಸ್ಪದವಿದೆ. ಯಾವ ತರದ ಕಾರ್ಪೋರೇಷನ್ ಇರಬೇಕೆಂದು ಪರಿಶೀಲಿಸಬೇಕಾಗಿದೆ. ಇಂದು ಅಥವ ಬೇರೆ ಸಂದರ್ಭಗಳಲ್ಲಿ ಸದಸ್ಯರು ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ಒಳ್ಳೆಯದಾಗುತ್ತದೆ.

*******

## ಅವಿಶ್ವಾಸ ಗೊತ್ತುವಳಿ ಚರ್ಚೆಗೆ ಉತ್ತರ
## 9, ಮಾರ್ಚ್ 1961

* ಶ್ರೀ ಬಿ.ಡಿ. ಜತ್ತಿ: (ಮುಖ್ಯ ಮಂತ್ರಿಗಳು ಮತ್ತು ಸಭಾ ನಾಯಕರು)

ಅಧ್ಯಕ್ಷರೆ, ವಿರೋಧ ಪಕ್ಷದವರು ಮಂಡಿಸಿದ ಅವಿಶ್ವಾಸ ಗೊತ್ತುವಳಿಯನ್ನು ವಿರೋಧಿಸಲು ನಾನು ಎದ್ದು ನಿಂತಿದ್ದೇನೆ. ವಿರೋಧ ಪಕ್ಷದ ಸದಸ್ಯರು ಎತ್ತಿದ ಎಲ್ಲ ವಿಷಯಗಳಿಗೆ ಉತ್ತರ ಕೊಡಲು ಪ್ರಯತ್ನಿಸುವಾಗ ನಾನು ಸಾಧ್ಯವಾದಷ್ಟು ಸಂಕ್ಷಿಪ್ತವಾಗಿ ಉತ್ತರ ಕೊಡಲು ಪ್ರಯತ್ನಿಸುವೆ. ಯಾಕೆಂದರೆ, ವಿರೋಧ ಪಕ್ಷದ ಹಲವಾರು ಸದಸ್ಯರು ಅನೇಕ ವಿಧ-ವಿಧವಾದ ಪ್ರಶ್ನೆಗಳನ್ನು ಎತ್ತಿದ್ದಾರೆ. ವಿರೋಧ ಪಕ್ಷದವರ ಪ್ರಧಾನ ದಾಳಿಯು, ಬಹುಶಃ ಕಾಂಗ್ರೆಸ್ ಪಕ್ಷವು ಒಗ್ಗಟ್ಟಾಗಿರುವುದು ಮತ್ತು ಅದು ಬಲಶಾಲಿಯಾಗಿದ್ದುದೇ ಕಾಣುತ್ತದೆ. ಆದ್ದರಿಂದಾಗಿ ಮುಂಬರುವ ಸಾರ್ವಜನಿಕ ಚುನಾವಣೆಯನ್ನು ಗಮನದಲ್ಲಿಟ್ಟುಕೊಂಡು ಅವರು ದುರ್ಬಲರಾದಂತಿದ್ದಾರೆ. ಅವರು ಏನೇ ಹೇಳಲಿ, ಕಾಂಗ್ರೆಸ್ ಪಕ್ಷವು ಸಂಪೂರ್ಣವಾಗಿ ಒಗ್ಗಟ್ಟಾಗಿರುವುದರಿಂದ ಮತ್ತು ಶಕ್ತಿಶಾಲಿಯಾಗಿದ್ದುದರಿಂದ ಮುಂಬರುವ ಸಾರ್ವಜನಿಕ ಚುನಾವಣೆಯಲ್ಲಿ ತಾವು ಆಯ್ಕೆಯಾಗಿ ಬರುವುದಿಲ್ಲವೆಂಬ ಮನೋಭಾವನೆ ಅವರಲ್ಲಿದೆ. ಇದು ಚುನಾವಣೆ ಸ್ಟಂಟ್ ಅಲ್ಲ ಎಂಬುದಾಗಿ ಅವರು ಹೇಳಿದ್ದಾರೆ. ಆದರೆ ನನ್ನ ಸನ್ಮಾನ್ಯ ಸಹೋದ್ಯೋಗಿಗಳು ಹೇಳಿದಂತೆ ಇದು ಖಚಿತವಾಗಿಯೂ ಚುನಾವಣಾ ಸ್ಟಂಟೇ ಆಗಿದೆ. ವಿರೋಧ ಪಕ್ಷದ ಸದಸ್ಯರ ಮಾತುಗಳನ್ನು ನಾನು ತುಂಬ ಕಾಳಜಿಯಿಂದ ಮನಕೊಟ್ಟು ಕೇಳಿದ್ದೇನೆ. ಅದರಲ್ಲೂ ವಿಶೇಷವಾಗಿ ವಿರೋಧ ಪಕ್ಷದ ನಾಯಕರ ಮಾತುಗಳನ್ನು ಅದು ಕೂಡ ಯಾವ ರೀತಿಯಾಗಿ ಅವರು ಅವಿಶ್ವಾಸ ಗೊತ್ತುವಳಿಯನ್ನು ಓದಿದರು ಎಂಬುದನ್ನು ಕೇಳಿದ್ದೇನೆ. ಅವರು ಮಾತನಾಡುವ ರೀತಿ ಈ ಸಭೆಯ ಬೇರೆ - ಬೇರೆ ಸದಸ್ಯರ ಮಾತುಗಳಿಗೆ ಉತ್ತರಿಸಲು ನಿರಾಕರಿಸಿದ ಅವರ ರೀತಿ, ಇವುಗಳನ್ನೆಲ್ಲಾ ಗಮನಿಸಿದರೆ, ಅವಿಶ್ವಾಸ ಗೊತ್ತುವಳಿಯನ್ನು ಮಂಡಿಸುವಲ್ಲಿ ಅವರು ತುಂಬ ಗಂಭೀರವಾಗಿ ಅಥವಾ ಪ್ರಾಮಾಣಿಕರಾಗಿ ಇರಲಿಲ್ಲವೆಂದು ಕಾಣುತ್ತದೆ. ಅವರ ಪಕ್ಷದ ಸದಸ್ಯರ ಒತ್ತಾಯದ ಮೇರೆಗೆ ಅವರು ಬಹುಶಃ ಈ ಅವಿಶ್ವಾಸ ಗೊತ್ತುವಳಿಯನ್ನು ಮಂಡಿಸಿದರೆಂದು ಕಾಣುತ್ತದೆ.

ಈಗ ನಾನು ವಿಷಯಗಳನ್ನು ಒಂದೊಂದಾಗಿ ತೆಗೆದುಕೊಳ್ಳುವೆ. ಸನ್ಮಾನ್ಯ ಸದಸ್ಯರಾದ ಶ್ರೀ ನರಸಿಂಹನ್ ಅವರು ಪ್ರಸ್ತುತ ಅಧಿಕಾರಾವಧಿಯಲ್ಲಿ ಪೋಲೀಸರ ವಿರುದ್ಧ ಲೋಕಮತ ಪ್ರದರ್ಶನ ಮಾಡುತ್ತಲಿರಬೇಕಾಯಿತೆಂದು ಹೇಳಿದರು. ಅವರು ಕಮ್ಯುನಿಷ್ಟ್ ಪಕ್ಷವನ್ನು ಪ್ರತಿನಿಧಿಸುವ ಸದಸ್ಯರು. ಕಮ್ಯುನಿಸ್ಟ ಪಕ್ಷದ ಸದಸ್ಯರ ಕೆಲಸವೇ ಗೊಂದಲವನ್ನು ಸೃಷ್ಟಿಸುವುದು ಮತ್ತು ಅದರಿಂದ ಕ್ರೆಡಿಟ್ ಪಡೆಯುವುದಾಗಿದೆ. ಅವರು ಕೆ.ಜಿ.ಎಫ್. ನಿಂದ ಚುನಾಯಿತ ಸದಸ್ಯರು. ಅಲ್ಲಿ ಕಳೆದ 3 ವರುಷಗಳಿಂದ ಮ್ಯಾನೇಜ್‌ಮೆಂಟ್ ಮತ್ತು ಗಣಿಗಳಲ್ಲಿ ಕೆಲಸ ಮಾಡುವ ಕೆಲಸಗಾರರ ಮಧ್ಯ ಭಿನ್ನಾಭಿಪ್ರಾಯಗಳು ಬಂದಿಲ್ಲ. ಅಷ್ಟೇ ಅಲ್ಲ, ಕೆಲಸಗಾರರ

ಮತ್ತು ಮ್ಯಾನೇಜ್‌ಮೆಂಟ್ ಮಧ್ಯ ನಿರಂತರ ಸಹಕಾರವೂ ಇದೆ. ಅಲ್ಲಿ ನಡೆದ ಒಂದು ಅತಿ ಚಿಕ್ಕ ಘಟನೆಯನ್ನು ಅವರು ಉಲ್ಲೇಖಿಸಿದರು. ಆ ಘಟನೆ ಒಬ್ಬ ಹೆಡ್ ಕಾನ್‌ಸ್ಟೇಬಲ್ ಮತ್ತು ಆತನಿಗೆ ಕಿರಾಣಿ ಸಾಮಾನುಗಳನ್ನು ಪೂರೈಸುತ್ತಿದ್ದ ಒಬ್ಬ ವ್ಯಕ್ತಿ ಹಾಗೂ ಆ ಪ್ರದೇಶದಲ್ಲಿದ್ದ ಕೆಲಸಗಾರರ ಮಧ್ಯೆ ನಡೆದದ್ದು. ಆತ ಬೇಗ ಹಣ ಕೊಡಲಿಲ್ಲ ಅದಕ್ಕಾಗಿ ಅವರು ತಂತಮ್ಮಲ್ಲಿ ಜಗಳವಾಡಿದರು. ಆ ವ್ಯಾಪಾರಿ ಅನಂತರ ಹೆಡ್‌ಕಾನ್‌ಸ್ಟೇಬಲ್ಲನು ತನಗೆ ಹೊಡೆದನೆಂದು ದೂರು ಕೊಟ್ಟಿದ್ದಾನೆ. ಈ ದೂರನ್ನು ಕೊಟ್ಟ ತಕ್ಷಣ ಕರ್ತವ್ಯದ ಮೇಲಿದ್ದ ಪೋಲೀಸ ಸಬ್ ಇನ್‌ಸ್ಪೆಕ್ಟರನು ಹೆಡ್‌ಕಾನ್‌ಸ್ಟೇಬಲನನ್ನು ನೌಕರಿಯಿಂದ ಅಮಾನತ್ತಿನಲ್ಲಿಟ್ಟನು. ಅನಂತರ ಕೆಲವು ಕಮ್ಯುನಿಸ್ಟ ಸದಸ್ಯರು ಅಲ್ಲಿಗೆ ಮತ ಪ್ರದರ್ಶನವನ್ನು ಕೊಂಡೊಯ್ದರು. ಅದೇನು ದೊಡ್ಡ ಗುಂಪೂ ಆಗಿರಲಿಲ್ಲ. ಅದೊಂದು ಅತ್ಯಂತ ಚಿಕ್ಕ ಗುಂಪು. ಇದೊಂದು ಚಿಕ್ಕ ಘಟನೆಯನ್ನು ತೆಗೆದುಕೊಂಡು ಇವರು ಅದನ್ನು ಹಿಗ್ಗಿಸುತ್ತ ಅಲ್ಲಿ ಪೋಲೀಸರ ವಿರುದ್ಧ ಮತ್ತು ಸಚಿವರ ವಿರುದ್ಧ ಅಸಂಖ್ಯ ಮತ ಪ್ರದರ್ಶನಗಳು ನಡೆದುವು ಎಂದು ಹೇಳಿದರು. ಇದೆಲ್ಲ ಸತ್ಯವಲ್ಲ. ಅವರು ಹುಬ್ಬಳ್ಳಿಯಲ್ಲಿ ನಡೆದ ಮತಪ್ರದರ್ಶನದ ಬಗ್ಗೆ ಸಹ ಹೇಳಿದರು. ನನಗೆ ದೊರೆತ ಮಾಹಿತಿಯ ಪ್ರಕಾರ ಅಲ್ಲಿ ಕೇವಲ ಕಮ್ಯುನಿಷ್ಟ್ ಸದಸ್ಯರ ಪ್ರಚೋದನೆಯಿಂದ ಗದ್ದಲ ಎದ್ದಿತು. ಅವರು ರಾಜ್ಯದ ಎಲ್ಲೆಡೆಯಲ್ಲಿ ಇಂಥ ಗಲಭೆ- ಗೊಂದಲಗಳನ್ನು ಸೃಷ್ಟಿಸುತ್ತಾರೆ, ಅನಂತರ ದೂರು ಕೊಡುತ್ತಾರೆ. ಇದು ಅವರ ಧೋರಣೆ (ಪಾಲಸಿ) ಮತ್ತು ಆದ್ದರಿಂದ ಕಮ್ಯುನಿಷ್ಟ್ ಪಕ್ಷದ ಸದಸ್ಯರು ಪ್ರಚೋದಿಸಿದ ಮತಪ್ರದರ್ಶನಗಳಿಗೆ ನಾವು ಅಷ್ಟೊಂದು ಬಹಳ ಗಮನ ಕೊಡುವ ಅವಶ್ಯಕತೆ ಇಲ್ಲ.

ಇನ್ನು ಶ್ರೀ ಎಂ. ಎಸ್. ಪಟ್ಟಣ್ ಅವರು ಮೈಸೂರು ಸರಕಾರದ ವಿರುದ್ಧ ಗುರುತರ ಆಪಾದನೆಗಳನ್ನು ಮಾಡ ಬಯಸುತ್ತಾರೆ. ಅವರು ರಾಮದುರ್ಗ ಸಂಸ್ಥಾನದಲ್ಲಿ ಅದು ಮುಂಬಯಿ ರಾಜ್ಯದಲ್ಲಿ ವಿಲೀನವಾಗುವ ಮುನ್ನ ನಡೆದ ಒಂದು ಘಟನೆಯನ್ನು ಉಲ್ಲೇಖಿಸಿದರು. ಆ ಸಮಯದಲ್ಲಿ ಅಲ್ಲಿ ಅಂಥ ಹಲವಾರು ದುರ್ಘಟನೆಗಳಾಗಿವೆ. ರಾಮದುರ್ಗ ಸಂಸ್ಥಾನವು ಸಂಸ್ಥಾನವಾಗಿದ್ದಾಗ ಮತ್ತು ಅದು ಮುಂಬಯಿ ರಾಜ್ಯದಲ್ಲಿ ವಿಲೀನವಾದಾಗ ನಡೆದ ಘಟನೆಗಳಿಗೆಲ್ಲ ಈ ಸರಕಾರವನ್ನು ಜವಾಬ್ದಾರಿಯನ್ನಾಗಿಸುವುದು ಸಾಧ್ಯವೇ ಇಲ್ಲ. ಆ ಸಮಯದಲ್ಲಿ ಅವರು ಮತ್ತು ಇತರರು ನೀಡಿದ ಎಲ್ಲ ರಿಪ್ರೆಜೆಂಟೇಶನ್ನುಗಳನ್ನು ಮುಂಬಯಿ ಸರಕಾರ ಪರಿಶೀಲಿಸಿದೆ ಮತ್ತು ಅನಂತರ ನಿಜವಾಗಿ ಸಂತ್ರಸ್ತರಾದ ಜನರಿಗೆ ಪರಿಹಾರವನ್ನೂ ಕೊಟ್ಟಿದ್ದಾಗಿದೆ. ಇದನ್ನು ಮುಂಬಯಿ ಸರಕಾರ ಮಾಡಿದೆ. 1956 ರ ನವೆಂಬರ್ 1 ರಂದು ಹೊಸ ಮೈಸೂರು ರಾಜ್ಯ ನಿರ್ಮಾಣವಾದನಂತರ ರಾಮದುರ್ಗ ದುರ್ಘಟನೆಯ ಸಂತ್ರಸ್ತರಿಗೆ ಈ ಸರಕಾರ ಅನುಕಂಪ ತೋರಿಸುತ್ತಿಲ್ಲ ಎಂದು ಈ ಸರಕಾರವನ್ನು ದೂಷಿಸುತ್ತಿರುವುದು ಸನ್ಮಾನ್ಯ ಸದಸ್ಯರಿಗೆ ಶೋಭೆ ತರುವಂಥದ್ದಲ್ಲ. ಇಂದಿನ ಅವಿಶ್ವಾಸ ಗೊತ್ತುವಳಿಗೂ ಮತ್ತು ಈ ಘಟನೆಗೂ ಏನೇನೂ ಸಂಬಂಧವಿಲ್ಲ. ಆದರೆ ಎಷ್ಟೋ ವರುಷಗಳ ಹಿಂದೆ ನಡೆದ

ಘಟನೆಯನ್ನು ತೆಗೆದುಕೊಂಡು ನನ್ನ ಸನ್ಮಾನ್ಯ ಸ್ನೇಹಿತರು ಹೇಗಾದರೂ ಮಾಡಿ, ಒಂದಿಲ್ಲೊಂದು ಕಾರಣಗಳನ್ನು ಹೊರಿಸಿ ಈ ಸರಕಾರದ ಮೇಲೆ ದಾಳಿ ಮಾಡಬೇಕೆಂದು ಪ್ರಯತ್ನಿಸುತ್ತಿದ್ದಾರೆ.

ವಿರೋಧ ಪಕ್ಷದ ಸದಸ್ಯರ ವಿರುದ್ಧ ಸುಳ್ಳು ಪಾನ ನಿರೋಧ ಕೇಸುಗಳನ್ನು ಹಾಕುತ್ತಿದ್ದಾರೆಂದು ಅವರು ಹೇಳಿದರು. ನಾನಂತೂ ಅಂಥ ಕೇಸಿನ ಬಗ್ಗೆ ಕೇಳಿಲ್ಲ, ಹಾಗೆ ಅಂಥ ಘಟನೆಗಳೇನಾದರೂ ಸಂಭವಿಸಿದ್ದರೆ, ಅವರು ಪ್ರತ್ಯೇಕವಾಗಿ ಎತ್ತಿ ತೋರಿಸಬೇಕಾಗಿತ್ತು. ಆದರೆ ಹಾಗೆ ಅವರು ಯಾವ ವೈಯುಕ್ತಿಕ ಕೇಸುಗಳನ್ನು ಉಲ್ಲೇಖಿಸಲಿಲ್ಲ. ಆದ್ದರಿಂದ ಆ ಪ್ರಶ್ನೆಯನ್ನು ಚರ್ಚಿಸುವುದರಲ್ಲಿ ಯಾವ ಅರ್ಥವೂ ಇಲ್ಲ. ಯಾವಾಗಲಾದರೂ ಅಂಥ ಕೇಸುಗಳು ಇದ್ದರೆ ಪೊಲೀಸರು ಅವುಗಳನ್ನು ಶೋಧಿಸಬೇಕಾಗುತ್ತದೆ. ಮತ್ತು ಅವರ ಶೋಧನ ಸತ್ಯವೆಂದು ಕಂಡು ಬಂದರೆ ಅನಂತರ ಅವರು ಕೋರ್ಟಿನ ಎದುರು ಆಪಾದನಾ ಪಟ್ಟಿಯನ್ನು ಕಳಿಸಬೇಕಾಗುತ್ತದೆ. ಹಾಗೆ ಮಾಡಿದ್ದರೆ ಸತ್ಯ ಶೋಧನೆಗಾಗಿ ಮತ್ತು ಕೋರ್ಟಿಗೆ ಕಳಿಸಿದ ಚಾರ್ಜ ಶೀಟಿಗಾಗಿ ಪೋಲೀಸರ ಕಾರ್ಯವನ್ನು ಅವರು ಶ್ಲಾಘಿಸಬೇಕು.

ಅನಂತರ ಅವರು ಜಮಖಂಡಿ ತಾಲ್ಲೂಕಿನಲ್ಲಿ ನಡೆದ ದರೋಡೆಯನ್ನು ಉಲ್ಲೇಖಿಸಿದರು. ನನಗೆ ಗೊತ್ತಿದ್ದಂತೆ ಜಮಖಂಡಿ ತಾಲ್ಲೂಕಿನಲ್ಲಿ ಕಳೆದ ಎರಡು-ಮೂರು ವರುಷಗಳಲ್ಲಿ ದರೋಡೆಯ ಘಟನೆಗಳು ನಡೆದಿಲ್ಲ. ನಾನು ಆ ಪ್ರದೇಶದಿಂದಲೇ ಬಂದವನು ಮತ್ತು ಮೇಲಾಗಿ ನಾನೇ ಪೋಲೀಸ್ ಇಲಾಖೆಯ ಉಸ್ತುವಾರಿಯಲ್ಲಿದ್ದವನು. ದರೋಡೆ ಎಲ್ಲಿ ನಡೆದಿದೆ ಎಂಬುದು ಗೊತ್ತಿಲ್ಲದೆಯೇ ಅವರು ಸರಕಾರದ ವಿರುದ್ಧ ಆಪಾದನೆ ಮಾಡುತ್ತಿದ್ದಾರೆ. ಅದರಲ್ಲೂ ವಿಶೇಷವಾಗಿ ಪೋಲೀಸ್ ಇಲಾಖೆಯ ವಿರುದ್ಧವಾಗಿ ಮಾಡುತ್ತಿದ್ದಾರೆ. ಬಹುಶಃ ಅವರು ಬೇರೆಡೆ ಘಟಿಸಿದ ದರೋಡೆ ಕುರಿತು ಉಲ್ಲೇಖಿಸುತ್ತಿರಬೇಕು ಅದು ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನದ್ದಾಗಿರಬೇಕು. ಅವರಿಗೆ ವಿಷಯ ಗೊತ್ತಿಲ್ಲ. ಆದರೂ ಅವರು ಪೋಲೀಸ್ ಇಲಾಖೆಯ ವಿರುದ್ಧ ಅದರಲ್ಲೂ ಜಮಖಂಡಿ ತಾಲ್ಲೂಕಿನಿಂದ ಬಂದವನಾದ ನನ್ನ ವಿರುದ್ಧ ಆಪಾದನೆ ಮಾಡಬಯಸುತ್ತಾರೆ. ಈ ವಿಷಯಗಳೆಲ್ಲ ಸುಳ್ಳು ನಾನು ಊಹಿಸಿದ್ದು ಸರಿ ಇದ್ದರೆ ಮತ್ತು ಅವರು ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಕಕಮರಿ ಎಂಬ ಹಳ್ಳಿಯಲ್ಲಿ ನಡೆದ ದರೋಡೆಯ ಕೇಸನ್ನೆ ಉಲ್ಲೇಖಿಸುತ್ತಿರುವುದಾದರೆ, ಆ ಕೇಸು ಪ್ರಥಮ ದರ್ಜೆಯ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ನಡೆಯುತ್ತಿದೆ. ಅವರ ಜಾಮೀನು ತಿರಸ್ಕೃತವಾಗಿದೆ. ಅನಂತರ ಅವರು ಜಿಲ್ಲಾ ನ್ಯಾಯಾಧೀಶರ ಕೋರ್ಟಿನಲ್ಲಿ ಅಪೀಲು ಹೋದರು ಅಲ್ಲಿ ಕೂಡ ಜಾಮೀನು ಸಿಗಲಿಲ್ಲ. ಅನಂತರ ಅವರು ಉಚ್ಚನ್ಯಾಯಾಲಯಕ್ಕೆ ಹೋದರು ಅಲ್ಲಿಯೂ ಜಾಮೀನು ತಿರಸ್ಕೃತವಾಯಿತು. ಅನಂತರ ಸುಪ್ರಿಮ್ ಕೋರ್ಟಿಗೆ ಹೋದರು ಅಲ್ಲಿಯೂ ಜಾಮೀನು ಸಿಕ್ಕಿಲ್ಲ, ಈ ಎಲ್ಲ ಕೋರ್ಟುಗಳಲ್ಲಿ ಜಾಮೀನು ತಿರಸ್ಕೃತವಾದ ಮೇಲೆ ಇವರು ಪೋಲೀಸರ ವಿರುದ್ಧ ಆಪಾದನೆ ಮಾಡುವುದು ಅದು ಹೇಗೆ ಸರಿ ಎನಿಸುತ್ತದೆ? ಇವರ ಪಂಗಡದವರಿಗೆ ನ್ಯಾಯ ಪದ್ಧತಿ ನಿರ್ಣಯ ಕೊಟ್ಟಾದ ಮೇಲೆ, ನಾನಾಗಲೀ ಈ ಸಭೆಯ ಸದಸ್ಯರಾಗಲೀ ಅದು ಹೇಗೆ ಜವಾಬ್ದಾರರಾಗುತ್ತಾರೆ?

ಅನಂತರ ಅವರು ಎನ್.ಇ.ಎಸ್. ಮತ್ತು ರಾಮದುರ್ಗ ತಾಲ್ಲೂಕಿನಲ್ಲಿಯ ಶಿಕ್ಷಣ ಅಭಿವೃದ್ಧಿ ಯೋಜನೆಗಳ ಕುರಿತು ಉಲ್ಲೇಖಿಸಿದರು ಮತ್ತು ಅವರ ತಾಲ್ಲೂಕು ನಿರ್ಲಕ್ಷಿಸಲಾಗುತ್ತಿದೆ ಎಂದು ಹೇಳ ಬಯಸಿದರು. ಅದು ಕೂಡ ಸತ್ಯವಲ್ಲ ಸಂಬಂಧಿಸಿದ ಇಲಾಖೆಯಿಂದ ಬಂದ ಮಾಹಿತಿ ನನ್ನ ಹತ್ತಿರ ಇದೆ. ಏಪ್ರಿಲ್ 1958 ರಲ್ಲಿ ರಾಮದುರ್ಗದಲ್ಲಿ ಈ ಬ್ಲಾಕು ಉದ್ಘಾಟನೆ ಆಯಿತು. ಇಂದಿನವರೆಗೆ ಆ ಬ್ಲಾಕಿನಲ್ಲಿ ಖರ್ಚಾದ ಒಟ್ಟು ಹಣ ರೂಪಾಯಿ 4,24,453. ಪ್ರತಿಯಾಗಿ ಜನರ ವಂತಿಗೆ ಕೇವಲ ರೂ. 15,309-00 ಆಗಿದೆ. ಇದು ಸನ್ಮಾನ್ಯ ಸದಸ್ಯರ ಜನಪ್ರಿಯತೆಯನ್ನು ತೋರಿಸುತ್ತದೆ. ಮೈಸೂರು ಸರಕಾರ ಖರ್ಚು ಮಾಡಿದ ಹಣದಷ್ಟೇ ವಂತಿಕೆಯನ್ನು ಜನರಿಂದಅವರು ಸಂಗ್ರಹಿಸಬೇಕಾಗಿತ್ತು. ಸಾರ್ವಜನಿಕರಿಂದ ವಂತಿಗೆಯನ್ನು ಸಂಗ್ರಹಿಸುವುದು ಸನ್ಮಾನ್ಯ ಸದಸ್ಯರಿಂದ ಸಾಧ್ಯವಾಗದಿದ್ದರೆ ಅದು ಸರಕಾರದ ತಪ್ಪಲ್ಲ. ಅವರು ಬಹು ಜನಪ್ರಿಯರಾಗಿದ್ದರೆ ಮತ್ತು ಅವರು ತಾಲ್ಲೂಕಿನ ಜನರಿಗೆ ಬೇಕಾಗಿದ್ದರೆ ಸ್ವಾಭಾವಿಕವಾಗಿ ಅವರು ಸರಕಾರ ಆ ತಾಲ್ಲೂಕಿನಲ್ಲಿ ಖರ್ಚು ಮಾಡಲು ಸಿದ್ಧವಿರುವ ಹಣಕ್ಕೆ ಸಮನಾದ ವಂತಿಗೆಯನ್ನು ಕೊಡುತ್ತಿದ್ದರು. ಹಾಗೆ ಆಗಿರದಿದ್ದರೆ ಅದಕ್ಕೆ ಸರಕಾರವನ್ನು ದೂಷಿಸಬಾರದು - ಇವರನ್ನು ದೂಷಿಸಬೇಕು. ಸಾಮಾನ್ಯವಾಗಿ ನನಗೆ ಗೊತ್ತಿದ್ದಂತೆ ಸನ್ಮಾನ್ಯಸದಸ್ಯರು ಯಾವಾಗಲೂ ಪೋಲೀಸರ ವಿರುದ್ಧ ದೂಷಿಸುತ್ತಿರುತ್ತಾರೆ. ಯಾಕೆಂದರೆ, ಒಂದಿಲ್ಲೊಂದು ತೆರನಾಗಿ ಅವರು ಕ್ರಿಮಿನಲ್ ಅಥವ ಇತರೆ ಕೇಸುಗಳಲ್ಲಿ ಶಾಮೀಲಾಗಿರುತ್ತಾರೆ. ಅದಕ್ಕೆ ನಾನು ಜವಾಬ್ದಾರನಲ್ಲ. ಅವರ ನಡತೆ ಚೆನ್ನಾಗಿದ್ದರೆ ಯಾವ ಪೋಲೀಸ್ ಅಧಿಕಾರಿಯೂ ಅವರನ್ನು ಮುಟ್ಟಲಾರನೆಂದು ನಾನು ಯಾವಾಗಲೂ ಹೇಳುತ್ತ ಬಂದಿರುವೆ. ಆದರೆ, ಅದು ಹಾಗೆ ಆಗದಿದ್ದರೆ, ಮತ್ತು ಅವರು ಅದಕ್ಕಾಗಿ ತೊಂದರೆಗೆ ಸಿಗಿ ಬಿದ್ದರೆ, ಅವರು ಚೆನ್ನಾಗಿ ವರ್ತಿಸುವುದು ಅವರ ಕರ್ತವ್ಯ ಇದಕ್ಕಿಂತ ಹೆಚ್ಚಿಗೆ ನಾನೇನೂ ಹೇಳಲಾರೆ.

ಹಲವಾರು ಕಮಿಟಿಗಳ ಸದಸ್ಯತ್ವದ ಕುರಿತಾಗಿ ವಿರೋಧ ಪಕ್ಷದವರು ಹೇಳಿದರು. ಅವರು ಕಾಂಗ್ರೆಸ ಪಕ್ಷದಿಂದ ಯಾರು ಎಂಬುದನ್ನು ಮತ್ತು ಅವರ ಪಕ್ಷಗಳಿಂದ ಯಾರು ಎಂಬುದನ್ನು ಪ್ರತ್ಯೇಕವಾಗಿ ಹೆಸರುಗಳನ್ನು ಹೇಳಲಿಲ್ಲ. ವಿವಿಧ ಕಮಿಟಿ ಅಥವಾ ಬೋರ್ಡುಗಳಿಗೆ ತಾವು ಸದಸ್ಯರನ್ನು ನಾಮಕರಣ ಅಥವ ನೇಮಕಾತಿ ಮಾಡುವಾಗ ನಾವು ಆ ವ್ಯಕ್ತಿ ಯಾವ ರಾಜಕೀಯ ಪಕ್ಷಕ್ಕೆ ಸೇರಿದ್ದಾನೆಂಬುದನ್ನು ಪರಿಗಣಿಸುವುದಿಲ್ಲ. ಆದರೆ ಆ ವಿಶೇಷ ಸಮಿತಿಗೆ ಅಥವ ಬೋರ್ಡಿಗೆ, ಯಾವ ವ್ಯಕ್ತಿ ಉಪಯುಕ್ತನಾಗುತ್ತಾನೆಂಬ ಬಗ್ಗೆ ನೋಡಿಕೊಳ್ಳುತ್ತೇವೆ. ಹೆಚ್ಚಿಗೆ ವೇಳೆಯನ್ನು ತೆಗೆದುಕೊಳ್ಳದೆ ಈ ಕುರಿತು ಕೆಲವು ಮಾತುಗಳನ್ನು ನಾನು ಹೇಳಲು ಪ್ರಯತ್ನಿಸುವೆ ಪಕ್ಷಭೇದವಿಲ್ಲದೆ ನಾಮಕರಣಗೊಂಡ ಎಂ.ಎಲ್.ಎ ಮತ್ತು ಎಂ.ಎಲ್.ಸಿ ಗಳನ್ನೊಳಗೊಂಡ ಹಲವಾರು ಸಮಿತಿಗಳಿವೆ ಅವುಗಳೆಂದರೆ.

1) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ ಸುಧಾರಣಾ ಸಲಹಾ ಸಮಿತಿ

2) ಜಿಲ್ಲಾ ಅಭಿವೃದ್ಧಿ ಮಂಡಳಿ

3) ಕುಟುಂಬ ಯೋಜನಾ ಸಲಹಾ ಸಮಿತಿ

4) ಆಯಾ ಪ್ರದೇಶಗಳಲ್ಲಿಯ ಪಾಲಿಟೆಕ್ನಿಕ್ ಇನ್‌ಸ್ಟಿಟ್ಯೂಟ್ ಸಲಹಾ ಸಮಿತಿ.

ಇವುಗಳಲ್ಲದೆ ಇನ್ನು ಹಲವು ಸಮಿತಿಗಳಿವೆ. ಸಮಯಾಭಾವದಿಂದ ಅವುಗಳೆಲ್ಲದರ ಹೆಸರುಗಳನ್ನು ಹೇಳಲಿಚ್ಛಿಸುವುದಿಲ್ಲ. ಕಾಂಗ್ರೆಸ್ ಮತ್ತು ಇತರ ಪಕ್ಷಗಳಿಂದ ನಾಮಕರಣಗೊಂಡ ವಿವಿಧ ಸದಸ್ಯರ ವಿವಿಧ ಸಮಿತಿಗಳ ಮತ್ತು ಮಂಡಳಿಗಳ ಪಟ್ಟಿ ನನ್ನಲ್ಲಿದೆ. ಇಡೀ ಪಟ್ಟಿಯನ್ನು ಓದಲಾರೆ ಆದರೆ ಕೆಲವು ಹೆಸರುಗಳನ್ನು ಮತ್ತು ಅವರು ಎಷ್ಟು ಸಮಿತಿಗಳಲ್ಲಿ ಸದಸ್ಯರಾಗಿದ್ದಾರೆಂಬುದನ್ನು ಹೇಳುವೆ. ಸರ್ವಶ್ರೀ

| | |
|---|---|
| ಎಂ.ಸಿ. ನರಸಿಂಹನ್ | 5 ಸಮಿತಿಗಳಿಗೆ |
| ಬಿ.ಎಲ್. ನಾರಾಯಣಸ್ವಾಮಿ | 2 ಸಮಿತಿಗಳಿಗೆ |
| ಎಸ್.ಬಿ. ತುಮಕರ | 1 ಸಮಿತಿಗಳಿಗೆ |
| ಎಂ. ದಾನಪ್ಪ | 5 ಸಮಿತಿಗಳಿಗೆ |
| ಜೆ.ಪಿ. ಸಮೇಶ | 2 ಸಮಿತಿಗಳಿಗೆ |
| ಮಹಮ್ಮದ ಸೇಠ | 1 ಸಮಿತಿಗಳಿಗೆ |
| ಜಿ. ಹೂವರ | 2 ಸಮಿತಿಗಳಿಗೆ |
| ಸಿ.ಎಂ. ಆರ್ಮುಗಮ್ | 2 ಸಮಿತಿಗಳಿಗೆ |
| ಶಾಮಸುಂದರ | 1 ಸಮಿತಿಗಳಿಗೆ |
| ಜೆ.ಬಿ. ಮಲ್ಲಾರಾಧ್ಯ | 2/3 ಸಮಿತಿಗಳಿಗೆ |

ವಾಯ್. ವೀರಪ್ಪ, ಬಿ.ಜಿ. ಖೋತ, ಟಿ. ಜಂಬಣ್ಣಾ, ಬಿ.ಆರ್. ಪಾಟೀಲ, ಬಸವೇಗೌಡ, ಟಿ.ಎನ್. ಕೆಂಪಹೊನ್ನಯ್ಯ, ಜಿ.ಎನ್. ಪುಟ್ಟಣ್ಣ, ಕೆ. ಕೆಂಚಪ್ಪ, ಚುಂಚೇಗೌಡ, ಡಾ|| ಪಾರ್ಥಸಾರಥಿ ಮತ್ತು ವಿರೋಧ ಪಕ್ಷಗಳ ಅನೇಕ ಎಂ.ಎಲ್. ಎ. ಗಳು ಮತ್ತು ಎಂ.ಎಲ್.ಸಿ.ಗಳು. ಈ ಸದಸ್ಯರುಗಳೆಲ್ಲ ಹಲವಾರು ಸಮಿತಿಗಳಲ್ಲಿದ್ದಾರೆ. ಇಷ್ಟಾಗಿಯೂ ವಿರೋಧ ಪಕ್ಷದ ಸದಸ್ಯರನ್ನು ವಿವಿಧ ಸಮಿತಿಗಳಲ್ಲಿ ತೆಗೆದುಕೊಂಡಿಲ್ಲ ಎಂದು ಸರಕಾರವನ್ನು ದೂಷಿಸುವುದಾದರೆ. ಅವರ ದೂಷಣೆಗಳಿಗೆ ತಳಬುಡವಿಲ್ಲ ಮತ್ತು ಅದು ಅವರಿಗೆ ಶೋಭೆ ತರುವಂಥದ್ದಲ್ಲ ಎಂದು ನನಗನಿಸುತ್ತದೆ.

ವಿರೋಧ ಪಕ್ಷದ ಸದಸ್ಯರು ಆರ್.ಟಿ.ಓ. ಖೋಟಾ ಚಲನಗಳ ಬಗ್ಗೆ ಉಲ್ಲೇಖಿಸಿದರು. ಅವರಿಗೆ ವಿಶೇಷವಾಗಿ ಮಾಹಿತಿ ಬೇಕಾಗಿದೆ. ನಾನು ಆ ಮಾಹಿತಿಯನ್ನು ಆ ಸಭೆಯ ಅವಗಾಹನೆಗಾಗಿ ಇತ್ತೀಚಿನ ವಿವರ ಸಹಿತವಾಗಿ ಹೇಳುವೆ. ಇಲ್ಲಿಯವರೆಗೆ 2600 ಅಂಥ ಕೇಸುಗಳು ಶೋಧವಾಗಿದೆ. ಅದರಲ್ಲಿ ಒಟ್ಟು ರೂ. 9,15,673-64 ಪೈಸೆಗಳಷ್ಟು ಅಡಕವಾಗಿದೆ. 193 ಕೇಸುಗಳು ಅಂತಿಮ ವರದಿಗಾಗಿ ಕಾದಿವೆ. ಪ್ರತಿ ವರುಷದ ಕೇಸುಗಳ ಸಂಖ್ಯೆಯನ್ನು ನಾನು ಕೊಡುವೆ.

| | | |
|---|---|---|
| 1955-19 ಕೇಸುಗಳು | 1956-524 ಕೇಸುಗಳು | 1957-785 ಕೇಸುಗಳು |
| 1958-753 ಕೇಸುಗಳು | 1959-308 ಕೇಸುಗಳು | 1960-216 ಕೇಸುಗಳು |

ವಿಷಯವನ್ನು ಪೊಲೀಸರಿಗೆ ವಹಿಸಲಾಗಿದೆ ಮತ್ತು ಪೊಲೀಸರ ಶೋಧ ನಡೆದಿದೆ. ಇದಕ್ಕೆ ಸಂಬಂಧಿಸಿದ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ಕ್ಲರ್ಕ ಅಥವಾ ಟೈಪಿಸ್ಟನನ್ನು ಬಂಧಿಸಲಾಗಿದೆ ಮತ್ತು ಆತನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ. ಅವನನ್ನು ಅಮಾನತ್ತಿನಲ್ಲಿಡಲಾಗಿದೆ ಮುಂದಿನ ಶೋಧ ನಡೆದಿದೆ. ಕೇಸು ಇನ್ನು ಶೋಧನೆಯಲ್ಲಿದೆ. ಇಲ್ಲಿಯವರೆಗೆ 164 ದೂರುಗಳನ್ನು ಸಲ್ಲಿಸಲಾಗಿದೆ. ಮತ್ತು 152 ಕೇಸುಗಳಲ್ಲಿಯ ರೂ. 37915-15 ಪೈಸೆ ಇಲಾಖೆಯಿಂದ ರಿಕವರಿ ಆಗಿದೆ. ಇದಿಷ್ಟು ವಿಷಯಗಳನ್ನು ನಾನು ಸಭೆಯ ಮುಂದೆ ಇಡಬಯಸುವೆ.

ವಿರೋಧಿ ಬಣದ ಸನ್ಮಾನ್ಯ ಸದಸ್ಯರೊಬ್ಬರು ಸಂಡೂರಿನ ನವಿಲುಸ್ವಾಮಿ ಕೇಸನ್ನು ಉಲ್ಲೇಖಿಸಿದರು. ಹಾಗೆ ಉಲ್ಲೇಖಿಸುವಾಗ ಸರಕಾರ ಒಬ್ಬ ವ್ಯಕ್ತಿಗಾಗಿ, ಈ ಶಾಸನ ಸಭೆಯ ಸದಸ್ಯನಿಗೆ ಅನುಕಂಪ ತೋರಿದೆ ಎಂದು ಯಾರೋ ಸೂಚಿಸಿದರು. ಈ ಕೇಸಿನಲ್ಲಿ ಮೂರು ವರುಷಗಳ ಹಿಂದೆ 12 ಆರೋಪಿಗಳ ವಿರುದ್ಧ ಕಾನೂನು ಕ್ರಮ ಕೈಗೊಳ್ಳಲಾಯಿತು. ಅವರ ವಿರುದ್ಧ ಸಂಡೂರಿನ ನವಿಲು ಸ್ವಾಮಿ ಮೂರ್ತಿ ಕಳುವು ಮತ್ತು ಇತರ ಆರೋಪಗಳಿವೆ. ಹನ್ನೆರಡನೆಯ ಆರೋಪಿಯನ್ನು ಪ್ರತ್ಯೇಕವಾಗಿ ವಿಚಾರಣೆ ಮಾಡಲಾಯಿತು ಮತ್ತು ತಪ್ಪಿತಸ್ಥನೆಂದು ನಿರ್ಣಯಿಸಲಾಯಿತು. ಉಳಿದೆಲ್ಲ ಆರೋಪಿಗಳು ನಿರ್ದೋಷಿಗಳೆಂದು ಬಿಡುಗಡೆಯಾದರು. ಮ್ಯಾಜಿಸ್ಟ್ರೇಟರು ಸರಕಾರಿ ಅಧಿಕಾರಿಗಳ ಮೇಲೆ ಮಾಡಿದ ಟೀಕೆಗಳು ಸತ್ಯವೆಂದಾದರೆ ಆ ಅಧಿಕಾರಿಗಳ ವಿರುದ್ಧ ಸೂಕ್ತ ಕ್ರಮ ತೆಗೆದುಕೊಳ್ಳುವುದೊಂದೇ ಉದ್ದೇಶದಿಂದ ಸರಕಾರ ಈ ಕೇಸಿನಲ್ಲಿ ಅಪೀಲು ಮಾಡಿದೆ. ಮ್ಯಾಜಿಸ್ಟ್ರೇಟರು ಕೆಲವು ಟೀಕೆಗಳನ್ನು ಮಾಡಿದ್ದಾರೆ. ಅವರು ಮಾಡಿದ ಟೀಕೆಗಳು ಸರಿಯೋ ಅಥವ ಅಲ್ಲವೋ ಎಂಬುದನ್ನು ನಾವು ತಿಳಿಯಬೇಕಾಗಿದೆ. ಆದ್ದರಿಂದ ನಾವು ಅಪೀಲಿಗೆ ಹೋದೆವು. ಕೋರ್ಟು ಅಪೀಲನ್ನು ಸ್ವೀಕರಿಸಲಿಲ್ಲ. ಅದು ಸರಕಾರ ಮತ್ತು ಸಂಬಂಧಿಸಿದವ್ಯಕ್ತಿಗಳ ವಿರುದ್ಧ ನಿರ್ಣಯ ಕೊಟ್ಟಿತು. ಇಲಾಖೆಯು ಈ ವಿಷಯವನ್ನು ಪರಿಶೀಲಿಸುತ್ತಿದೆ.

* ಶ್ರೀ ಕೆ. ಪುಟ್ಟಸ್ವಾಮಿ : ಅವರ ಟೀಕೆಗಳು ಸರಕಾರದ ವಿರುದ್ಧವೋ ಅಥವಾ ಪೋಲೀಸರ ವಿರುದ್ಧವೋ?

* ಶ್ರೀ ಬಿ.ಡಿ. ಜತ್ತಿ : ಟೀಕೆಗಳು ಶೋಧ ಮಾಡಿದ ಪೋಲೀಸ್ ಅಧಿಕಾರಿಗಳ ವಿರುದ್ಧವಾಗಿವೆ. ಆದಕ್ಕೆಂದೇ ನಾವು ಟೀಕೆಗಳು ಸರಿಯೇ ಎಂದು ತಿಳಿದುಕೊಳ್ಳಬೇಕಾಗಿತ್ತು. ಒಂದು ವೇಳೆ ನಾವು ಟೀಕೆಗಳನ್ನು ಅಳಿಸಿ ಹಾಕಿಸಿದ್ದರೆ ಅನಂತರ ನಾವು ಪೋಲೀಸರ ವಿರುದ್ಧಕ್ರಮ ತೆಗೆದುಕೊಳ್ಳುವ ಇಚ್ಛೆ ಇರಲಿಲ್ಲ. ಅಪೀಲು ತಿರಸ್ಕೃತವಾದರೆ, ಪೊಲೀಸ್ ಅಧಿಕಾರಿಗಳ ವಿರುದ್ಧ ಏನಾದರೂ ಕ್ರಮ ತೆಗೆದುಕೊಳ್ಳಬೇಕಾಗುತ್ತದೆ. ಅದನ್ನೇ ಹೈಕೋರ್ಟಿನ ಮುಂದೆ ಹೀಗೆ ಸ್ಪಷ್ಟವಾಗಿ ಹೇಳಿದ್ದೆವು. "ಆರೋಪಿ ನಿರ್ದೋಷಿಯಾಗುತ್ತಾನೋ ಅಥವಾ ಶಿಕ್ಷೆಗೊಳಪಡುತ್ತಾನೋ ಎಂಬ ಬಗ್ಗೆ ಸರಕಾರಕ್ಕೆ ಆಸ್ಥೆ ಇಲ್ಲ. ಈ ಕೇಸನ್ನು ಶೋಧಿಸಿದ ಪೋಲೀಸ್ ಅಧಿಕಾರಿಗಳ ವಿಷಯದಲ್ಲಿ ಮಾಡಿದ ಟೀಕೆಗಳ ಸತ್ಯಾಸತ್ಯೆಯ ಬಗ್ಗೆ ಸರಕಾರಕ್ಕೆ ಆಸ್ಥೆ ಇದೆ ಎಂಬುದನ್ನು ಹೈಕೋರ್ಟಿನ ಮುಂದೆ ಸ್ಪಷ್ಟವಾಗಿ ಹೇಳಬೇಕೆಂದು ಸೂಚಿಸಲಾಗಿತ್ತು." ಇದುವೆ ಹೈಕೋರ್ಟಿನ ಮುಂದಿನ ನಮ್ಮ ಅಪೀಲಾಗಿತ್ತು.

* ಶ್ರೀ ಕೆ. ಪುಟ್ಟಸ್ವಾಮಿ : ಕೆಳಗಿನ ಕೋರ್ಟಿನ ತೀರ್ಪಿನಿಂದ ನಿಮಗೆ ನಂಬಿಕೆಯಾಗಿರಲಿಲ್ಲವೆ?

* ಶ್ರೀ ಬಿ.ಡಿ. ಜತ್ತಿ : ಕೋರ್ಟು, ಪೋಲೀಸ್ ಅಧಿಕಾರಿಗಳ ವಿರುದ್ಧ ಮಾಡಿದ ಟೀಕೆಗಳ ಬಗ್ಗೆಯಷ್ಟೇ ನಾವು ಸಂಬಂಧಪಟ್ಟಿದ್ದೆವು. ಅವುಗಳು ಸರಿಯೇ ಅರ್ಹವಾದುವುಗಳೇ ಅಥವಾ ಅಲ್ಲವೇ ಎಂಬುದನ್ನು ನಾವು ತಿಳಿಯ ಬಯಸಿದ್ದೆವು. ಆದ್ದರಿಂದ ನಾವು ಅಪೀಲಿಗೆ ಹೋದೆವು. ಅದರಲ್ಲಿ ಒಬ್ಬ ಪೋಲೀಸ್ ಅಧಿಕಾರಿಯ ಉಲ್ಲೇಖವಿತ್ತು. ನಾವು ಕೇವಲ ಪೋಲೀಸ್ ಇಲಾಖೆಯ ಬಗ್ಗೆ ಆಸಕ್ತಿ ಹೊಂದಿದ್ದೆವು.

ಪೋಲೀಸ್ ಇನ್‌ಸ್ಪೆಕ್ಟರ್ ಎಂದು ಕೆಲಸ ಮಾಡುತ್ತಿದ್ದ ಒಬ್ಬ ಪೊಲೀಸ್ ಅಧಿಕಾರಿಯ ಉಲ್ಲೇಖ ಮಾಡಲಾಗಿತ್ತು. 1958 ರ ನವಂಬರಿನಲ್ಲಿ ಬೆಳಗಾವಿ ಮತ್ತು ಬಿಜಾಪುರಗಳಲ್ಲಿ ಕಾನೂನು ಬಾಹಿರವಾಗಿ ಹೊಂದಿದ ಆಯುಧ ಮತ್ತು ಮಾರಕಾಸ್ತ್ರಗಳನ್ನು ರಿಕವರಿ ಮಾಡಲು ವಿಶೇಷ ಕರ್ತವ್ಯದ ಮೇಲೆ ನೇಮಿಸಲಾಗಿತ್ತು. ಜುಲೈ 1960 ರ ವರೆಗೆ ಅವರು ಲಾಯಸನ್ಸ ಇಲ್ಲದ ಆಯುಧಗಳನ್ನು ಮತ್ತು ಬಹುದೊಡ್ಡ ಮೊತ್ತದ ಮದ್ದು ಗುಂಡುಗಳನ್ನು ರಿಕವರಿ ಮಾಡಿದ್ದರು. ತಮ್ಮ ಜೀವನದ ಹಂಗು ತೊರೆದು ಶಾಂತಪ್ಪ ಚಡಚಣ ಎಂಬ ದರೋಡೆಖೋರನನ್ನು ಬಂಧಿಸುವಲ್ಲಿ ಯಶಸ್ವಿಯಾಗಿದ್ದರು. ಪೋಲೀಸ್ ಇಲಾಖೆಯಲ್ಲಿನ ಸೇವೆಯುದ್ದಕ್ಕೂ ಅವರು ಪ್ರಶಂಸಾರ್ಹ ಕಾರ್ಯ ಮಾಡಿದ್ದಾರೆ. 1954 ರಲ್ಲಿ ಇಂಡಿಯನ್ ಪೊಲೀಸ್ ಮೆಡಲ್, 1954 ರಲ್ಲಿ ಶೌರ್ಯ ಪದಕ 1959ರಲ್ಲಿ ಪ್ರಶಂಸಾರ್ಹ ಸೇವೆಗಾಗಿ ಪದಕಗಳನ್ನು ಪಡೆದಿದ್ದಾರೆ. ಪೋಲೀಸ್ ಇಲಾಖಾ ಮುಖ್ಯಸ್ಥರು ಮತ್ತು ಆ್ಯಂಟಿ ಕರಪ್ಶನ್ ನಿರ್ದೇಶಕರು ಶ್ರೀ ಕಲ್ಲೂರರಿಗೆ ಧಿಡೀರ್ ಬಡತಿ ನೀಡಲು ಶಿಫಾರಸು ಮಾಡಿದ್ದಾರೆ. ಅವರು ಅಂತರಾಜ್ಯ ಸಿನಿಯಾರಿಟಿ ಲಿಸ್ಟಿನಲ್ಲಿ ತುಂಬ ಕಿರಿಯರು. ಆದ್ದರಿಂದ ಅವರಿಗೆ ಹಾಗೆ ಧಿಡೀರ ಬಡತಿ ಕೊಡುವುದು ಸಾಧ್ಯವಿರಲಿಲ್ಲ. ಆದರೆ ಆ ಪ್ರದೇಶದಲ್ಲಿ ಇನ್ನಷ್ಟು ಅನಧಿಕೃತ ಆಯುಧಗಳು ಮತ್ತು ಮದ್ದುಗುಂಡುಗಳು ಇವೆಯೆಂದು ವಿಶ್ವಸನೀಯವಾಗಿ ತಿಳಿದು ಬಂದಾಗ ಸರಕಾರ ಒಂದು ವರುಷದ ಕಾಲ ಮಿತಿಯ ಮೇಲೆ ಅವರಿಗೆ ಡೆಪ್ಯೂಟಿ ಸುಪರಿಂಟೆಂಡ್

ಆಫ್ ಪೋಲೀಸ್ ಎಂದು ಬಡತಿ ಕೊಟ್ಟು ಅವರ ಸ್ಥಳದಲ್ಲೆ ಮುಂದುವರಿಸಬಹುದೆಂದು ನಿರ್ಣಯ ತೆಗೆದುಕೊಂಡಿತು. ಅಂದರೆ ಅಷ್ಟು ಸಮಯದಲ್ಲಿ ಅನಧಿಕೃತ ಆಯುಧ ಮತ್ತು ಮದ್ದು ಗುಂಡುಗಳನ್ನೆಲ್ಲ ರಿಕವರಿ ಮಾಡಬಹುದೆಂದು ನಾವು ಭಾವಿಸಿದೆವು. ಇದೊಂದೇ ಉದ್ದೇಶದಿಂದ ಕಾಲಮಿತಿಯ ಆಧಾರದ ಮೇಲೆ ಅವರನ್ನು ಡಿ.ಎಸ್.ಪಿ. ಎಂದು ಇಡಲಾಗಿದೆ.

ಗೌರಿಬಿದನೂರಿನ ಒಂದು ಕೇಸಿನ ಬಗ್ಗೆ ಉಲ್ಲೇಖಿಸಲಾಯಿತು. ಅಲ್ಲಿಯ ಒಬ್ಬ ವ್ಯಾಪಾರಿಯು ಕೋರ್ಟಿನ ಎದುರು ಸಾಕ್ಷಿದಾರನಾಗಿ ಹಾಜರಾಗಿದ್ದನು. ಅವನಿಗೆ ಸಮನ್ಸಗಳನ್ನು ಕಳಿಸಲಾಗಿತ್ತು. ಆದರೆ ಸಮನ್ಸ ತೆಗೆದುಕೊಳ್ಳಲಿಲ್ಲ. ಕೋರ್ಟು ಕಳಿಸಿದಾಗಲೂ ಆತ ತೆಗೆದುಕೊಳ್ಳಲಿಲ್ಲ. ಅನಂತರ ಸಬ್ ಇನ್‌ಸ್ಪೆಕ್ಟರನು ವಿಷಯವನ್ನು ಕೋರ್ಟಿಗೆ ತಿಳಿಸಿದನು. ಕೋರ್ಟು ಜಾಮೀನು ರಹಿತ ವಾರಂಟನ್ನು 16-09-1960 ರಂದು ಹೊರಡಿಸಿ ವ್ಯಾಪಾರಿಯನ್ನು 19-09-1960 ರಂದು ಹಾಜರು ಪಡಿಸಲು ಆದೇಶಿಸಿತು. ಸಬ್ ಇನ್‌ಸ್ಪೆಕ್ಟರನು ವ್ಯಾಪಾರಿಯ ಅಂಗಡಿಗೆ ಹೋದನು. ಅಂಗಡಿಯಲ್ಲಿ ಆತನ ಮೇಲೆ ಸಮನ್ಸ ಸರ್ವ ಮಾಡಲು ಹೋದನು. ಆಗಲೂ ಕೂಡ ವ್ಯಾಪಾರಿಯ ಸಮನ್ಸನ್ನು ತೆಗೆದುಕೊಳ್ಳಲಿಲ್ಲ. ಆ ಸಮಯದಲ್ಲಿ ಆತನೊಬ್ಬನೆ ಇರಲಿಲ್ಲ. ಬೇರೆ ಜನರೂ ಇದ್ದರು. ಅಂಗಡಿಯಲ್ಲಿ ತುಸು ಗೊಂದಲ ಎದ್ದಿತು. ಆಗ ಆತನನ್ನು ಬಂಧಿಸದೆ ಸುರಕ್ಷಿತವಾಗಿ ಅವನನ್ನು ಕರೆದುಕೊಂಡು ಹೋಗುವುದು ಸಾಧ್ಯವಿಲ್ಲವೆಂದು ಸಬ್ ಇನ್‌ಸ್ಪೆಕ್ಟರನು ಕೈಗೆ ಬೇಡಿ ಹಾಕಿದನು. ಆದ್ದರಿಂದ ಆತನ ಕೈಗಳಿಗೆ ಬೇಡಿಗಳನ್ನು ಹಾಕಿ ಪೋಲೀಸ್ ಸ್ಟೇಷನ್ನಿಗೆ ಕರೆದುಕೊಂಡು ಹೋದನು. ಅನಂತರ ಪೋಲೀಸ್ ಸ್ಟೇಷನ್ನಿಗೆ ಮತ್ತು ಸರಕಾರಕ್ಕೆ ಕೆಲವು ಮನವಿಗಳನ್ನು ಸಲ್ಲಿಸಲಾಯಿತು. ನನಗೆ ದೊರೆತ ಮಾಹಿತಿಯಂತೆ ಬೇಡಿ ಹಾಕಿದ ಪೋಲೀಸ್ ಅಧಿಕಾರಿಯು, ತನ್ನ ಅಧಿಕಾರ ಮೀರಿ ವರ್ತಿಸಿದ್ದಾನೆಂದು ಕಾಣುತ್ತದೆ. ಸಂದರ್ಭವನ್ನು ಗಮನಿಸಿದರೆ ಸರಕಾರಕ್ಕೆ ಹಾಗೆ ಅನಿಸುತ್ತದೆ. ವಿಷಯವನ್ನು ಪರಿಶೀಲಿಸಲು ಪೋಲೀಸ್ ಸುಪರಿಂಟೆಂಡೆಂಟರಿಗೆ ತಿಳಿಸಲಾಗಿದೆ. ಮತ್ತು ನಮಗೆ ಅನಿಸಿದ್ದು ಸರಿ ಎಂತಾದರೆ ಯಾವ ಕ್ರಮವನ್ನು ಕೈಕೊಳ್ಳಬೇಕೆಂದೂ ಕೇಳಲಾಗಿದೆ. ಇದು ವಸ್ತುಸ್ಥಿತಿ.

ಇನ್ನೊಂದು ಉಲ್ಲೇಖ ಶ್ರೀ ಎಸ್.ಎಲ್. ಪಾಟೀಲ ಎಂಬ ಒಬ್ಬರ ಕುರಿತು ಮಾಡಲಾಯಿತು. ಅಸಿಸ್ಟಂಟ್ ಕಮಿಷನರರಾಗಿದ್ದ ವಿರುದ್ಧ ಡಿಸಿಪ್ಲಿನರಿ ಕ್ರಮವನ್ನು ತೆಗೆದುಕೊಳ್ಳಬೇಕೆಂದು. ಶ್ರೀ ಎಸ್.ಎಲ್. ಪಾಟೀಲರು ಅಕ್ಟೋಬರ 1957 ರಿಂದ ಡಿಸೆಂಬರ್ 1957 ರ ವರೆಗೆ ಎಕ್ಸೈಜ ಕಮೀಷನರರ ಹೆಡ್‌ಕ್ವಾರ್ಟರ್ ಅಸಿಸ್ಟೆಂಟ್ ಆಗಿದ್ದರು. ಹೆಡ್‌ಕ್ವಾರ್ಟರ್ ಅಸಿಸ್ಟಂಟ ಹುದ್ದೆಯಿಂದಾಗಿ ಪ್ರೊವಿನ್ಸಿಯಲ್ ಗಾಂಜಾ ಸ್ಟೋರನ್ನು ನೋಡಿಕೊಳ್ಳುತ್ತಿದ್ದರು. ಜನವರಿ 1957 ರಲ್ಲಿ ಅವರು ಸ್ಟೇಟ ಹುಜೂರ ಟ್ರೇಜರಿಗೆ ಸಂಗ್ರಹವನ್ನು ಹಸ್ತಾಂತರಿಸುವಾಗ, 146.20 ಸೇರು ತೂಕದ 265 ಸಿ ಕ್ಲಾಸ್ ಗಾಂಜಾ ಕೇಕುಗಳು ಕಡಿಮೆ ಇದ್ದುದು ಪತ್ತೆಯಾಯಿತು. ವಿಚಾರಣೆಯ ನಂತರ ಶ್ರೀ ಪಾಟೀಲರು ತಾವು ಅಧಿಕಾರ ಪಡೆಯುವಾಗ ತೋರಿದ ನಿಷ್ಕಾಳಜಿಯಿಂದ ಹೀಗಾಗಿದೆ. ಆದ್ದರಿಂದ ಕೊರತೆ ಬಿದ್ದ ಗಾಂಜಾದ ಜವಾಬ್ದಾರಿ ಅವರದೇ ಎಂದು ವಿಚಾರಣಾ ಅಧಿಕಾರಿಗಳು ಅಭಿಪ್ರಾಯಪಟ್ಟರು.

ಅಧ್ಯಕ್ಷರೆ, ವಿವರವಾದ ಪರಿಶೀಲನೆ ಮತ್ತು ಲೋಕ ಸೇವಾ ಆಯುಕ್ತರೊಂದಿಗಿನ ಸಮಾಲೋಚನೆಯ ನಂತರ ಗಾಂಜಾದ ಬೆಲೆಯಾದ ರೂ. 511 ಮತ್ತು 87ನಯೆ ಪೈಸೆಗಳನ್ನು ಶ್ರೀ ಎಸ್.ಎಲ್. ಪಾಟೀಲರಿಂದ ರಿಕವರಿ ಮಾಡಿಕೊಳ್ಳಬೇಕೆಂದು ಸರಕಾರ ನಿರ್ಧರಿಸಿತು. ಸಂಬಂಧಿಸಿದ ವಿಧಾನಗಳನ್ನು ಅನುಸರಿಸಿ ದಿನಾಂಕ 6-3-1961 ರಂದು ಶ್ರೀ ಎಸ್.ಎಲ್. ಪಾಟೀಲರಿಂದ ರೂ. 511-87 ನಯೆ ಪೈಸೆಗಳನ್ನು ಮಾಸಿಕ ರೂ. 25 ರಂತೆ ರಿಕವರಿ ಮಾಡಿಕೊಳ್ಳಬೇಕೆಂದು ಆದೇಶ ನೀಡಿತು. ವಿಷಯಕ್ಕೆ ಸಂಬಂಧಿಸಿದಂತೆ ಇದು ವಸ್ತುಸ್ಥಿತಿ ಮತ್ತು ಅದರಲ್ಲಿ ಸಾವಿರಾರು - ಲಕ್ಷಾವಧಿ ರೂಪಾಯಿಗಳ ನಷ್ಟ ಉಂಟಾಗಿಲ್ಲ. ಹಣವನ್ನು ಅವರಿಂದ ರಿಕವರಿ ಮಾಡಿಕೊಳ್ಳಲಾಗುತ್ತದೆ ಮತ್ತು ಅವರು ಈಗ ಬೆಳಗಾವಿ ಜಿಲ್ಲೆಯ ಸಂಕೇಶ್ವರ ಸಕ್ಕರೆ ಕಾರಖಾನೆಯಲ್ಲಿ ಕೆಲಸ ಮಾಡುತ್ತಿದ್ದಾರೆ.

ಅಧ್ಯಕ್ಷರೆ, ಶ್ರೀ ಬಾಬಾ ತಂದೆ ಮಹಮ್ಮದ ಶರೀಫ ಎಂಬ ಒಬ್ಬರ ಕೇಸಿನ ಕುರಿತು ಉಲ್ಲೇಖಿಸಿದರು. ಈ ವಿಷಯದ ಕುರಿತು ಗೃಹ ಮಂತ್ರಿಗಳು ಆಗಲೆ ಉತ್ತರಿಸಿದ್ದಾರೆ. ವಿರೋಧ ಪಕ್ಷದ ಸದಸ್ಯರಲ್ಲಿಯ ಒಬ್ಬರು ಈ ಕುರಿತು ಒಂದು ನಿರ್ದಿಷ್ಟ ಅಂಶವನ್ನು ಹೇಳುತ್ತ, ಸಂಬಂಧಿಕರಿಗೆ ಆತನ ಶವವನ್ನು ಕೊಡಲಿಲ್ಲ ಎಂದು ಹೇಳಿದರು. ಅಧ್ಯಕ್ಷರೆ, ದಿನಾಂಕ 12-12-1960 ರಂದು ಸಬ್ ಡಿವಿಜನಲ್ ಮ್ಯಾಜಿಸ್ಟ್ರೇಟರು ಶವದ ಪಂಚನಾಮೆಯನ್ನು ಮಾಡಿದರು. ಸ್ವಾಭಾವಿಕ ಸಾವು ಎಂದು ಅವರು ಅಭಿಪ್ರಾಯಪಟ್ಟರು. ಆಘಾತದಿಂದಾದ ಸಾವು ಎಂದು ಮೆಡಿಕಲ್ ಆಫೀಸರರು ಅಭಿಪ್ರಾಯ ಹೇಳಿದರು. ಮರಣೋತ್ತರ ಪರೀಕ್ಷೆಯ ನಂತರ ಶವವನ್ನು ಸಂಬಂಧಿಕರಿಗೆ ಕೊಡಲಾಯಿತು. ಅವರು ಮೆರವಣಿಗೆಯಲ್ಲಿ ಶವವನ್ನು ಕೊಂಡೊಯ್ದರು. ಆದ್ದರಿಂದ ಶವವನ್ನು ಸಂಬಂಧಕರಿಗೆ ಕೊಡಲಿಲ್ಲ ಎಂದು ಹೇಳುವುದು ಸರಿಯಲ್ಲ.

ಭಟ್ಕಳ ಗೋಲಿಬಾರ ಪ್ರಕರಣದ ಬಗ್ಗೆ ಗೃಹ ಸಚಿವರು ಉತ್ತರಿಸಲು ಪ್ರಯತ್ನಿಸಿದ್ದಾರೆ. ಅಧ್ಯಕ್ಷರೆ, ಒಬ್ಬ ಸದಸ್ಯರು ಕೋರ್ಟಿಗೆ ಚಾರ್ಜಶೀಟ ಸಲ್ಲಿಸುವಲ್ಲಿ ಸರಕಾರ ತಡಮಾಡಿದೆ ಎಂದು ಹೇಳಿದರು. ವಸ್ತುಸ್ಥಿತಿ ಹೀಗಿದೆ. ಜಿಲ್ಲಾ ಮ್ಯಾಜಿಸ್ಟ್ರೇಟರು 9-6-1958 ರಂದು ವರದಿ ಮಾಡಿದರು. ಅದಕ್ಕನುಸಾರವಾಗಿ ಸರಕಾರವು ಬೆಳಗಾವಿ ಡಿವಿಜನ್ನಿನ ಡಿವಿಜನಲ್ ಕಮೀಷರರನ್ನು ಘಟನೆಯ ಬಗ್ಗೆ ವಿಚಾರಣೆ ಮಾಡಲು ಸರಕಾರ ನೇಮಿಸಿತು. ವರದಿ ಬಂದನಂತರ ಸರಕಾರವು ಸಂಬಂಧಿತ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ಮಾಡಲು ನಿರ್ದೇಶಿಸಿತು. ವಿಚಾರಣೆಯು ಒಬ್ಬ ಸಬ್ ಇನ್‌ಸ್ಪೆಕ್ಟರ್ ಮತ್ತು ಇಬ್ಬರು ಅವ್ವಲ್ ಕಾರಕೂನರ ಮೇಲೆ ಇತ್ತು. ಡಿವಿಜನಲ್ ಕಮೀಷನರರಿಂದ ವರದಿ ಬಂದಾಗ, ಒಬ್ಬ ಜುಡಿಶಿಯಲ್ ಆಫೀಸರರನ್ನು ನೇಮಿಸುವುದು ಉಚಿತವೆಂದು ನಮಗನಿಸಿತು. ಅದರಂತೆ ಹೈಕೋರ್ಟಿನ ಸಲಹೆ ಪಡೆದು ಈ ಜುಡಿಶಿಯಲ್ ಆಫೀಸರರನ್ನು ನೇಮಿಸಲಾಯಿತು. ಈ ಅಧಿಕಾರಿಯು

ನಿವೃತ್ತಿಯಾದ್ದರಿಂದ ವಿಚಾರಣೆಯು ಪೂರ್ಣಗೊಳ್ಳಲಿಲ್ಲ. ಮತ್ತೆ ನಾವು ಈ ವಿಚಾರಣೆಯನ್ನು ನಡೆಸಲು ಇನ್ನೊಬ್ಬ ವ್ಯಕ್ತಿಯನ್ನು ಸೂಚಿಸಲು ಹೈಕೋರ್ಟನ್ನು ಕೇಳಿದೆವು. ಹೈಕೋರ್ಟಿನ ಸಲಹೆಯ ಮೇರೆಗೆ ಮತ್ತೊಬ್ಬ ಸೆಶನ್ ಜಡ್ಜರನ್ನು ನೇಮಿಸಲಾಯಿತು. ಅಮಾನತಿನಲ್ಲಿಟ್ಟ ಮೂವರು ಅಧಿಕಾರಿಗಳ ಮರು ನೇಮಕಾತಿ ಮಾಡಬೇಕಾಯಿತು. ಯಾಕೆಂದರೆ ವಿಚಾರಣೆ ಪೂರ್ತಿಗೊಳಿಸಲು ಸಮಯದ ಅವಶ್ಯಕತೆ ಇತ್ತು. ಆದರೆ ವಿದ್ವತ್ ಮ್ಯಾಜಿಸ್ಟ್ರೇಟರು ಪ್ರಕರಣವನ್ನು ಮುಂದುವರಿಸಿ ಶೋಧನೆಯನ್ನು ಪೂರ್ತಿಗೊಳಿಸಲು ಅನುಮತಿ ನೀಡಲಿಲ್ಲ. ಅವರು ಸೆಕ್ಷನ್ 251 (a), (2) ಕ್ರಿಮಿನಲ್ ಪ್ರೊಸಿಜರ ಕೋಡ ಪ್ರಕಾರ ದಿನಾಂಕ 2-5-1959 ರಂದು ಪ್ರಕರಣವನ್ನು ಖುಲಾಸೆ ಮಾಡಿದರು. ಆದರಿಂದಾಗಿ ಪಬ್ಲಿಕ್ ಪ್ರಾಸಿಕ್ಯೂಟರರು ಸೆಶನ್ ಜಡ್ಜರ ಕೋರ್ಟಿನಲ್ಲಿ ರಿವಿಜನ್ ಪೆಟಿಶನ್ ಸಲ್ಲಿಸುವುದು ಅವಶ್ಯವಾಯಿತು. ಸೆಶನ್ ಜಡ್ಜರು ದಿನಾಂಕ : 22-7-1960 ರಂದು ಮ್ಯಾಜಿಸ್ಟ್ರೇಟರ ಆದೇಶವನ್ನು ವಜಾಮಾಡಿದ ಆದೇಶ ನೀಡಿದರು. ಆದ್ದರಿಂದ ಇಲ್ಲಿ ತಡವಾಯಿತು. ಪೋಲೀಸ ಅಧಿಕಾರಿಗಳು 26-10-1960 ರಂದು ಚಾರ್ಜಶೀಟ ಸಲ್ಲಿಸಿದರು. ತಡವಾದುದಕ್ಕೆ ಇದು ಕಾರಣವಾಯಿತು.

ಅಧ್ಯಕ್ಷರೆ, ಜುಡಿಶಿಯಲ್ ಆಫೀಸರರ ನೇಮಕಾತಿಯ ಬಗ್ಗೆ ಸನ್ಮಾನ್ಯ ಲೋಕಲ್ ಸೆಲ್ಫ ಗವರ್ನಮೆಂಟ ಸಚಿವರು ಉತ್ತರ ಕೊಟ್ಟಿದ್ದಾರೆ. ಜುಡಿಶಿಯಲ್ ಆಫೀಸರರಲ್ಲಿಯ ಕೆಲವರನ್ನು ಸುಪರಸೀಡ ಮಾಡಬೇಕಾದರೆ ಹೈಕೋರ್ಟಿಗೆ ಬರೆಯಬೇಕೆಂಬುದು ಸರಕಾರದ ತಿಳುವಳಿಕೆ ಎಂಬುದನ್ನು ಅವರು ಸ್ಪಷ್ಟವಾಗಿ ಹೇಳಿದ್ದಾರೆ. ಈ ಬಗ್ಗೆ ಹೈಕೋರ್ಟು ತನ್ನ ಅಭಿಪ್ರಾಯಗಳನ್ನು ತಿಳಿಸಲು ಯೋಗ್ಯವಾಗಿದೆ. ಯಾಕೆಂದರೆ, ಅವರು ಕೋರ್ಟುಗಳ ಇನಸ್ಪೆಕ್ಷನ್ನ ಮಾಡುವರಲ್ಲದೆ, ಈ ಜುಡಿಶಿಯಲ್ ಅಧಿಕಾರಿಗಳ ಕೆಲಸವನ್ನು ಬಲ್ಲರು. ಸದ್ಯಕ್ಕೆ ಅವರಿಗೆ ಬಡತಿ ನೀಡಲು ಸಾಧ್ಯವಿಲ್ಲವೆಂದು ಅವರು ಹೇಳಿದರು. ಅವರನ್ನು ಮೊದಲಿದ್ದ ಸ್ಥಳದಲ್ಲಿಯೆ ಇಡಿ ಎಂದರು. ಅದಕ್ಕೆ ನಾವು ಒಪ್ಪಿ ಅವರನ್ನು ಹಿಂದಕ್ಕೆ ಕರೆದೆವು.

ಮೈಸೂರು ರಾಜ್ಯದಲ್ಲಿಯ ಕೈಗಾರಿಕಾ ವಸಾಹತುಗಳ ಬಗ್ಗೆ ಶ್ರೀ ಜೆ.ಬಿ. ಮಲ್ಲಾರಾಧ್ಯರು ಉಲ್ಲೇಖಿಸಿದರು. ಕೇವಲ ಎಂಟು ವಸಾಹತುಗಳಿವೆಯೆಂದೂ ಮತ್ತು ಅವುಗಳು ಪೂರ್ತಿಯಾಗಲು 10 ವರುಷಗಳು ಬೇಕಾಗಬಹುದೆಂದರು. ಅದು ಸರಿಯಲ್ಲ. ಅಧ್ಯಕ್ಷರೆ, ನಾವು ಹತ್ತು ವರುಷಗಳನ್ನು ತೆಗೆದುಕೊಳ್ಳುವುದಿಲ್ಲ. ಮೂರು ಔದ್ಯೋಗಿಕ ವಸಾಹತುಗಳು, ಬೆಂಗಳೂರು ಹುಬ್ಬಳ್ಳಿ ಮತ್ತು ಬಹುತೇಕ ಗುಲಬರ್ಗಾ ವಸಾಹತುಗಳು 31-3-1961 ರ ಹೊತ್ತಿಗೆ ಪೂರ್ತಿಯಾಗುತ್ತವೆ. ಉಳಿದ ಐದು ವಸಾಹತುಗಳೂ ಕಟ್ಟೋಣದಲ್ಲಿವೆ. ಬಹುಶಃ ಐದಾರು ಅಥವಾ ಒಂಭತ್ತು ತಿಂಗಳುಗಳಲ್ಲಿ ಎಲ್ಲ ಐದೂ ವಸಾಹತುಗಳ ಕೆಲಸ ಪೂರ್ತಿಯಾಗುತ್ತದೆಂದು ನಾನು ಭಾವಿಸುವೆ.

ಮತ್ತೆ ಸದಸ್ಯರು ಮೈಸೂರು ಸರಕಾರವು ಸ್ಮಾಲ್ ಸ್ಕೇಲ ಬೈಸಿಕಲ್ ಜನರಿಗೆ ಮೈಸೂರಿನ ಇಂಡಸ್ಟ್ರಿಯಲ್ ಇಸ್ಟೇಟಿನಲ್ಲಿ ಕೆಲವು ಶೆಡ್ಡುಗಳನ್ನು ಕೊಟ್ಟಿದ್ದಾರೆಂದು ಅವರು ಪ್ರತ್ಯೇಕವಾಗಿ ಹೇಳಿದ್ದಾರೆ. ಅಧ್ಯಕ್ಷರೇ, ಈ ಸಭೆಗೆ ನಾನು ನಿಜ ಸ್ಥಿತಿಯನ್ನು ಕೊಡಬಯಸುವೆ. ಮೈಸೂರು ಇಂಡಸ್ಟ್ರಿಯಲ್ ಇಸ್ಟೇಟಿನಲ್ಲಿ 16 ಶೆಡ್ಡುಗಳಿವೆ. ಸಾಹಸಿ ಉದ್ಯಮಿಗಳಿಂದ ಅರ್ಜಿಗಳನ್ನು ಪಡೆಯಲು ನಾವು ಪ್ರಯತ್ನಿಸಿದೆವು. ಆದರೆ ಅಲ್ಲಿ ಬೇಕಾಗಬಹುದಾದಂಥ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಪ್ರಾರಂಭಿಸುವ ಉದ್ಯಮಿಗಳು ಸಿಗಲಿಲ್ಲ. ಸಣ್ಣ ಪ್ರಮಾಣದ ಕೈಗಾರಿಕೆಯನ್ನು ಪ್ರಾರಂಭಿಸಲು ಮೈಸೂರು ಎರಡು ಶೆಡ್ಡುಗಳನ್ನು ತೆಗೆದುಕೊಂಡಿತು. ಭಾರತ ಸರಕಾರವು ಅದಕ್ಕೆಂದೆ ಎರಡು ಶೆಡ್ಡುಗಳನ್ನು ಕೊಂಡಿತು. ಹೀಗೆ ಒಟ್ಟು ಈಗ ನಾಲ್ಕು ಶೆಡ್ಡುಗಳು ಉಪಯೋಗವಾಗುತ್ತಿವೆ. ಉಳಿದ ಶೆಡ್ಡುಗಳು ಉಪಯೋಗ ಆಗುತ್ತಿಲ್ಲ. ಈ ಮಧ್ಯ ಈ ಆಯಡಿಯಲ್ ಜಾವಾ ಕಂಪನಿಯವರು ತಮ್ಮ ಉದ್ಯಮವನ್ನು ಪ್ರಾರಂಭಿಸಬೇಕೆಂದರು. ಮತ್ತು ಅವರಿಗೆ ಶೆಡ್ಡುಗಳ ಅತ್ಯಗತ್ಯವಾಗಿದ್ದುವು. ಮೈಸೂರು ಸರಕಾರವು ಭಾರತ ಸರಕಾರದೊಂದಿಗೆ ಅದರಲ್ಲೂ ಶ್ರೀ ಮನುಭಾಯಿ ಶಹಾರೊಂದಿಗೆ ಸಮಾಲೋಚಿಸಿ ಇಂಡಸ್ಟ್ರಿಯಲ್ ಇಸ್ಟೇಟನ ಹತ್ತಿರ ಒಂದು ಶೆಡ್‌ನ್ನು ಕಟ್ಟಲು ನಿರ್ಧರಿಸಿತು. ಮೋಟರ ಬೈಸಿಕಲ್ ಮತ್ತು ಸ್ಕೂಟರಗಳನ್ನು ತಯಾರಿಸಲು ಮುಂದೆ ಬಂದ ಇದೊಂದು ಸಣ್ಣ ಪ್ರಮಾಣದ ಉದ್ಯಮವೇ ಆಗಿದೆ. ಮತ್ತು ಅದಕ್ಕೂ - ಸ್ಮಾಲ್ ಸ್ಕೇಲ ಇಂಡಸ್ಟ್ರಿಜ ಶೆಡ್ಡುಗಳಿಗೂ ಯಾವ ಸಂಬಂಧವೂ ಇಲ್ಲ. ಆದರೆ ಅಲ್ಲಿ ಯಾರೂ ಉಪಯೋಗಿಸದ ಉಳಿದ ಶೆಡ್ಡುಗಳಿವೆ ಅವುಗಳನ್ನು ಖಾಲಿ ಇಡುವುದಕ್ಕಿಂತ ನಾವು ಒಂದಿಷ್ಟು ಬಾಡಿಗೆಯನ್ನಾದರೂ ಪಡೆಯಬೇಕು ಎಂದು ಯೋಚಿಸಿ, ನಾಲ್ಕೋ ಅಥವ ಐದು ಶೆಡ್ಡುಗಳನ್ನು ತಾತ್ಪೂರ್ತಿಕವಾಗಿ ಆಯಡಿಯಲ್ ಜಾವಾ ಕಂಪನಿಗೆ ಉಪಯೋಗಿಸಲು ನಾವು ಕೊಟ್ಟಿದ್ದೇವೆ. ಅದಕ್ಕಿಂತ ಅಧಿಕ ಅಲ್ಲೇನಿಲ್ಲ. ಆದ್ದರಿಂದ ನಾವು ಯಾವ ತಪ್ಪನ್ನು ಮಾಡಿಲ್ಲ. ಪ್ರತಿಯಾಗಿ ಅಷ್ಟೊಂದು ಹಣ ಖರ್ಚು ಮಾಡಿ ಕಟ್ಟಿದ ಶೆಡ್ಡುಗಳನ್ನು ಬಳಕೆ ಮಾಡುತ್ತಿದ್ದೇವೆ. ಆದ್ದರಿಂದ ಶ್ರೀ ಜೇ.ಬಿ. ಮಲ್ಲಾರಾಧ್ಯರು ಮಾಡಿದ ಆರೋಪಗಳು ಸರಿಯಲ್ಲ.

ಶ್ರೀ ಮಲ್ಲಾರಾಧ್ಯರು, ಸ್ಮಾಲ್ ಸ್ಕೇಲ ಕಾರ್ಪೋರೇಷನ್ನು ಶೆಡ್ಡುಗಳನ್ನು ನಿರ್ಮಿಸುವ ಔಚಿತ್ಯವನ್ನೂ ಪ್ರಶ್ನಿಸಿದ್ದಾರೆ. ಹೊಸ ಉದ್ಯಮಿಗಳು ಶೆಡ್ಡುಗಳನ್ನು ಕಟ್ಟಬೇಕೆಂದರೆ, ಮತ್ತು ಅವುಗಳನ್ನು ನಿರ್ಮಿಸಲು ಕಾರ್ಪೋರೇಷನ್ನಿಗೆ ಸಾಧ್ಯವಾದರೆ, ಕಟ್ಟಬಾರದು ಎನ್ನುವುದು ಅವರ ಅವಿವೇಕವೆನಿಸುತ್ತದೆ. ನಿಜವಾಗಿ ಅದೊಂದು ಒಳ್ಳೆಯ ಕೆಲಸ ಅವರು ಮುಂದೆ ಬಂದರು. ಇಪ್ಪತ್ತು ದಿನಗಳಲ್ಲಿ ಶೆಡ್ಡುಗಳನ್ನು ಕಟ್ಟಿದ್ದಕ್ಕಾಗಿ ನಾವು ಕಾರ್ಪೋರೇಷನ್ನಿಗೆ ಪ್ರಶಸ್ತಿಕೊಡಬೇಕು. ಯಾಕೆಂದರೆ ಅವರು ಶೆಡ್ಡುಗಳನ್ನು ಕಟ್ಟಿದರಾದ್ದರಿಂದ ಜಾವಾ ಫ್ಯಾಕ್ಟರಿ ಪ್ರಾರಂಭವಾಯಿತು. ನಾವು ಹೆಚ್ಚು - ಹೆಚ್ಚು ಸಣ್ಣ ಪ್ರಮಾಣದ ಉದ್ಯಮಗಳನ್ನು ಪ್ರಾರಂಭಿಸಲು ಬಯಸುತ್ತೇವೆ. ಮತ್ತು ಈ ಉದ್ದೇಶಕ್ಕಾಗಿ ಕಾರ್ಪೋರೇಷನ್ನು ಶೆಡ್ಡುಗಳನ್ನು ಕಟ್ಟುವುದರೊಂದಿಗೆ ಸಹಾಯ ಮಾಡುತ್ತಿದೆ. ನಾವು ಅವರಿಗೆ ಪ್ರೋತ್ಸಾಹ ಕೊಡಬೇಕು.

ಸರಕಾರಿ ಉದ್ಯಮಗಳು ಚೆನ್ನಾಗಿ ಕೆಲಸ ಮಾಡುತ್ತಿವೆಯೇ ಎಂಬ ಕುರಿತು ಅಭ್ಯಾಸ ಮಾಡಲು ಒಂದು ಸಮಿತಿ ಇರಬೇಕೆಂದೂ ಕೂಡ ಶ್ರೀ ಮಲ್ಲಾರಾಧ್ಯರು ಹೇಳಿದರು. ಅಧ್ಯಕ್ಷರೆ, ಅವರು ರಾಜ್ಯ ಉದ್ಯಮ ಅಭಿವೃದ್ಧಿ ಮಂಡಳಿಯ ಸದಸ್ಯರಾಗಿದ್ದಾರೆ. ಉದ್ಯಮಕ್ಕೆ ಸಂಬಂಧ ಪಟ್ಟಂತೆ ಅದರಲ್ಲೊಂದು ಬೋರ್ಡ್ ಆಫ್ ಮ್ಯಾನೇಜಮೆಂಟ್ ಇದ್ದು ಅದರ ಚೇರಮನ್ನರಾಗಿ ಮುಖ್ಯಮಂತ್ರಿಗಳೇ ಇರುತ್ತಾರೆ ಎಂಬುದು ಅವರಿಗೆ ಗೊತ್ತಿದೆ. ಮತ್ತು ಅರ್ಥಮಂತ್ರಿಗಳು ವೈಸ್-ಚೇರಮನ್ನರಾಗಿಯೂ, ಅಧಿಕಾರಿಗಳು- ಅಧಿಕಾರೇತರರು ಅದರ ಸದಸ್ಯರಾಗಿರುತ್ತಾರೆ. ಸರಕಾರಿ ಉದ್ಯಮಗಳ ಕೆಲಸವನ್ನು ಈ ಬೋರ್ಡು ಆಗಲೇ ನೋಡುತ್ತಿರುತ್ತದೆ. ಅದರಂತೆ, ಮೈಸೂರು ಆಯರ್ನ ಆ್ಯಂಡ ಸ್ಟೀಲ, ಕೋಲಾರ ಗೋಲ್ಡ ಮೈನ್ಸಗಳನ್ನು ನೋಡಲು ಕೂಡ ಒಂದು ಬೋರ್ಡ ಇದೆ ಹೀಗೆ ಈ ... ವಸ್ಥೆಗಳಿದ್ದಾಗ್ಯೂ ಬೇರೊಂದು ಸಮಿತಿಯ ಅವಶ್ಯಕತೆ ಇದೆಯೇ? ಈ ಮನೆಯ ಮತ್ತು ಮೇಲ್ಮನೆಯ ಸನ್ಮಾನ್ಯ ಸದಸ್ಯರು ಈ ಉದ್ಯಮಗಳ ಕಾರ್ಯವನ್ನು ಅಭ್ಯಸಿಸಲು ಮತ್ತೊಂದು ಸಮಿತಿಯನ್ನು ನಿಯಮಿಸಬೇಕು ಎಂದು ವಿನಂತಿಸಿಕೊಂಡಾಗ, ಅದು ಅನವಶ್ಯಕವೆಂದೂ, ಆಗಲೇ ಉನ್ನತ ಮಟ್ಟದ ಸಮಿತಿಯೊಂದು ಆ ಕೆಲಸವನ್ನು ಮಾಡುತ್ತಿದೆ ಎಂದು ನನಗನಿಸಿತು. ಶ್ರೀ ಮಲ್ಲಾರಾಧ್ಯರಿಗೆ ಅಸಮಾಧಾನವಿದ್ದರೆ, ಅವರು ಹಾಗೆಯೇ ಇಂಥ ಸೂಚನೆಗಳನ್ನು ಕೊಡುತ್ತ ಹೋಗಲಿ.

ಅಧ್ಯಕ್ಷರೆ, ಮೈಸೂರು ಸರಕಾರವು ಇಂಡಸ್ಟ್ರಿಗಳನ್ನು ವಿತರಿಸುವಾಗ ಸ್ಥಳೀಯ ಜನರನ್ನು ನಿರ್ಲಕ್ಷಿಸುತ್ತಿದೆ ಎಂದು ಶ್ರೀ ಮಲ್ಲಾರಾಧ್ಯರು ಟೀಕೆ ಮಾಡುತ್ತಲೇ ಇದ್ದಾರೆ. ಅಂಥ ಹೇಳಿಕೆಗಳು ಸಂಪೂರ್ಣ ಅಗತ್ಯವಾಗಿವೆ. ಬಹುಶಃ ಅವರು ಒಬ್ಬ ವ್ಯಕ್ತಿಯ, ಸುಂದರ ಮೂರ್ತಿಯ ಪ್ರಕರಣವನ್ನು ದೃಷ್ಟಿಯಲ್ಲಿಟ್ಟುಕೊಂಡಿರಬೇಕು. ಅವರು ಈ ಕೇಸಿನ ಬಗ್ಗೆ ಉಲ್ಲೇಖಿಸಿದರು. ಮತ್ತು ಈ ಸದ್ಗೃಹಸ್ಥರು 1949 ರಿಂದ ಕಾಗದದ ಕಾರಖಾನೆಗಾಗಿ ಲೈಸನ್ಸನ್ನು ಪಡೆಯಲು ಪ್ರಯತ್ನಿಸುತ್ತಿರುವುದಾಗಿ ಅವರು ಹೇಳಿದರು. ನಾನು ಇಡೀ ಕೇಸನ್ನು ನೋಡಿದೆ. ಈ ವ್ಯಕ್ತಿಯಲ್ಲಿ ಅದೇನೋ ಸ್ವಾಭಾವಿಕವಾದ ದೋಷ ಇದೆಯೆಂದು ನನಗೆ ಅನಿಸಿತು. ಯಾಕೆಂದರೆ ಕಳೆದ 30 ವರುಷಗಳಿಂದ ಲೈಸೆನ್ಸ್ ಪಡೆಯಲು ಪ್ರಯತ್ನಿಸುತ್ತಿರುವ ಒಬ್ಬ ವ್ಯಕ್ತಿ ಫೇಲ ಆಗಬಾರದು. ಮೈಸೂರು ಸರಕಾರವನ್ನು ದೂಷಿಸಬಾರದು. ಆದರೆ ಸಂಬಂಧ ಪಟ್ಟ ವ್ಯಕ್ತಿಯನ್ನು ದೂಷಿಸಬೇಕು. ಈ ವಿಶೇಷ ಲೈಸನ್ಸ ಬಗ್ಗೆ ಹೇಳುವುದಾದರೆ ಕಾಗದ ಕಾರಖಾನೆಯನ್ನು ಪ್ರಾರಂಭಿಸಲು ಮೈಸೂರು ಸರಕಾರಕ್ಕೆ 18 ಅರ್ಜಿಗಳು ಬಂದಿವೆ. ಇಲಾಖೆಯು ಈ ಎಲ್ಲ ಅರ್ಜಿಗಳನ್ನು ಪರಿಶೀಲಿಸಿತು ಮತ್ತು ಮೂರು ಕೇಸುಗಳಲ್ಲಿ ಶಿಫಾರಸು ಮಾಡುವಂತೆ ನಿರ್ಧರಿಸಿತು. ಮೂರರಲ್ಲಿ ಸುಂದರ ಮೂರ್ತಿ ಕೇಸು ಒಂದಾಗಿತ್ತು. ಮತ್ತೊಬ್ಬರು ಗೋಪಾಲನ್, ಮೂರನೆಯವರು ನ್ಯಾಶನಲ್ ರೇಯಾನ್‌ದವರಾಗಿದ್ದರು. ನಾವು ಮೂರು ಅರ್ಜಿಗಳನ್ನು ಯಾರ ಬಗ್ಗೆಯೂ ಏನನ್ನೂ ಹೇಳದೆ ಕಳಿಸಿದೆವು. ಅನಂತರ ಭಾರತ ಸರಕಾರದ ಸೆಂಟ್ರಲ್ ಲೈಸನ್ಸಿಂಗ ಕಮೀಟಿಯು ಈ ಅರ್ಜಿಗಳ ಅರ್ಹತೆಗಳನ್ನು ನೋಡಿತು. ಅದರ ಅನುಭವವನ್ನು ವಿಶೇಷವಾಗಿ ಮೈಸೂರು ರಾಜ್ಯದಲ್ಲಿ ಇದು ಹೊಸ ಉದ್ಯಮವಾದ್ದರಿಂದ

ಈ ಕ್ಷೇತ್ರದಲ್ಲಿಯ ಅವರ ಅನುಭವವನ್ನು ಲಕ್ಷಿಸಿ ಅವರು ಮೈಸೂರಿಗೆ 100 ಟನ್ ಪಲ್ಪ್‌ಗಳನ್ನು ಕೊಡಬೇಕೆಂದು ನಿರ್ಧರಿಸಿದರು. ಆ 100 ಟನ್ನುಗಳಲ್ಲಿ 60 ಟನ್ ಹೈಗ್ರೇಡ ಪಲ್ಪ ಅದರಲ್ಲಿ ರೆಯಾನನ್ನು ತಯಾರಿಸಬೇಕು ಮತ್ತು ಉಳಿದ 40 ಟನ್ನುಗಳನ್ನು ಗೋಪಾಲನ್ ಮತ್ತು ಸುಂದರಮೂರ್ತಿ ಮಧ್ಯ ಸರಿಯಾಗಿ ಹಂಚಬೇಕು ಎಂದರು. 60 ಟನ್ನಿನ ಲೈಸೆನ್ಸನ್ನು ನ್ಯಾಶನಲ್ ರೇಯಾನಿಗೆ ಕೊಡಲಾಯಿತು. ಮತ್ತು ಉಳಿದ 40 ಟನ್ನುಗಳಲ್ಲಿ 20 ಟನ್ನುಗಳನ್ನು ಗೋಪಾಲನ್‌ರಿಗೆ 20 ಟನ್ನುಗಳ ಲೈಸನ್ಸನ್ನು ಸುಂದರ ಮೂರ್ತಿಗೆ ಕೊಡಲಾಯಿತು. 40 ಟನ್ನುಗಳ ಇನ್‌ಫೀರಿಯರ ಗ್ರೇಡ ಪಲ್ಪಿನಲ್ಲಿ ಕಾಗದವನ್ನು ತಯಾರಿಸಬೇಕು. ಲೈಸನ್ಸನ್ನು ಕೊಡುವಾಗ ಅವರು ನ್ಯಾಷನಲ್ ರೇಯಾನದವರು ಕಳೆದ ಹಲವಾರು ವರುಷಗಳಿಂದ ಆ ಕ್ಷೇತ್ರದಲ್ಲಿದ್ದಾರೆಂದೂ ಉಳಿದ ವ್ಯಕ್ತಿಗಳಿಗೆ ಅನುಭವ ಇಲ್ಲವೆಂದು ಪ್ರತ್ಯೇಕವಾಗಿ ಉಲ್ಲೇಖಿಸಿದ್ದಾರೆ. ಆದ್ದರಿಂದ ಅವರು ನ್ಯಾಶನಲ್ ರೇಯಾನದೊಡನೆ ಪಾಲುದಾರಿಕೆ ಮಾಡಿಕೊಳ್ಳುವುದು ಉಚಿತವೆಂದು ಅವರು ಹೇಳಿದರು. ಮತ್ತು ಹಾಗೆ ಅವರು ಒಪ್ಪಂದ ಮಾಡಿಕೊಳ್ಳಬೇಕು ಎಂದರು. ಇದು ಅವರ ಸಲಹೆಯಾಗಿತ್ತು. ಸುಂದರ ಮೂರ್ತಿಯ ಪ್ರಕರಣವನ್ನು ಪ್ರತಿನಿಧಿಸುವ ಸನ್ಮಾನ್ಯ ಸದಸ್ಯರಿಗೆ ನನ್ನ ವಿನಂತಿ ಎಂದರೆ ಅವರು ಸಂಗತಿಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು ಎಂಬುದಾಗಿದೆ. ಸುಂದರಮೂರ್ತಿ ಹಗಲು-ರಾತ್ರಿ ಎನ್ನದೆ ಪತ್ರಗಳನ್ನು ಬರೆಯುತ್ತಲಿದ್ದಾರೆ. ಮತ್ತು ಒಂದೆರಡು ದಿನಗಳಲ್ಲಿ ಉತ್ತರವನ್ನು ಅಪೇಕ್ಷಿಸುತ್ತಿದ್ದಾರೆ. ಅವರು ಲಾಲ ಬಹದ್ದೂರ ಶಾಸ್ತ್ರಿಗಳಿಗೆ ಪತ್ರ ಬರೆಯುತ್ತಾರೆ ಮತ್ತು ಲಾಲ ಬಹಾದ್ದೂರ ಶಾಸ್ತ್ರಿಗಳು ಮೈಸೂರು ಸರಕಾರಕ್ಕೆ ಸುಂದರಮೂರ್ತಿಯ ಕೇಸನ್ನು ಶಿಫಾರಸು ಮಾಡುವಂತೆ ಆದೇಶ ನೀಡಬೇಕೆಂದು ಅಪೇಕ್ಷಿಸುತ್ತಾರೆ. ಈ ಸರಕಾರ ಸ್ಥಳೀಯರನ್ನು ಬೆಂಬಲಿಸುತ್ತಿದೆ ಎಂದು ನಾನು ಮತ್ತೊಮ್ಮೆ ಹೇಳಬಯಸುವೆ. ಅದು ಸ್ಥಳೀಯ ಜನರ ವಿರುದ್ಧ ಎಂದಿಗೂ ಇಲ್ಲ. ಆದರೆ ಸುಂದರ ಮೂರ್ತಿಗೆ ರೆಯಾನ ತಯಾರಿಕೆಯಲ್ಲಿ ಅನುಭವ ಇರದಿದ್ದರೆ, ಸೆಂಟ್ರಲ್ ಲೈಸನ್ಸಿಂಗ್ ಬೋರ್ಡನಿಂದ ಅವರಿಗೆ ಲಾಯಸನ್ಸ ಸಿಗುವ ಸಾಧ್ಯತೆ ಇಲ್ಲ. ಆದರೂ ಸುಂದರ ಮೂರ್ತಿ ಅಥವಾ ಗೋಪಾಲನ್ನರ ಬಗ್ಗೆ ನಾನು ಹೇಳಬೇಕೆಂದರೆ. 100 ಟನ್ನ ಶಕ್ತಿಯ ಕಾಗದ ಕಾರಖಾನೆಯನ್ನೆ ಅವರು ತೆರೆಯಬಯಸುವುದಾದರೆ, ಬಳ್ಳಾರಿ ಜಿಲ್ಲೆಯಲ್ಲಿ, ಅಲ್ಲಿ ಮೂರು-ನಾಲ್ಕು ಸಕ್ಕರೆ ಕಾರಖಾನೆಗಳಿವೆ. ಅಲ್ಲಿ ಬೇಕಿದ್ದರೆ ಈ ಇಬ್ಬರ ಕೇಸುಗಳನ್ನು ಜೊತೆಯಾಗಿ ಅಥವಾ ಪ್ರತ್ಯೇಕವಾಗಿ 100 ಟನ್ನ ಕಾಗದ ಕಾರಖಾನೆಯನ್ನು ಸ್ಥಾಪಿಸಲು ಸಿದ್ಧರಿದ್ದರೆ ಶಿಫಾರಸು ಮಾಡಲು ನಮಗೆ ಶಕ್ಯವಾಗಬಹುದು. ನನ್ನ ಸ್ನೇಹಿತರು, ಅವರನ್ನು ಸಮರ್ಥಿಸುತ್ತಿರುವ ಸನ್ಮಾನ್ಯ ಸದಸ್ಯರು ಜೊತೆಗೆ ಈ ದಿಶೆಯಲ್ಲಿ ಕಾರ್ಯಪ್ರವೃತ್ತರಾಗುವಂತೆ ಉಪದೇಶ ಮಾಡಬಹುದು. ಮೈಸೂರು ಸರಕಾರಕ್ಕೆ ಸಂಬಂಧ ಪಟ್ಟಂತೆ, ನಾವು ಶಿಫಾರಸು ಮಾಡಲು ಸಿದ್ಧರಿದ್ದೇವೆ. ಆದರೆ ಭಾರತ ಸರಕಾರ ಏನು ಮಾಡುತ್ತದೆ ಎಂಬ ಬಗ್ಗೆ ನನಗೆ ಗೊತ್ತಿಲ್ಲ ಒಬ್ಬ ವ್ಯಕ್ತಿಗೆ ಲೈಸನ್ಸನ್ನು ಕೊಟ್ಟರಾದರೆ ಅದನ್ನು ರದ್ದು ಮಾಡಲು ನಮಗೆ ಸಾಧ್ಯವಿಲ್ಲ. ಈ ವಿಷಯದಲ್ಲಿ ಸ್ಥಳೀಯರಾದ ಮೈಸೂರು ರಾಜ್ಯದ

ಶ್ರೀ ವಿಶ್ವನಾಥ ಎಂಬುವರು 100 ಟನ್ ರೆಯಾನ ಪಲ್ಪದ ಲೈಸನ್ಸನ್ನು ಪಡೆಯಲು ಸಾಧ್ಯವಾಯಿತೆಂಬುದನ್ನು ನಾನು ಈ ಸಭೆಗೆ ತಿಳಿಸಬಯಸುತ್ತೇನೆ. ಸ್ಥಳೀಯ ಜನರ ಬಗ್ಗೆ ಈ ಸರಕಾರಕ್ಕೆ ಪೂರ್ವಾಗ್ರಹವಿಲ್ಲ ಎಂಬುದನ್ನು ಇದು ತೋರಿಸುತ್ತದೆ.

ಮಾನ್ಯರೆ, ಮೈಸೂರು ರಾಜ್ಯ ಆಡಳಿತದ ಬಗ್ಗೆ ಗುರುತರ ಆಪಾದನೆಗಳನ್ನು ಮಾಡಲಾಗುತ್ತದೆ. ಅದು ಶೋಭೆ ತರುವಂಥದ್ದಲ್ಲ. ಕಳೆದ ಹಲವಾರು ವರುಷಗಳಿಂದ ಈ ಸರಕಾರ ತನ್ನ ಒಳ್ಳೆಯ ಆಡಳಿತದಿಂದಾಗಿ ಗುರುತಿಸಲ್ಪಟ್ಟಿದೆ. ಆಡಳಿತ ಕುಸಿದಿದೆ ಎಂಬುದಾಗಿ ಯಾವ ಸದಸ್ಯರೂ ಇಂಥ ಗುರುತರ ಆಪಾದನೆಯನ್ನು ಮಾಡುವುದು ಸರಿಯಲ್ಲ. ಗೋರವಾಲಾ ವರದಿಯ ಉಲ್ಲೇಖವನ್ನು ಮಾಡಲಾಯಿತು. ಮತ್ತು ಮೈಸೂರು ಸರಕಾರವು ಗೋರವಾಲ ವರದಿಯ ಆಲೋಚನೆಯನ್ನು ಮಾಡಿಲ್ಲ ಎಂದು ಹೇಳಲಾಯಿತು. ಅದು ಸರಿಯಲ್ಲ. ಮೈಸೂರು ಸರಕಾರವು ಗೋರವಾಲಾ ಸಮಿತಿಯ ವರದಿಯನ್ನು ಅಭ್ಯಾಸ ಮಾಡಿದೆ ಮತ್ತು ವರದಿಯ ತಳಹದಿಯ ಮೇಲೆಯೇ 26-7-1958 ರಿಂದ ಜನರಲ್ ಆಡ್ಮಿನಿಸ್ಟ್ರೇಶನ್ ಇಲಾಖೆಯ ಸಂಘಟನೆ ಮತ್ತು ವಿಭಾಗಗಳನ್ನು ಮಾಡಲಾಗಿದೆ. ಸೆಕ್ರೆಟರಿಯೇಟ ಆಡಳಿತವನ್ನು ಪುನಾರಚಿಸಲಾಗಿದೆ. ಜಿ.ಎ.ಡಿ. ಯಲ್ಲಿ 12-11-1958 ರಿಂದ ಐದು ಪ್ಯಾಲಟ್ ಸೆಕ್ಶನ್ನುಗಳನ್ನು ಪ್ರಾರಂಭಿಸಲಾಗಿದೆ. ಇದರಂತೆ ಕಂದಾಯ ಇಲಾಖೆಯ 6 ಸೆಕ್ಶನ್ನಗಳಲ್ಲಿ ಪೈಲಟ್ ಸ್ಕೀಮನ್ನು ಅನುಷ್ಠಾನಗೊಳಿಸಲಾಗಿದೆ. ಆದ್ದರಿಂದ ಎಂಟು ಇಲಾಖೆಗಳು ಪುನಾರಚಿತಗೊಂಡವು. ಅವುಗಳೆಂದರೆ, ಡೈರಕ್ಟರ ಆಫ್ ಇಂಡಸ್ಟ್ರೀಜ ಮತ್ತು ಕಾಮರ್ಸ, ಭಾಷಾಂತರ ಇಲಾಖೆ. ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ನಿರ್ದೇಶಕರು, ಉಚ್ಚ ನ್ಯಾಯಾಲಯ, ಡಾಯರೆಕ್ಟರ್ ಆಫ್ ಮೆಡಿಕಲ್ ಸರ್ವಿಸಸ್, ದ ಆಯ್.ಜಿ.ಪಿ. ದ ಲೇಬರ ಕಮೀಷನರ ಮತ್ತು ಸೇಲ್ಸ ಟ್ಯಾಕ್ಸ್ ಡಿಪಾರ್ಟಮೆಂಟ.

ಅದರಂತೆ ಸಾಧ್ಯವಿದ್ದಷ್ಟು ಬೇಗ ಕೇಸುಗಳನ್ನು ವಿಲೇವಾರಿ ಮಾಡಲು ವಿಭಿನ್ನ ಕ್ರಮಗಳನ್ನು ಪ್ರಾರಂಭಿಸಿದ್ದೇವೆ. ರಾಜ್ಯದ ಪ್ರಧಾನ ಕಾರ್ಯದರ್ಶಿಗಳು ಎಲ್ಲ ಇಲಾಖೆಗಳ ಕಾರ್ಯದರ್ಶಿಗಳೊಂದಿಗೆ ನಿಯಮಿತವಾಗಿ ಸಭೆ ನಡೆಸುತ್ತಾರೆ. ಮತ್ತು ಅಲ್ಲಿ ಪ್ರತಿ ತಿಂಗಳೂ ಬಂದ ಕಾಗದಗಳನ್ನು ಮತ್ತು ವಿಲೇವಾರಿ ಆದ ಕಾಗದಗಳ ಸಂಖ್ಯೆಯನ್ನು ಪರಿಶೀಲಿಸಲಾಗುತ್ತದೆ. ಕಾರ್ಯದರ್ಶಿಗಳ ಕೈಕೆಳಗೆ ಕೆಲಸ ಮಾಡುವ ಅಧಿಕಾರಿಗಳು ಸ್ವೀಕರಿಸಿದ ಮತ್ತು ವಿಲೇವಾರಿ ಮಾಡಿದ ಈ ಎಲ್ಲ ವಿವರಗಳನ್ನು ಸಂಬಂಧಪಟ್ಟ ಸಚಿವರಿಗೆ ಮತ್ತು ಮುಖ್ಯ ಮಂತ್ರಿಗಳಿಗೆ ಕಳಿಸಲಾಗುತ್ತದೆ. ಸಚಿವರಿಗೆ ಮತ್ತು ಮುಖ್ಯ ಮಂತ್ರಿಗಳಿಗೆ ಎಲ್ಲಿಯಾದರೂ ತಡವಾದದ್ದು ಕಂಡುಬಂದರೆ, ಅವಶ್ಯಕ ಆದೇಶಗಳನ್ನು ನೀಡಲಾಗುವುದು. ನನ್ನ ಅನುಭವದಿಂದ ಹೇಳುವುದಾದರೆ, ಅಂಥ ಹೇಳಿಕೊಳ್ಳುವಂಥ ತಡ ಎಲ್ಲಿಯೂ ಆಗಿಲ್ಲ. ಅಲ್ಲಿ - ಇಲ್ಲಿ ಆಗಿದ್ದು ಕಂಡು ಬಂದರೆ ನಾವು ತಕ್ಷಣ ಸೂಕ್ತ ಕ್ರಮವನ್ನು ಕೈಕೊಂಡಿದ್ದೇವೆ. ಆಡಳಿತದ ಕ್ರಮ ಸುಧಾರಿಸಿದೆ ಮತ್ತು ನನ್ನ ಪ್ರಕಾರ ಶೀಘ್ರ ವಿಲೇವಾರಿ ಆಗುತ್ತದೆ.

ಅಧ್ಯಕ್ಷರೆ, ಸನ್ಮಾನ್ಯ ಸದಸ್ಯರೊಬ್ಬರಾದ ಶ್ರೀ ಶಾಮಸುಂದರ ಅವರು ಸರಕಾರ ಕೆಲವು ಅನ್ಯಾಯ ಮಾಡಿದ್ದನ್ನು ಈ ಸಭೆಗೆ ತೋರಿಸಬೇಕೆನ್ನುತ್ತಾರೆ. ಮತ್ತು ಸಚಿವರ ಅಥವಾ ಮುಖ್ಯಮಂತ್ರಿಗಳ ಟಿಪ್ಪಣಿಗಳ ನಕಲುಗಳು ಅವರ ಹತ್ತಿರ ಇವೆ ಎಂಬುದನ್ನು ತೋರಿಸಬೇಕನ್ನುತ್ತಾರೆ. ಆ ವಿಷಯವನ್ನು ನಾನು ತಿಳಿಹೇಳಬೇಕನ್ನುತ್ತೇನೆ. ಯಾಕೆಂದರೆ, ಆ ಸಂದರ್ಭದಲ್ಲಿ, ಅಧ್ಯಕ್ಷ ಮಹಾಶಯರೆ, ಅದರಲ್ಲೇನೋ ಗುಮಾನಿ ಇದೆಯೆಂದು ಜನರು ಭಾವಿಸಿದರು. ಆ ಬಗ್ಗೆ ಅದರಲ್ಲಿ ಏನೂ ಗುಮಾನಿ ಇಲ್ಲ. ಕೃಷಿ ಇಲಾಖೆಯ ನಿರ್ದೇಶಕರು ಸರಕಾರಕ್ಕೆ ಒಂದು ಪ್ರಸ್ತಾವನೆಯನ್ನು ಕಳಿಸಿದ್ದರು. ಅದರಲ್ಲಿ ರೂ. 330-820 ವೇತನ ಶ್ರೇಣಿಯ ಕಬ್ಬು ಸಂಶೋಧನಾ ಅಧಿಕಾರಿಯ ಪದವಿಯನ್ನು ರೂ 550-860 ವೇತನ ಶ್ರೇಣಿಗೆ ಪದೋನ್ನತಿ ಮಾಡುವ ಪ್ರಸ್ತಾವವಿತ್ತು. ಯಾಕೆಂದರೆ ಅದು ಉಪ ನಿರ್ದೇಶಕ ಪದವಿಗೆ ಸಮಾನವಾಗಿತ್ತು. ಕೆಲ ಸಮಯದ ನಂತರ ಅದೇ ಕೃಷಿ ನಿರ್ದೇಶಕರು ಡಾ॥ ಎಚ್.ಆರ್. ಅರಕೇರಿಯವರನ್ನು ಕಬ್ಬು ಸಂಶೋಧನಾ ಅಧಿಕಾರಿಯ ಸ್ಥಾನಕ್ಕೆ ನೇಮಿಸಲು ಪ್ರಸ್ತಾವವರನ್ನು ಕಳಿಸಿದರು. ಎಂದಿನಂತೆ ಈ ವಿಷಯವನ್ನು ಆರ್ಥಿಕ ಇಲಾಖೆಗೆ ಕಳಿಸಲಾಯಿತು. ಆರ್ಥಿಕ ಇಲಾಖೆಯು ಈ ಪದವಿಯನ್ನು ಪದೋನ್ನತಿಗೊಳಿಸುವುದು ಅನವಶ್ಯಕ ಎಂದಿತು. ಯಾಕೆಂದರೆ ಡಾ॥ ಅರಕೇರಿ ಅವರ ನೇಮಕಾತಿಯ ಸ್ಥಾನವು ಆಗಲೇ ರೂ. 350 - 1100 ವೇತನ ಶ್ರೇಣಿಯ ಪ್ರಥಮ ಶ್ರೇಣಿಯ - ಪ್ರಥಮ ವರ್ಗದ ಪದವಿಯಾಗಿತ್ತು. ಮತ್ತು ಆ ಸ್ಥಳಕ್ಕೆ ಕಳಿಸುವ ವ್ಯಕ್ತಿಗೆ ಪದೋನ್ನತಿ ದೊರೆಯುತ್ತಿರಲಿಲ್ಲ. ಸಾಂಪತ್ತಿಕವಾಗಿ ಅವನಿಗೆ ಏನೂ ಲಾಭವಾಗುತ್ತಿರಲಿಲ್ಲ. ಅವನಿಗೆ ಅದೇ ವೇತನ ದೊರೆಯುತ್ತಿರುವಾಗ, ಪದವಿಯ ಪದೋನ್ನತಿಯ ಅಂಶವೆಲ್ಲಿ ಬರುತ್ತದೆ? ಈ ಅಂಶವನ್ನು ಅರ್ಥ ಇಲಾಖೆಯು ಎತ್ತಿತು. ಮುಖ್ಯಮಂತ್ರಿಗಳು ಅರ್ಥ ಇಲಾಖೆಯ ಅಭಿಪ್ರಾಯಗಳನ್ನು ಒಪ್ಪಿಕೊಂಡರು ಮತ್ತು ಹಾಗೆ ಮಾಡುವುದರಲ್ಲಿ ತಪ್ಪೇನೂ ಇರಲಿಲ್ಲ. ಅವನಿಗೆ ಸಂಬಂಧಪಟ್ಟ ಉಲ್ಲೇಖವೆಂದರೆ, ಬಹುಶಃ ಮುಂಬಯಿ ರಾಜ್ಯದಿಂದ ಬಂದ ಸರಕಾರಿ ನೌಕರರಿಗೆ ಕೊಡುವ ಮೊದಲ ಹಂತದ ಪದೋನ್ನತಿಯಲ್ಲಿಯ ವೇತನ ಸಂರಕ್ಷಣೆಯದಾಗಿರಬೇಕು. ಹಾಗೆ ಮೊದಲ ಹಂತದ ಪದೋನ್ನತಿಯನ್ನು ಸಂರಕ್ಷಿಸಿದೆಯೇ ಇಲ್ಲವೆ ಎಂಬ ಬಗ್ಗೆ ಸರಕಾರದ ಮನದಲ್ಲೂ ಸಂಶಯವಿತ್ತು. ಅದು ಸಂರಕ್ಷಿತವಾಗಿದ್ದರೆ ಆತನು ತನ್ನ ಮೊದಲ ಪದೋನ್ನತಿಯನ್ನು ಪಡೆಯಲು ಬಾಧ್ಯವಾಗುತ್ತಿದ್ದನು. ಅದು ಸಂರಕ್ಷಿತವಾಗಿರದಿದ್ದರೆ ಬಾಧ್ಯವಾಗುತ್ತಿರಲಿಲ್ಲ. ಈ ವಿಷಯಗಳನ್ನು ಸ್ಪಷ್ಟಗೊಳಿಸಲು ರಾಜ್ಯ ಸರಕಾರವು ವಿಷಯವನ್ನು ಭಾರತ ಸರಕಾರಕ್ಕೆ ಕಳಿಸಿತ್ತು. ಅದು ಇದ್ದ ಸ್ಥಿತಿ. ಇಲ್ಲಿ ಯಾರಿಗೂ ಯಾವ ತರದ ಒಲವನ್ನು ತೋರಿಲ್ಲ. ಆ ಭಾವನೆಯ ಅವಶ್ಯಕತೆ ಇಲ್ಲ.

ಶ್ರೀ ಜೆ.ಬಿ. ಮಲ್ಲಾರಾಧ್ಯರು ಇನ್ನೊಂದು ಚಿತ್ತಾಕರ್ಷಕ ಪ್ರಕರಣವನ್ನು ಉದಾಹರಿಸಿದರು. ಅವರು ಒಬ್ಬ ನಿವೃತ್ತ ಐ.ಎ.ಎಸ್. ಅಧಿಕಾರಿಗಳು. ಅಧಿಕಾರಿಗಳಲ್ಲೆ ಒಳ್ಳೆಯ ಅಧಿಕಾರದ ಅನುಭವ ಹೊಂದಿದವರು. ಬಹುಶಃ ನನಗೆ ಗೊತ್ತಿಲ್ಲದಿರಬಹುದು.

ಅವರು 30 ಅಥವಾ 33 ವರುಷ ಸೇವೆ ಸಲ್ಲಿಸಿದ್ದಾರೆ. ನನ್ನ ಪ್ರಕಾರ ಅವರೊಬ್ಬ ಅತ್ಯಂತ ಚುರುಕು ಬುದ್ಧಿಯ ಅಧಿಕಾರಿಗಳಾಗಿದ್ದರು. ಮತ್ತು ಅವರ ಬಗ್ಗೆ ಕೆಲವು ಸಂಗತಿಗಳನ್ನು ಕೂಡ ಕೇಳಿದ್ದೇನೆ. ಸರಕಾರಿ ನೌಕರ ವರ್ಗದವರ ಬಗ್ಗೆ ಅವರು ಅಷ್ಟೊಂದು ಸಹಾನುಭೂತಿಯನ್ನು ಕಳೆದುಕೊಂಡವರಂತೆ ಕಾಣುತ್ತಾರೆ. 'ಹತ್ತು ರೂಪಾಯಿ ಹಿಡಿದು ಓಪನ್ ಮಾರ್ಕೆಟ್ಟಿಗೆ ಹೋದರೆ ಸರಕಾರದ ಎಂಥದೇ ರಹಸ್ಯ ಕಾಗದವನ್ನು ಪಡೆಯಲು ಸಾಧ್ಯವಿದೆ' ಎಂದು ಕೇಳಿದಾಗ ನನಗೆ ಆಘಾತವಾದಂತಾಯಿತು. ಮೈಸೂರಿನಲ್ಲಿ ಅಭಿವೃದ್ಧಿಗೊಂಡ ಸಂಪ್ರದಾಯದಲ್ಲಿ ಅದು ಬರುತ್ತದೆಯೋ? ಅವರು ತಮ್ಮಷ್ಟಕ್ಕೆ ತಿಳಿದು ಮಾತನಾಡುತ್ತಿದ್ದಾರೆಯೋ? ಇರಲಿ, ಒಂದು ವೇಳೆ ಒಬ್ಬಿಬ್ಬರು ಬಡ ಗುಮಾಸ್ತರು ಅಥವ ಟೈಪಿಸ್ಟುಗಳು, ತಾವಾಗಿಲ್ಲದಿದ್ದರೂ ನಮ್ಮಂಥವರ ಪ್ರಭಾವಕ್ಕೆ ಮಣಿದು ಹಾಗೆ ಮಾಡಿದ್ದಾರೆಂದು ಇಟ್ಟುಕೊಳ್ಳೋಣ. ಮೂವತ್ತು ವರುಷಗಳ ಸೇವಾನುಭವ ಇರುವ ಐ.ಎ.ಎಸ್. ಅಧಿಕಾರಿಯೊಬ್ಬ ಎಂ.ಎಲ್.ಎ ಆಗುವ ಅವಕಾಶ ಸಿಕ್ಕಾಗ ಸರಕಾರಿ ನೌಕರರನ್ನು ಈ ರೀತಿ ಅವಹೇಳನ ಮಾಡುವುದು ಅವರಿಗೆ ಶೋಭೆ ತರುವುದೆ? ನನಗನಿಸುತ್ತದೆ ಇದು ಶೋಭೆ ತರುವಂಥದ್ದಲ್ಲ. ಅವರು ಹಾಗೆ ಮಾತನಾಡುತ್ತಿದ್ದರೆ ಸರಕಾರಿ ನೌಕರರಾಗಲು ಅರ್ಹರಾಗುವುದಿಲ್ಲ ಮತ್ತೆ ಅಧ್ಯಕ್ಷ ಮಹಾಶಯರೆ, ಅವರು ನಮಗೆ ಡೆಮಾಕ್ರಸಿ ಮತ್ತು ಸಾಮಾಜಿಕ ಸೇವೆಯ ಬಗ್ಗೆ ಪಾಠ ಕಲಿಸಲು ಪ್ರಯತ್ನಿಸುತ್ತಿದ್ದಾರೆ ಅದು ಕೂಡ 30 ವರುಷ ಅಧಿಕಾರ ಶಾಹಿಯಲ್ಲಿ ಕೆಲಸ ಮಾಡಿದ ವ್ಯಕ್ತಿ ಪ್ರಜಾಪ್ರಭುತ್ವಕ್ಕಾಗಿ ಜೀವಮಾನವಿಡೀ ತ್ಯಾಗಮಾಡಿ. ಆಸ್ತಿ ಪಾಸ್ತಿ, ಪ್ರಾಣ ಕಳೆದುಕೊಂಡು, ಸೆರೆಮನೆವಾಸ ಅನುಭವಿಸಿದವರಿಗೆ ಪಾಠ ಕಲಿಸಲು ಪ್ರಯತ್ನಿಸುತ್ತಿದ್ದಾರೆ! ಒಬ್ಬ ನಿವೃತ್ತ ಐ.ಎ.ಎಸ್. ಅಧಿಕಾರಿಯಿಂದ ನಾವು ಪಾಠ ಕಲಿಯುವ ಅವಶ್ಯಕತೆ ಇಲ್ಲವೆಂದು ನನಗನಿಸುತ್ತದೆ. ನಾವೇ ಆ ಅಧಿಕಾರಿಗಳಿಗೆ ಕಲಿಸಬಲ್ಲೆವು. ನೌಕರಿಯಿಂದ ನಿವೃತ್ತರಾಗಿ ಶಾಸಕರಾಗುವ ಅವಕಾಶ ಸಿಕ್ಕಿತೆಂದಾಕ್ಷಣ ಅವರು ಡೆಮಾಕ್ರಸಿಗಾಗಿ ತ್ಯಾಗ ಮಾಡಿದ ವ್ಯಕ್ತಿಗಳಿಗೆ ಪಾಠ ಕಲಿಸುವ ನಟನೆ ಮಾಡಲಾಗದು. (ಚಪ್ಪಾಳೆಗಳ ಸದ್ದು) ಒಬ್ಬ ಉಮೇದುವಾರ ಶ್ರೀ ಎಸ್‌ಹೆಚ್. ವಿಶ್ವೇಶ್ವರಯ್ಯ ಅವರ ಬಗ್ಗೆ (ಹತ್ತಿರ ಇದ್ದ ಒಂದು ವಿಷಯದ ಮೇಲೆ ತಮ್ಮ ವಾಕ್ಚತುರತೆಯಿಂದ ಅವರು ಅದನ್ನು ಸುಣ್ಣವಾಗಿಸುತ್ತಿದ್ದಾರೆ) ಹೌದು ಅವರು ನಿವೃತ್ತ ಮುಖ್ಯ ಕಾರ್ಯದರ್ಶಿಗಳ ಮಗ ಎಂಬುದು ಸತ್ಯ. ಅವರ ಮಗನಾಗಿರುವುದು ಅವರ ತಪ್ಪೇನೂ ಅಲ್ಲ. ಮತ್ತು ತಂದೆ ಮುಖ್ಯ ಕಾರ್ಯದರ್ಶಿಯಾಗಿರುವುದು ಅದರರ್ಥ ಮಗ ವಿದೇಶೀ ಶಿಷ್ಯ ವೇತನಕ್ಕೆ ಕೇಳಬಾರದು ಎಂದೇನೂ ಅಲ್ಲ. ಅವರು ಅರ್ಜಿ ಹಾಕಿರಲಿಲ್ಲ ಎಂದು ಹೇಳಲಾಗುತ್ತದೆ. ಅದು ಸತ್ಯವಲ್ಲ. ಸನ್ಮಾನ್ಯ ಕೃಷಿ ಸಚಿವರಿಂದ ನನಗೆ ಮಾಹಿತಿ ಬಂದಿದೆ. ಇಲಾಖೆಯಿಂದ ಬಂದ ಮಾಹಿತಿಯ ಪ್ರಕಾರ ವಿಶ್ವೇಶ್ವರಯ್ಯನವರ ಅರ್ಜಿಯು ನಿಗದಿಪಡಿಸಿದ ದಿನಾಂಕ 15-1-1960 ರ ಮೊದಲೆ ಕೃಷಿ ನಿರ್ದೇಶಕರ ಕಛೇರಿಗೆ ಬಂದಿದೆ. ಅರ್ಜಿಯೇ ಇರಲಿಲ್ಲ. ಆದರೂ ಅವರ ಕೇಸನ್ನು ಗಣನೆಗೆ ತೆಗೆದುಕೊಳ್ಳಲಾಯಿತು ಎಂದು ಸನ್ಮಾನ್ಯ ಸದಸ್ಯರಾದ ಶ್ರೀ ಮಲ್ಲಾರಾಧ್ಯರು ಹೇಳುವುದು ಅವರಿಗೆ ಶೋಭೆ ತರುವುದೆ? ಅದು

ಅವರದೇ ಕೇಸು, ಅದನ್ನು ಪರಿಗಣನೆಗೆ ತೆಗೆದುಕೊಳ್ಳಲೇ ಬಾರದಾಗಿತ್ತೆ? ಶಿಷ್ಯ ವೇತನ ಮಂಜೂರಿಗಾಗಿ ಅರ್ಜಿಯನ್ನು ಪರಿಗಣಿಸುವ ಮೊದಲೆ ಕನಿಷ್ಠ ಐದು ವರುಷಗಳ ಸೇವೆಯ ನಿಯಮಗಳಿಗೆ ವಿನಾಯಿತಿ ಕೊಡಬಹುದು ಎಂಬುದನ್ನು ನಾನು ಸ್ಪಷ್ಟಪಡಿಸಬಯಸುವೆ. ನಿಜವಾಗಿ ಎಂ.ಸಿ.ಎಸ್.ಆರ್. ಚಾಪ್ಟರ್ 2 ರ ಕ್ಲಾಸ 5 ರ ಅಡಿಯಲ್ಲಿ ಸೇವಾ ನಿಯಮಗಳನ್ನು ಕಂಡೋನ ಮಾಡುವ ಪ್ರಾವಿಜನ್ ಇದ್ದರೂ ನಿರ್ದೇಶಕರು ಅರ್ಜಿಯನ್ನು ಸ್ವೀಕರಿಸಿದ್ದು ತಪ್ಪೆ? ಅಥವಾ ಅವರ ಅರ್ಜಿಯನ್ನು ಪರಿಗಣಿಸಿದ್ದು ತಪ್ಪೆ? ಅನಂತರ ನಾವು ಉಳಿದ ಬಹಳ ದಿನಗಳಿಂದ ಸರಕಾರಿ ನೌಕರರಾಗಿದ್ದವರಿಗಿಂತ ಮೊದಲು ಒಲವು ತೋರಿಸಿ ಈ ವ್ಯಕ್ತಿಯನ್ನು ಕಳಿಸಬಹುದೆ? ಎಂದು ಮತ್ತು ಎಲ್ಲರ ಅರ್ಹತೆಯನ್ನು ಪರಿಶೀಲಿಸಿದೆವು. ಈ ಅಂಶವನ್ನು ಸಭೆಯ ಅವಗಾಹನೆಗೆ ತರ ಬಯಸುವೆ. ಕೃಷಿ ನಿರ್ದೇಶಕರು ಉಳಿದ ಕೆಲವು ಹೆಸರುಗಳೊಂದಿಗೆ ಈ ಎಸ್.ಎಚ್. ವಿಶ್ವೇಶ್ವರಯ್ಯನ ಹೆಸರನ್ನು ಶಿಫಾರಸು ಮಾಡಿ ಕಳಿಸಲಾಯಿತು. ಮತ್ತು ಅದನ್ನು ಸಂಬಂಧಪಟ್ಟ ಸಚಿವರೂ ಪರ್ಯಾಲೋಚಿಸಿದರು. ಅದು ನಮ್ಮ ಹತ್ತಿರ ಬಂದಿತು. ನಾವು ವಿಷಯವನ್ನು ಪರಿಶೀಲಿಸಿದೆವು ಮತ್ತು ಅದಕ್ಕಾಗಿ ಸಚಿವ ಸಂಪುಟದ ಒಂದು ಉಪಸಮಿತಿಯನ್ನು ನೇಮಿಸುವುದೆಂದು ವಿಚಾರಿಸಿದೆವು. ಮತ್ತು ಚರ್ಚಿಸಿದಾಗ, ಮುಖ್ಯಮಂತ್ರಿಗಳು ಕೃಷಿ ಇಲಾಖೆಯ ಮುಖ್ಯಸ್ಥರೊಂದಿಗೆ ಚರ್ಚಿಸಿ ಅದರಲ್ಲಿಯ ಆಗು ಹೋಗುಗಳನ್ನು ಗಮನಿಸಿ ಅರ್ಹರಿಗೆಲ್ಲ ಪ್ರಾತಿನಿಧ್ಯವನ್ನು ಕೊಡಬೇಕೆಂದು ನಿರ್ಧರಿಸಲಾಯಿತು. ಪರಿಶೀಲನೆಗಳ ನಂತರ ಈ ಹುಡುಗನ ಹೆಸರನ್ನು ಸೇರಿಸುವುದು ಸೂಕ್ತವೆಂದು ಯೋಚಿಸಲಾಯಿತು. ಆ ಸಮಯದಲ್ಲಿ ಸನ್ಮಾನ್ಯ ಕೃಷಿ ಸಚಿವರು ಇಲ್ಲಿ ಇರಲಿಲ್ಲ. ಅವರು ರಶಿಯಾಕ್ಕೆ ಹೋಗಿದ್ದರು ಈ ಮಧ್ಯ ಇನ್ನು ಕೆಲವು ಸರಕಾರಿ ನೌಕರರಿಂದಲೂ ಅರ್ಜಿಗಳು ಸಹ ಬಂದುವು ಮತ್ತು ಈ ಹುಡುಗ ತುಂಬ ಕಿರಿಯ ಎಂದು ಹೇಳಲಾಯಿತು. ಅಷ್ಟರಲ್ಲಿ ಸನ್ಮಾನ್ಯ ಕೃಷಿ ಸಚಿವರೂ ತಿರುಗಿ ಬಂದರು. ನಾವು ಚರ್ಚಿಸಿದೆವು. ಅರ್ಹತೆ ಹೊಂದಿದ ಇನ್ನಿತರ ಸರಕಾರಿ ನೌಕರರು ಇದ್ದುದರಿಂದ ಈ ಹುಡುಗನ ಬದಲಾಗಿ ಇನ್ನೊಬ್ಬ ವ್ಯಕ್ತಿಯನ್ನು ಕಳಿಸಬಹುದು ಎಂದರು. ಆದ್ದರಿಂದ ನಾನು ಹೆಸರನ್ನು ಕೈಬಿಡಲು ಒಪ್ಪಿದೆನು ಮತ್ತು ಆ ಹೆಸರು ಒಪ್ಪಿಗೆಯಾಗಲಿಲ್ಲ. ನಾವು ಕೈ ಬಿಟ್ಟೆವು ಇದಿಷ್ಟು ನಡೆದ ಸಂಗತಿ. ಆತನ ಹೆಸರು ನೋಟಿಫಿಕೇಶನ್ನಿನಲ್ಲಿ ಕಂಡಿತ್ತು. ಆದರೆ ಈ ಅಂಶವನ್ನು ಬೆಳಕಿಗೆ ತಂದಾಗ ಮತ್ತು ಸನ್ಮಾನ್ಯ ಕೃಷಿ ಸಚಿವರು ಅದರಿಂದ ಉಳಿದ ಸರಕಾರಿ ನೌಕರರಿಗೆ ಧಕ್ಕೆಯಾಗುವುದು ಎಂದು ಹೇಳಿದಾಗ ನಾವು ಹೆಸರನ್ನು ಕೈ ಬಿಟ್ಟೆವು ಅಧ್ಯಕ್ಷರೆ ಇದರಲ್ಲಿ ತಪ್ಪೇನಾಗಿದೆ? ಒಂದು ವೇಳೆ ಅದು ತಪ್ಪು ಎಂದರೂ, ಕಾನೂನಿನ ಅಡಿಯಲ್ಲಿ ಸೇವಾ ನಿಯಮಗಳನ್ನು ಮನ್ನಿಸುವ ಹಕ್ಕೂ ನಮಗಿದೆ. ಆದರೆ ಕಾನೂನಿನಲ್ಲಿ ಆಸ್ಪದವಿದ್ದಾಗಲೂ ಮನ್ನಿಸುವುದು ಸರಿಯಲ್ಲ ಎಂದು ನಾವು ನಿರ್ಧರಿಸಿದೆವು.

ಮುಖ್ಯ ಕಾರ್ಯದರ್ಶಿಗಳು ತಮಗೆ ಇದರಲ್ಲಿ ಆಸ್ಥೆ ಇಲ್ಲ ಎಂದು ಮುಖ್ಯ ಮಂತ್ರಿಗಳಿಗೆ ಹೇಳಿದರು ಎಂದು ಹೇಳಲಾಯಿತು. ಅಧ್ಯಕ್ಷ ಮಹಾಶಯರೆ, ತಾವು ಈ ಫೈಲನ್ನು

ನೋಡುವುದಿಲ್ಲ ಎಂದು ಪ್ರತ್ಯೇಕ ಟಿಪ್ಪಣಿ ಬರೆದು ಫೈಲನ್ನು ನನ್ನ ಹತ್ತಿರ ಕಳಿಸಿದರು. ಸಂಗತಿಗಳು ಹೀಗಿರುವಾಗ ತಪ್ಪೆಲ್ಲಿದೆ ಅಧ್ಯಕ್ಷರೆ? ಸ್ವಾತ್ತ ಕೃಷಿ ಸಚಿವರು ಈ ಎಲ್ಲ ವಿಷಯಗಳನ್ನು ಪರಿಶೀಲಿಸಿ ನನ್ನ ಹತ್ತಿರ ಕಳಿಸಿದರು. ಈ ಮಧ್ಯ ಮುಖ್ಯ ಕಾರ್ಯದರ್ಶಿಗಳು ನಿವೃತ್ತರಾದರು.ಹಾಗಿದ್ದಾಗ ಕ್ರಮ ತೆಗೆದುಕೊಳ್ಳುವ ಪ್ರಶ್ನೆಯೇ ಉದ್ಭವಿಸಲಿಲ್ಲ. ನನಗೆ ತಿಳಿದಂತೆ ಇದು ಒಟ್ಟಾರೆ ನಡೆದ ಸಂಗತಿ.

ದ್ವಿತೀಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಆರ್ಥಿಕವಾಗಿ ಹಾಗೂ ಕಾರ್ಯರೂಪವಾಗಿ ಕೆಲಸ ಆಗಬೇಕಾದಷ್ಟು ಆಗಿಲ್ಲ ಎಂದು ಪ್ರಚಂಡವಾಗಿ ವಾದ ಮಾಡಲಾಯಿತು. ಅದು ಸತ್ಯವಲ್ಲ ಪ್ಲಾನಿಂಗ್ ಕಮೀಶನ್ನಿನ ಮತ್ತು ಎನ್.ಡಿ.ಸಿ. ಯ ಮೀಟಿಂಗುಗಳನ್ನು ಅಟೆಂಡ ಮಾಡಲು ನನಗೆ ಅವಕಾಶಗಳು ದೊರೆತಿವೆ. ನಮ್ಮ ದೇಶದ ಉಳಿದ ರಾಜ್ಯಗಳ ಕಾರ್ಯ ಸಾಧನೆಯ ಜೊತೆಗೆ ಹೋಲಿಸಿ ನೋಡುವ ಅವಕಾಶವೂ ದೊರೆತಿದೆ. ನಾವು ಚೆನ್ನಾಗಿ ಸಾಧನೆ ಮಾಡಿಲ್ಲ ಎಂದು ವಾದ ಮಾಡಿದರೆ ನಾನು ಹೇಳುವುದಿಷ್ಟೆ. ನಮ್ಮ ಸಾಧನೆ ರಾಷ್ಟ್ರದಲ್ಲಿ ಐದನೆಯ ಶ್ರೇಣಿಯಲ್ಲಿದೆ. ಇದನ್ನು ಗಮನಿಸಿದರೆ ಅದು ಕೆಟ್ಟ ಶ್ರೇಣಿಯಲ್ಲವೆಂದು ನಾನು ಭಾವಿಸುವೆ. ರಾಷ್ಟ್ರೀಯ ಯೋಜನೆಯ ಪುನರ್ ಪರಿಶೀಲಿಸಿದ ಆರ್ಥಿಕ ಗುರಿಯಲ್ಲಿ ನಮ್ಮ ರಾಜ್ಯಕ್ಕೆ 136 ಕೋಟಿ ರೂಪಾಯಿಗಳು ಸಂದಾಯವಾಗಿವೆ. ಎಂಬುದು ಬಹುಶಃ ಈ ಸಭೆಗೆ ಗೊತ್ತಿದೆ. ಪುನರ್ ವಿಮರ್ಶಿತ ಆರ್ಥಿಕ ಗುರಿಯಂತೆ ನಮ್ಮ ಸಾಧನೆ ಹೀಗಿದೆ.

| | | | |
|---|---|---|---|
| 1956-57 | ರೂ 18.3 ಕೋಟಿ | 1957-58 | ರೂ. 20.9 ಕೋಟಿ |
| 1958-59 | ರೂ. 25.6 ಕೋಟಿ | 1956-60 | ರೂ. 30.2 ಕೋಟಿ |
| 1960-61 | ರೂ. 38.6 ಕೋಟಿ (ನಿರೀಕ್ಷಿತ) | | |

ಹೀಗೆ ಒಟ್ಟು 133.6 ಕೋಟಿ ರೂಪಾಯಿಗಳು.

ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಹೀಗೆ ಪ್ರತಿಶತ 97 ರಷ್ಟನ್ನು ಹಣವನ್ನು ನಿಗದಿ ಮಾಡಲಾಗಿದೆ. ಇದು ಕೆಟ್ಟ ಸಾಧನೆಯೆ? ಐದು ವಿಭಿನ್ನ ಪ್ರದೇಶಗಳನ್ನೊಳಗೊಂಡ ಹೊಸ ರಾಜ್ಯ ನಿರ್ಮಾಣವಾದಾಗ, ಮತ್ತು ರಾಜ್ಯದಲ್ಲಿ ಒಂದೇ ರೀತಿಯ ಕಾನೂನಿಲ್ಲದಾಗ, ಇನ್ನಿತರ ಅನೇಕ ಅಡೆತಡೆಗಳ ಮಧ್ಯ ನಾವು ರಾಷ್ಟ್ರ ಮಟ್ಟದಲ್ಲಿ ಐದನೆಯ ಸಂಖ್ಯೆಗೆ ಬಂದೆವೆಂದರೆ ನಮ್ಮ ಸಾಧನೆ ಒಳ್ಳೆಯದು ಎಂದೇ ನನ್ನ ಭಾವನೆ. ಇನ್ನು ಕಾರ್ಯರೂಪಕ್ಕೆ ತಂದ ಕುರಿತು ಸಹ ನನ್ನ ಹತ್ತಿರ ವಿವರಗಳಿವೆ. ಆದರೆ ಅದನ್ನೆಲ್ಲ ಓದಿ ಹೇಳುವ ಅವಶ್ಯಕತೆ ಇಲ್ಲವೆಂದು ನನ್ನ ಭಾವನೆ. ಆನಂತರದ ಅವಕಾಶಗಳಲ್ಲಿ ಅವುಗಳನ್ನು ಓದಿ ಹೇಳಬಹುದು ನಾವು ಸಮಾಧಾನ ಪಡುವುದಕ್ಕಿಂತ ಹೆಚ್ಚಿನದನ್ನು ಸಾಧಿಸಿದ್ದೇವೆ ಎಂದಷ್ಟೆ ಹೇಳಬಯಸುವೆ. ಇನ್ನು ಕೆಲವು ಇಲಾಖೆಗಳಲ್ಲಿ ನಮ್ಮ ಗುರಿ ಮೀರಿ ಸಾಧನೆಯನ್ನು ಮಾಡಿದ್ದೇವೆ ಮತ್ತು ಅವುಗಳನ್ನೆಲ್ಲ ಸರಿಹೊಂದಿಸಲು ಕಷ್ಟವಾಗುತ್ತದೆ.

ಪೋರ್ಸಿಲಿನ್ ಫ್ಯಾಕ್ಟರಿ ಬಗ್ಗೆ ಕಟುವಾದ ಟೀಕೆಯನ್ನು ಮಾಡಲಾಯಿತು. ಅದಕ್ಕೆ ಸರಿಯಾದ ಉತ್ತರವನ್ನು ನನ್ನ ಸ್ನೇಹಿತರಾದ ಎಲ್.ಎನ್. ವೆಂಕೋಜಿರಾಯರು ಆಗಲೇ ಕೊಟ್ಟಿದ್ದಾರೆ. ವಿವರಗಳನ್ನು ಮತ್ತು ವಿಷಯದ ಅರ್ಹತೆಯ ಬಗ್ಗೆ ವಿವರಗಳನ್ನು ಕೊಡದೆ ಮೂರು ವರುಷಗಳ ಅಂಕಿ ಸಂಖ್ಯೆಯನ್ನು ಕೊಡುವೆ.

| ವರುಷ | ಹಾನಿ (ಲಕ್ಷಗಳಲ್ಲಿ) | ಉತ್ಪಾದನೆ (ಟನ್ನುಗಳಲ್ಲಿ) |
|---|---|---|
| 1957-58 | 20 | 448 |
| 1958-59 | 7,13,589 | 1528 |
| 1959-60 | 2 | 1856 |

* ಶ್ರೀ ಎಫ್.ಎಕ್ಸ್. ಡೆವಿಸ್ ಪಿಂಟೊ: ಅದು ಬಡ್ಡಿಯನ್ನು ಒಳಗೊಂಡಿದೆಯೆ?

* ಶ್ರೀ ಬಿ.ಡಿ. ಜತ್ತಿ : ಬಡ್ಡಿ ಲೆಕ್ಕ ಮಾಡುವ ವಿಚಿತ್ರ ಪದ್ಧತಿ ನಮ್ಮಲ್ಲಿದೆ. ಲಾಭ ಗಳಿಸಿದ್ದನ್ನೆಲ್ಲ ಬಂಡವಾಳದಲ್ಲಿ ಕೂಡಿಸಲಾಗುತ್ತದೆ ಮತ್ತು ಅದರ ಮುಂದಿನ ವರುಷ ಅದು ಕೂಡ ಬಂಡವಾಳ ಎನಿಸುತ್ತದೆ. ಅದಕ್ಕೆ ನಾವು ಬಡ್ಡಿಯನ್ನು ಲೆಕ್ಕ ಹಾಕಬೇಕಾಗುತ್ತದೆ. ಇಂದಿನ ಸ್ಥಿತಿಗತಿಯನ್ನು ನೋಡಿದರೆ ಪೋರ್ಸಿಲಿನ್ ಫ್ಯಾಕ್ಟರಿ ವಿಷಯದಲ್ಲಿ ನಾವು ಬಹು ಚೆನ್ನಾಗಿಯೇ ಮಾಡಿದ್ದೇವೆಂದು ಕಾಣುತ್ತದೆ. ಬಹುಶಃ ಅಲ್ಲಿರುವ ತೊಂದರೆಯೆಂದರೆ ನಮ್ಮ ಕೆಲಸಗಾರರಿಗೆ ಎನ್.ಜಿ.ಕೆ ಕಲಿಸಿದ ತಾಂತ್ರಿಕ ತರಬೇತಿಯದೇ ಆಗಿರಬೇಕು ಮತ್ತು ನಾವು ಬಯಸಿದಂತೆ ಅವರು ಆಳವಾದ ಜ್ಞಾನವನ್ನು ಪಡೆಯಲಿಲ್ಲ. ಅದಕ್ಕಾಗಿಯೇ ನಾವು ಅವರೊಂದಿಗೆ ಸಂಪರ್ಕವನ್ನಿಟ್ಟುಕೊಂಡಿದ್ದೇವೆ. ಮತ್ತು ತಮ್ಮ ಒಬ್ಬ ನುರಿತವರನ್ನು ನಮ್ಮ ಫ್ಯಾಕ್ಟರಿಗೆ ಕಳಿಸಲು ಒಪ್ಪಿಕೊಂಡಿದ್ದಾರೆ. ನಾವು ಈ ವಿಷಯವನ್ನು ಸಚಿವ ಮಂಡಳಿಯಲ್ಲೂ ಚರ್ಚಿಸಿದ್ದೇವೆ. ಮತ್ತು ಒಂದು ಚಿಕ್ಕ ವ್ಯವಸ್ಥಾಪಕ ಸಮಿತಿಯನ್ನು ರಚಿಸಬೇಕೆಂದು ನಿರ್ಧರಿಸಿದ್ದೇವೆ ಇದಕ್ಕೆ ರಾಜ್ಯದ ವಾಣಿಜ್ಯ - ಉದ್ಯೋಗ ಇಲಾಖೆಯ ನಿರ್ದೇಶಕರು ಚೇರ್‌ಮನ್ನರಾಗಿರುತ್ತಾರೆ. ಈ ಸಮಿತಿಯು ಇಬ್ಬರು - ಮೂವರು ವ್ಯಕ್ತಿಗಳನ್ನು ಒಳಗೊಂಡಿರುತ್ತದೆ. ನಿರ್ದೇಶಕರು ಚೇರಮನ್ನರಾಗಿರುತ್ತಾರೆ. ಜಂಟೀ ನಿರ್ದೇಶಕರು ಅಲ್ಲದೆ ಎನ್.ಜಿ.ಕೆ.ಯ ಒಬ್ಬರು ಅದರ ಸದಸ್ಯರಾಗಿರುತ್ತಾರೆ. ಈ ಮೂವರು ದೈನಂದಿನ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಾರೆ. ಸುಮಾರು ಆರು ತಿಂಗಳುಗಳ ನಂತರ ನಾವು ಗುರಿಯನ್ನು ಮುಟ್ಟ ಬಲ್ಲೆವು ಮತ್ತು ನಷ್ಟ ಸಂಭವಿಸಲಾರದು ಎಂದು ಆಶಿಸಿದ್ದೇವೆ. ಸನ್ಮಾನ್ಯಸದಸ್ಯರಾದ ಶ್ರೀ ಮಲ್ಲಾರಾಧ್ಯರು ಬಹಳ ನಷ್ಟವಾಗಿದೆ ಎಂದು ಹೇಳಿದರು. ನಾವು ನಡೆಸುತ್ತಿರುವ ಹೊಸ ಶೈಲಿಯ ಕೆಲಸವನ್ನು ಗಮನಿಸಿದರೆ, ನಷ್ಟ ಬಹಳವಾಗಿದೆ ಎಂದು ಹೇಳುವುದು ಸರಿಯಲ್ಲ ಎಂದು ನನಗನಿಸುತ್ತದೆ. ಯಾವುದೇ ಹೊಸಉದ್ಯೋಗವನ್ನು ತೆಗೆದುಕೊಂಡಾಗ ಬಹಳಷ್ಟು ಜನರು ಟೀಕಿಸುವುದು ಸ್ವಾಭಾವಿಕ. ಭದ್ರಾವತಿ ಕಾರಖಾನೆಯನ್ನು ಪ್ರಾರಂಭಿಸಿದಾಗ ಅದನ್ನು

ಪ್ರಾರಂಭಿಸಿದ ವ್ಯಕ್ತಿಯ ವಿರುದ್ಧ ಬಹಳ ಟೀಕೆಗಳನ್ನು ಮಾಡಲಾಯಿತೆಂದು ನಾನು ಕೇಳಿದ್ದೇನೆ. ಆದರೆ ಇಂದು ನಾವು ಅವರನ್ನು ಹೊಗಳುತ್ತಿದ್ದೇವೆ ಮತ್ತು ಅದರ ಫಲದ ಲಾಭವನ್ನು ಅನುಭವಿಸುತ್ತಿದ್ದೇವೆ. ಯಾವುದೇ ಹೊಸದನ್ನು ಟೀಕಿಸುವುದು ಬಹಳ ಜನರ ರೂಢಿಯಾಗಿದೆ. ಮೂಲತಃ ನಾವು ಸಂಪ್ರದಾಯವಾದಿಗಳು. ಯಾವುದೇ ಹೊಸದನ್ನು ತೆಗೆದುಕೊಳ್ಳಲು ಇಚ್ಛಿಸುವುದಿಲ್ಲ. ಕೆಲ ಸಮಯದ ನಂತರ ಪ್ರತಿಯೊಂದು ಹೊಸ ಕಾರಖಾನೆಗಳೂ ಒಂದು ಹಂತಕ್ಕೆ ಬರುತ್ತವೆ ಮತ್ತು ಗಳಿಸತೊಡಗುತ್ತವೆ.

ಅರ್ಥ ಮಂತ್ರಿಗಳು ಆಗಲೇ ಹೇಳಿದ್ದರಿಂದ ನಾನು ಫಿಲೇಚರ ಬಗ್ಗೆ ಏನನ್ನು ಹೇಳುವುದಿಲ್ಲ.

*ಶ್ರೀ ಎಸ್.ಡಿ. ಕೋತಾವಳೆ: ಖಾಸಗೀ ವ್ಯಕ್ತಿಗಳು ಲಾಭವನ್ನು ಗಳಿಸುತ್ತಾರೆ. ಸರಕಾರೀ ಉದ್ಯೋಗಗಳು ಲಾಭವನ್ನು ಗಳಿಸುವುದಿಲ್ಲ ಎಂದು ವಿರೋಧಿ ಸದಸ್ಯರೊಬ್ಬರು ಹೇಳಿದರು. ಆದರಲ್ಲಿ ತಥ್ಯವಿದೆಯೇ?

ಶ್ರೀ ಬಿ.ಡಿ. ಜತ್ತಿ : ಪೋರ್ಸಿಲಿನ ಇಂಡಸ್ಟ್ರಿಯನ್ನು ಬಿಟ್ಟರೆ ಉಳಿದ ಒಂದೇ ಒಂದು ಇಂಡಸ್ಟ್ರೀಯೂ ನಷ್ಟದಲ್ಲಿಲ್ಲ. ಉಳಿದೆಲ್ಲ ಇಂಡಸ್ಟ್ರಿಗಳಲ್ಲಿ ನಾವು ತುಂಬ ಚೆನ್ನಾಗಿ ಮಾಡಿದ್ದೇವೆ. ಖಾಸಗೀ ಉದ್ಯೋಗ ಪತಿಗಳು ಅಧಿಕ ಲಾಭವನ್ನು ಗಳಿಸುವಲ್ಲಿ ಯಶಸ್ವಿಯಾಗಿದ್ದರೆ, ಅವರು ಅನುಸರಿಸಿದ ಮಾರ್ಗಗಳನ್ನು ವಿಧಾನಗಳನ್ನು ಹೇಳಲು ನನ್ನಿಂದ ಸಾಧ್ಯವಿಲ್ಲ. ಹಾಗೆ ಹೇಳುವಾಗ ನಾನು ಖಾಸಗೀ ಉದ್ಯೋಗ ಪತಿಗಳತ್ತ ಯಾವುದೇ ದೋಷಾರೋಪಣೆ ಮಾಡುತ್ತಿಲ್ಲ. ಆದರೆ ನಾವು ಕೆಲವು ವಿಧಿ ನಿಯಮಗಳಿಗೆ ಬದ್ಧರಾಗಿರುತ್ತೇವೆ ಮತ್ತು ನಮ್ಮ ಲೆಕ್ಕ ಪತ್ರಗಳು ಆಡಿಟ್ ಮತ್ತು ಶಾಸನ ಸಭೆ ಮತ್ತು ಸಚಿವ ಮಂಡಳಿಗಳ ನಿಯಂತ್ರಣದಲ್ಲಿರುತ್ತವೆ. ಒಟ್ಟಾರೆಯ ಉದ್ಯೋಗವನ್ನು ತೆಗೆದುಕೊಂಡಾಗ ಬಡ್ಡಿ ಕೊಟ್ಟು ಕೂಡ ನಾವು ಚೆನ್ನಾಗಿಯೇ ಗಳಿಸುತ್ತಿದ್ದೇವೆ.

ವಿದ್ಯುತ್ ಕಾರಖಾನೆಯ ವಿಸ್ತರಣೆಯ ಕುರಿತು. ಈ ಸಚಿವ ಸಂಪುಟ ಸೂಚಿಸಿದ ಹೊಸ ವಿಸ್ತರಣೆ ಇದೇನೂ ಅಲ್ಲ. ವಿಸ್ತರಣೆಯನ್ನು ಈ ಮೊದಲಿನ ಕಾಂಗ್ರೆಸ್ ಸಚಿವ ಸಂಪುಟವೇ ಅನುಮೋದಿಸಿದೆ. ಅವರು ಎ.ಇ. ಜಿ. ಯೊಂದಿಗೆ ಒಂದು ಒಪ್ಪಂದವನ್ನು ಮಾಡಿಕೊಂಡಿದ್ದಾರೆ. ಹಿಂದಿನ ಸರಕಾರ ತೆಗೆದುಕೊಂಡ ನಿರ್ಧಾರಗಳನ್ನು ಇಂದಿನ ಸರಕಾರ ಜಾರಿಯಲ್ಲಿ ತಂದಿದೆ ಅಷ್ಟೇ, ಅದಕ್ಕಿಂತ ಹೆಚ್ಚಿನದೇನೂ ಇಲ್ಲ. 1949-50 ರಷ್ಟು ಹಿಂದೆ ಜಿ.ಇ.ಎಫ್ ನ ವಿಸ್ತರಣೆಯನ್ನು ಗಮನಿಸಲಾಗಿತ್ತು. ಆ ಸಮಯದಲ್ಲಿ ಮೂರು ಕಂಪನಿಗಳಿಂದ ವಿಶಾಲ ತಳಹದಿಯ ಪ್ರಸ್ತಾವನೆಗಳನ್ನು ಪಡೆಯಲಾಗಿತ್ತು.

1) ಮೆಸರ್ಸ ಲ್ಯಾಂಕಾಶಾಯರ ಡೈನಮೊ ಇಲಕ್ಟ್ರಿಕ್ ವರ್ಕ್ಸ ಕಂಪನಿ, ಲಂಡನ್.
2) ಮೆಸರ್ಸ ಟೋಕಿಯೋ ಸಿಬುರಾ ಎಲೆಕ್ಟ್ರಿಕ್ ಕಂಪನಿ, ಜಪಾನ.
3) ಮೆಸರ್ಸ ಎ.ಇ.ಜಿ. ವೆಸ್ಟ್ ಜರ್ಮನಿ.

ವಿವಿಧ ಕಂಪನಿಗಳ ಪ್ರತಿನಿಧಿಗಳ ಜೊತೆಗೆ ಚರ್ಚಿಸಿದ ಮೇಲೆ ನಾವು ಅವರಿಗೆ ಪ್ರಸ್ತಾವನೆಗಳನ್ನು ಕಳಿಸಲು ಕೇಳಿಕೊಂಡೆವು. ಪಶ್ಚಿಮ ಜರ್ಮನಿಯ ಎ.ಇ.ಜಿ. ಮಾತ್ರ ಪ್ರಸ್ತಾವನೆಗಳನ್ನು ಕಳಿಸಿತು. ಉಳಿದವರು ಕಳಿಸಲಿಲ್ಲ. ಈ ಪ್ರಸ್ತಾವನೆಗಳನ್ನು ಹಿಂದಿನ ಸರಕಾರ ಪರಿಶೀಲಿಸಿತು. ದಿನಾಂಕ 6-1-1955 ರಂದು ಸರಕಾರ ಎ.ಇ.ಜಿ.ಯ ಪ್ರಸ್ತಾವನೆಗಳನ್ನು ಅನುಮೋದಿಸಿತು. 1956 ರಲ್ಲಿ ಎ.ಇ.ಜಿ. ಯು ಒಪ್ಪಂದದ ಕರಡು ಪ್ರತಿಯನ್ನು ಸಲ್ಲಿಸಿತು. 15-6-1956 ನಿರ್ಣಯದಂತೆ ಸರಕಾರವು ಅದನ್ನು ಒಪ್ಪಿಕೊಂಡಿತು. ಆನಂತರ ದೊಡಸಾಲಗೆ ನೀಡಿದ ಏಜೆನ್ಸಿ ಬಗ್ಗೆ ಟಿಪ್ಪಣಿಯನ್ನು ಕೊಡಲಾಯಿತು. ಒಪ್ಪಂದದ ಅನುಮೋದನೆಯ ಸಮಯದಲ್ಲಿ ಆ ಹೆಸರನ್ನು ಸಹ ಅಂದಿನ ಸರಕಾರ ಸೂಚಿಸಿತ್ತು. ನಾವು ಏನನ್ನೂ ಬದಲಿಸಿಲ್ಲ. ಏನಾದರೂ ಬದಲಿಸಿದ್ದರೆ ಅದನ್ನು ಏ.ಇ.ಜಿ.ಯ ಸಲಹೆಯೊಂದಿಗೆ ಬದಲಿಸಿದೆ ಮತ್ತು ಅವುಗಳು ಸರಕಾರದ ಲಾಭಕ್ಕಾಗಿ ಮಾಡಲಾಗಿದೆ. ಒಪ್ಪಿದ ತಿದ್ದುಪಡಿಗಳಿಂದ ನಮಗೆ ಲಾಭವಾಗಿದೆ.

ಮೈಸೂರು ಸರಕಾರವು ಇಂಡಸ್ಟ್ರಿಗಳ ಬಗ್ಗೆ ಹೆಚ್ಚಿನದನ್ನೇನೂ ಮಾಡಿಲ್ಲವೆಂದು ವಾದ ಮಾಡಲಾಯಿತು. ಸನ್ಮಾನ್ಯ ಸದಸ್ಯರಾದ ಶ್ರೀ ಮಲ್ಲಾರಾಧ್ಯರಿಂದ ಇದನ್ನು ಕೇಳಲು ನನಗೆ ತುಂಬ ಕೆಡುಕೆನಿಸುತ್ತದೆ. ಅವರಿಗೆ ಎಲ್ಲವೂ ಗೊತ್ತಿದೆ ಎನ್ನುತ್ತಾರೆ ಮತ್ತು ಅವರು ಹಲವಾರು ವಿಷಯಗಳಲ್ಲಿ ನಿಷ್ಣಾತರಾಗಿದ್ದಾರೆ. ಅವರು ಯಾರೊಂದಿಗಾದರೂ ಯಾವುದೇ ವಿಷಯದಲ್ಲಿ ಸವಾಲನ್ನೆಸೆಯುತ್ತಾರೆ. ಕೇಂದ್ರೀಯ ಔದ್ಯೋಗಿಕ ಕಾರ್ಯಾಗಾರದ ವಿಸ್ತರಣಾ ಯೋಜನೆ ಕುರಿತು ಹೇಳಬೇಕೆಂದರೆ ಅದನ್ನು ಪೂರ್ತಿಯಾಗಿ ವಿಸ್ತರಿಸಲಾಗಿದೆ. ಸರಕಾರೀ ಪೋರ್ಸಿಲಿನ್ ಕಾರಖಾನೆಯ ವಿಸ್ತರಣೆಯು ಪೂರ್ತಿಗೊಂಡಿದೆ. ಹಾಸನದ ದಿ ಮೈಸೂರು ಇಂಪ್ಲಿಮೆಂಟ್ ಫ್ಯಾಕ್ಟರಿ ಪೂರ್ತಿಯಾಗಿದೆ. ಅದರ ಮೂಲ ಕ್ಷಮತೆ 650 ಟನ್ನುಗಳದ್ದಾಗಿತ್ತು. ಆದರೆ ಈಗ ಅದನ್ನು 1500 ಟನ್ನುಗಳ ಉತ್ಪಾದನೆಗೆ ಏರಿಸಲಾಗಿದೆ. ಮೈಸೂರು ಆಯರ್ನ ಮತ್ತು ಸ್ಟೀಲ ವರ್ಕ್ಸನ್ನು ಮೂರು ಉಪ ವಿಭಾಗಗಳಲ್ಲಿ ಭಾಗ ಮಾಡಲಾಗಿದೆ.

1) ಸ್ಟೀಲ ಕ್ಯಾಪಾಸಿಟಿ 30,000 ಟನ್ನುಗಳಿಂದ 45,000 ಟನ್ನುಗಳು

2) ಕಾಸ್ಟ ಆಯರ್ನ ಪೈಪುಗಳು 10,000 ಟನ್ನುಗಳಿಂದ 25,000 ಟನ್ನುಗಳು.

3) ಸ್ಟೀಲ ಫೌಂಡ್ರಿ 2500 ರಿಂದ 6000 ಟನ್ನುಗಳು.

ಇವುಗಳು ಸರಕಾರದ ಮುಂದಿರುವ ವಿಸ್ತರಣಾ ಯೋಜನೆಗಳು ಈ ಎಲ್ಲ ಯೋಜನೆಗಳು ಪೂರ್ತಿಗೊಂಡಿವೆ ಮತ್ತು ಉತ್ಪಾದನೆಯು ತನ್ನ ಗರಿಷ್ಟ ಮಿತಿಯನ್ನು ತಲುಪಿದೆ.

ಮತ್ತೆ ಈಗ ಹೊಸ ಅಥವ ವಿಸ್ತರಣಾ ಯೋಜನೆಗಳನ್ನು ಮಂಜೂರು ಮಾಡಿದ್ದು ಮತ್ತು ಜಾರಿಯಲ್ಲಿ ತಂದದ್ದು ಹೀಗಿದೆ. ಸರಕಾರೀ ವಿದ್ಯುತ್ ಕಾರಖಾನೆಯಲ್ಲಿ ಟ್ರಾನ್ಸಫರ್ಮರ, ಮೋಟಾರುಗಳು ಮತ್ತು ಸ್ವಿಚ್ ಗೇರುಗಳ ಉತ್ಪಾದನೆ ಮಡಿಕೇರಿಯ ಸರಕಾರಿ ಕೇಂದ್ರ

ಕಾರ್ಯಾಗಾರದಲ್ಲಿ ಸರಕಾರಿ ಪೋರ್ಸಿಲಿನ್ ಕಾರಖಾನೆಯಲ್ಲಿ ಮಾಲೇಬಲ್ ಮೆಟಲ್ ಪಾರ್ಟ್ಸಗಳ ಉತ್ಪಾದನೆ, ಮೈಸೂರು ಆಯರ್ನ ಆ್ಯಂಡ ಸ್ಟೀಲ ವರ್ಕ್ಸನಲ್ಲಿ ಒಂದು ಲಕ್ಷ ಟನ್ನಿನ ಸ್ಟೀಲ ಉತ್ಪಾದನೆ. ಐದು ಸಾವಿರದಿಂದ ಇಪ್ಪತ್ತು ಸಾವಿರ ಟನ್ನ ಫಿರೋ ಸಿಲಿಕಾನ ಉತ್ಪಾದನೆ, ಟೂಲ ಮತ್ತು ಅಲ್ಲೈಡ ಸ್ಟೀಲ 3000 ಟನ್ನುಗಳು, ಎಲೆಕ್ಟ್ರಿಕಲ್ ಸ್ಟೀಲ 10,000 ಟನ್ನುಗಳು ಸರಕಾರದ ವಿಧಿಯುಕ್ತ ಆದೇಶಗಳಿಗಾಗಿ ಕಾಯುತ್ತಿದ್ದೇವೆ ಮತ್ತು ನಾವು ಮುಂದೆ ಹೋಗುತ್ತಿದ್ದೇವೆ. ಅದರಂತೆ ಸರಕಾರಿ ಅನುದಾನ ಕೇಂದ್ರಗಳಲ್ಲಿ ಹೊಸ ಅಥವ ವಿಸ್ತರಣಾ ಯೋಜನೆಗಳು ಪೂರ್ಣಗೊಂಡವುಗಳು ಅಥವಾ ಪೂರ್ತಿಗೊಳ್ಳುವ ಹಂತದಲ್ಲಿ ಇರುವ ಯೋಜನೆಗಳು.

* ರೇಡಿಯೋ ಆ್ಯಂಡ ಇಲೆಕ್ಟ್ರಿಕ್ ಮ್ಯಾನುಫ್ಯಾಕ್ಚರಿಂಗ್ ಕಂಪನಿ:

1) ಇಲೆಕ್ಟ್ರಿಸಿಟಿ ಮೀಟರುಗಳು 1,80,000 ರಿಂದ 3 ಲಕ್ಷ ಮೀಟರುಗಳು.

2) ತಾಡ ಸ್ಪೀಕರ್ಸ ಟ್ರಾನ್ಸಿಸ್ಟರ ರೇಡಿಯೋಗಳು ರೇಡಿಯೋ ಕಂಪೋನಂಟ ಪಾರ್ಟಗಳು

ಮೈಸೂರು ಕೆಮಿಕಲ್ಸ್ ಆ್ಯಂಡ ಫರ್ಟಿಲ್ಯಾಜರ್ಸ ಲಿಮಿಟೆಡ್. ಸುಪರ ಫಾಸ್ಪೇಟ ಉತ್ಪಾದನೆ 3,00 ದಿಂದ 10,000 ಟನ್ ಪೂರ್ತಿಗೊಂಡಿದೆ. ಸಲ್ಪೂರಿಕ್ ಆಸಿಡ್ 7500 ರಿಂದ 22,500 ಟನ್ನುಗಳು ಸೂಪರ ಫಾಸ್ಪೇಟ 10,000 ದಿಂದ 50,000 ಟನ್ನುಗಳು.

* ಮೈಸೂರು ಶುಗರ ಕಂಪನಿ: ಸಿಲಿಕೋ ಆಸಿಡ್‌ನ ಉತ್ಪಾದನೆ.

* ಮೈಸೂರು ಪೇಪರ ಮಿಲ್ಸ 8000 ರಿಂದ 18000 ಟನ್ನುಗಳು ಅಲ್ಲದೆ ಸರಕಾರಿ ಸಕ್ಕರೆ ಕಾರಖಾನೆಗಳು ಪಾಂಡವಪುರ ಸಂಕೇಶ್ವರ ಮತ್ತು ಕಂಪನಿಗಳಲ್ಲಿ

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇವುಗಳಲ್ಲಿಯ ಹಲವಾರು ಉದ್ಯೋಗಗಳು ಮುಳುಗಡೆಗೆ ಬಂದಿದ್ದವು. ಇವುಗಳನ್ನೆಲ್ಲ ಪುನರುಜ್ಜೀವಿಸಿತು ಮತ್ತು ಅವುಗಳು ಮತ್ತೆ ಪ್ರಾರಂಭವಾದವು. ಅವುಗಳೆಲ್ಲ ಸರಕಾರೀ ಸ್ವಾಮ್ಯದ ಇಂಡಸ್ಟ್ರೀಗಳಲ್ಲ ಆದರೆ ನಾನು ಈ ಸಭೆಗೆ ತೋರಿಸಬೇಕೆನ್ನುವ ವಿಷಯವೆಂದರೆ ಸರಕಾರ ಅವುಗಳಲ್ಲಿ ಹೇಗೆ ಆಸ್ಥೆ ವಹಿಸಿತು ಮತ್ತು ಖಾಸಗಿ ಉದ್ಯಮಗಳೂ ಮುಂದೆ ಬರುವಲ್ಲಿ ಹೇಗೆ ಸಹಾಯ ಮಾಡಿತು ಎಂಬುದೇ ಆಗಿದೆ.

ನಂಜನಗೂಡಿನ ಕಾಗದ ಕಾರಖಾನೆಯ 1959 ರಲ್ಲಿ ಉತ್ಪಾದನೆಯನ್ನು ಪ್ರಾರಂಭಿಸಿತು. ಅದು ಮುಚ್ಚಿಬಿಡುವುದರಲ್ಲಿದ್ದಿತು. ಅದನ್ನು ಪುನರುಜ್ಜೀವಿಸಿತು ಮತ್ತು 1959 ರಿಂದ ಅದು ಉತ್ಪಾದನೆಯನ್ನು ಪ್ರಾರಂಭಿಸಿದೆ.

ಹಗರಿಬೊಮ್ಮನ ಹಳ್ಳಿ ವಿಜಿಟೇಬಲ್ ಆಯಿಲ್ ಫ್ಯಾಕ್ಟರಿಯು 1960 ರಿಂದ ಉತ್ಪಾದನೆಯನ್ನು ಪ್ರಾರಂಭಿಸಿದೆ. ಕಳೆದ 8-9 ವರುಷಗಳಿಂದ ಆ ಫ್ಯಾಕ್ಟರಿಯು ಕೆಲಸ ಮಾಡುತ್ತಿರಲಿಲ್ಲ. ಅದೀಗ ಉತ್ಪಾದನೆಯನ್ನು ಪ್ರಾರಂಭಿಸಿದೆ.

ಹುಬ್ಬಳ್ಳಿಯ ಕರ್ನಾಟಕ ಸ್ಪಿನ್ನಿಂಗ ಮಿಲ್ಲು 1960 ರಿಂದ ಉತ್ಪಾದನೆಯನ್ನು ಮಾಡುತ್ತಿದೆ. ಅದರ ಎಲ್ಲ ಬಿಡಿ ಭಾಗಗಳನ್ನು ಬಿಚ್ಚಿ ಮಾರಲಾಗಿತ್ತು. ಸರಕಾರ ತನ್ನ ಗರಿಷ್ಠ ಮಿತಿಯ ಅನುದಾನವನ್ನು ನೀಡಲು ಮುಂದೆ ಬಂದಿತು. ಅದೀಗ ಉತ್ಪಾದನೆಯ ಸ್ಥಿತಿಯಲ್ಲಿದೆ.

ಚೆನ್ನಪಟ್ಟಣದ ಮೈಸೂರು ಸ್ಪನ್ನ ಸಿಲ್ಕನ್ನು ಸರಕಾರ ತೆಗೆದುಕೊಂಡಿದೆ ಮತ್ತು ಇಷ್ಟರಲ್ಲಿ ಅದು ಉತ್ಪಾದನೆಯನ್ನು ಪ್ರಾರಂಭಿಸುತ್ತದೆ. ದಾವಣಗೇರಿಯ ಗಣೇಶ ಟೆಕ್ಸಟೈಲ್ ಮಿಲ್ಲಿಗೆ ಮೈಸೂರು ಸರಕಾರವು ಆರ್ಥಿಕ ನೆರವನ್ನು ನೀಡಿತು ಅದೀಗ ಸುಸ್ಥಿತಿಯಲ್ಲಿ ಕೆಲಸ ಮಾಡುತ್ತಿದೆ.

ಬೆಂಗಳೂರಿನ ಮೈಸೂರು ಕ್ರೋಮ ಟ್ಯಾನಿಂಗ ಕಂಪನಿಯು ದುಃಸ್ಥಿತಿಯಲ್ಲಿತ್ತು ಮೈಸೂರು ಸರಕಾರ ಅದಕ್ಕೆ ಆರ್ಥಿಕ ಸಹಾಯವನ್ನು ನೀಡಿತ್ತು ಮತ್ತು ಸರಕಾರದಿಂದ ಒಬ್ಬ ನಿಷ್ಣಾತನನ್ನು ಕಳಿಸಲಾಯಿತು. ಈಗ ಅದು ಕೆಲಸ ಮಾಡುತ್ತದೆ.

ಕಲಬುರ್ಗಿಯ ಎಂ.ಎಸ್.ಕೆ. ಮಿಲ್ಲು ತನ್ನ ಗಂಭೀರ ಪರಿಸ್ಥಿತಿಯಿಂದ ಮುಚ್ಚಿಹೋಗಿತ್ತು. ಅದಕ್ಕೆ ಮೈಸೂರು ಸರಕಾರವು ಆರ್ಥಿಕ ಸಹಾಯವನ್ನು ನೀಡಲು ನಿರ್ಧರಿಸಿತು. ಅದು ಕೂಡ ಕೆಲಸ ಮಾಡುವ ಸ್ಥಿತಿಗೆ ಬರುತ್ತದೆ.

ನಂಜನಗೂಡಿನ ಕಪಿಲಾ ಟೆಕ್ಸಟೈಲ್ ಮಿಲ್ಲನ್ನು ಸರಕಾರವು 22 ಲಕ್ಷ ರೂಪಾಯಿಗಳಿಗೆ ಖರೀದಿಸಿತು. ಅದು ಈಗ ಕೆಲಸ ಮಾಡುತ್ತದೆ.

ಹಲವಾರು ವರುಷಗಳಿಂದ ಗದುಗಿನ ಸ್ಪಿನ್ನಿಂಗ್ ಮಿಲ್ಲು ನಿಂತು ಹೋಗಿತ್ತು ಖಾಸಗಿ ವ್ಯಕ್ತಿಯೊಬ್ಬರು ಅದನ್ನು ಖರೀದಿಸಿದ್ದರೆ ಅವಶ್ಯಕತೆ ಇದ್ದರೆ ಮೈಸೂರು ಸರಕಾರವು ಅದಕ್ಕೆ ಆರ್ಥಿಕ ಸಹಾಯ ಅಥವಾ ತಾಂತ್ರಿಕ ಸಹಾಯವನ್ನು ನೀಡಲು ಸಿದ್ಧವಿದೆ. ಈ ವಿಷಯಗಳನ್ನು ನಿಮ್ಮೆಲ್ಲರ ಗಮನಕ್ಕೆ ತರಬಯಸುವೆ ಉಳಿದ ವಿಷಯಗಳ ಕುರಿತು ನಾನು ವಿವರವಾದ ಹೇಳಿಕೆಗಳನ್ನು ನೀಡಲು ಪ್ರಯತ್ನಿಸುವುದಿಲ್ಲ. ಕೇವಲ ಅಂಕಿ ಸಂಖ್ಯೆಗಳನ್ನು ಮಾತ್ರ ಕೊಡುವೆ. ರಾಜ್ಯದಲ್ಲಿ ಹೊಸ ಔದ್ಯೋಗಿಕ ಕೆಲಸಗಳು ಬರುತ್ತಿವೆ. ಖಾಸಗಿ ವ್ಯಕ್ತಿಗಳು ಪ್ರಾರಂಭಿಸುವ 21 ಹೋಸ ಲಾಯಸೆನ್ಸ್‌ಗಳನ್ನು ಸರಕಾರದಿಂದ ಪಡೆಯಲಾಗಿದೆ. ಇನ್ನುವರೆಗೆ ಯೋಚಿಸಲಾರದ ಮತ್ತು ಮೈಸೂರು ರಾಜ್ಯದಲ್ಲಿ ಇಲ್ಲದೆ ಇರುವ ಹಲವಾರು ಉದ್ಯೋಗಗಳು ಪ್ರಾರಂಭವಾಗುತ್ತವೆ. ಸುಮಾರು 15 ಜನರು ಹೊಸ ಲಾಯಸೆನ್ಸ್‌ಗಳಿಗಾಗಿ ಅರ್ಜಿಗಳನ್ನು ಸಲ್ಲಿಸಿದ್ದಾರೆ. ಅವರು ಹೊಸ ಇಂಡಸ್ಟ್ರಿಗಳನ್ನು ಹಾಕಲು ಬಯಸಿದ್ದಾರೆ. 15 ರಲ್ಲಿ ನನಗನಿಸಿದಂತೆ 14 ಜನರಿಗೆ ಲಾಯಸೆನ್ಸಗಳು ದೊರಕುತ್ತವೆ. ಅದು ನನಗೆ ಇತ್ತೀಚಿಗೆ ದೊರೆತ ಮಾಹಿತಿ. ಈ 14 ಜನರಿಗೆ ಹೊಸ ಲಾಯಸನ್ಸಗಳು ದೊರೆತರೆ ಮೈಸೂರು ರಾಜ್ಯದಲ್ಲಿ 14 ಹೆಚ್ಚಿನ ಇಂಡಸ್ಟ್ರಿಗಳು ಬಂದಂತಾಗುತ್ತವೆ. ಶ್ರೀ ಸುಂದರ ಮೂರ್ತಿಗಳ ಬಗ್ಗೆ ಉಲ್ಲೇಖಿಸಲಾಗಿತ್ತು ಆ ಬಗ್ಗೆ ಕೂಡ ನಾನು ಸ್ಪಷ್ಟ ಪಡಿಸಿದ್ದೇನೆ.

ರಾಜ್ಯದಲ್ಲಿಯ ಅಪರಾಧ (ಕ್ರೈಮ) ಸ್ಥಿತಿಯ ಬಗ್ಗೆ ಮಾನ್ಯ ಗೃಹಮಂತ್ರಿಗಳು ಅಂಕಿ ಸಂಖ್ಯೆಗಳನ್ನು ಕೊಟ್ಟಿದ್ದಾರೆ.

* ಶ್ರೀ ಎಸ್.ಡಿ. ಕೊಠಾವಳೆ: ಅಲ್ಯೂಮಿನಿಯಮ ಇಂಡಸ್ಟ್ರಿ ಗತಿಯ ಬಗ್ಗೆ ತಿಳಸುತ್ತೀರಾ?

* ಶ್ರೀ ಬಿ.ಡಿ. ಜತ್ತಿ: ನನ್ನ ಸ್ನೇಹಿತರಾದ ಶ್ರೀ ಕೋಠಾವಳೆ ಅವರು ಅಲ್ಯೂಮಿನಿಯಮ್ ಇಂಡಸ್ಟ್ರಿ ಸ್ಥಿತಿಗತಿಯ ಬಗ್ಗೆ ತಿಳಿಯಬೇಕೆನ್ನುತ್ತಾರೆ. ಇತ್ತೀಚಿನ ಸ್ಥಿತಿ ಎಂದರೆ ಶ್ರೀ ರೇನಾಲ್ಡರು ಮುಂದೆ ಬಂದಿದ್ದಾರೆ. ಅವರು ಮೈಸೂರು ರಾಜ್ಯಕ್ಕೆ ಒಂದು ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ. ಮೈಸೂರು ರಾಜ್ಯದಲ್ಲಿ ಅವರು ಒಂದು ಅಲ್ಯೂಮಿನಿಯಮ್ ಕಾರಖಾನೆಯನ್ನು ತೆರೆಯಬೇಕೆಂದು ಯೋಚಿಸಿದ್ದಾರೆ. ಅವರು ಯೋಜನೆಯನ್ನು ಮೂರು ಹಂತಗಳಲ್ಲಿ ವಿಭಾಗಿಸಬೇಕೆಂದಿದ್ದಾರೆ. ಮೊದಲನೆಯದು ಮೂರು ವರುಷಗಳದ್ದು. ಎರಡನೆಯದು - ಮೂರು ಹಾಗೂ ಮೂರನೆಯದು ಮೂರು ವರುಷಗಳದ್ದು. ಯೋಜನೆಯನ್ನು ಪೂರ್ತಿಗೊಳಿಸಲು ಅವರು ಒಟ್ಟು 9 ವರುಷಗಳಷ್ಟು ಕಾಲ ತೆಗೆದುಕೊಳ್ಳುತ್ತಾರೆ. ಈ ಕಾರಖಾನೆಯನ್ನು ಪ್ರಾರಂಭಿಸಲು ಅವರು ಒಟ್ಟು ತೊಡಗಿಸಬೇಕೆಂದಿರುವ ಬಂಡವಾಳ ಸುಮಾರು 75 ರಿಂದ 80 ಕೋಟಿ ರೂಪಾಯಿಗಳು ಮೊದಲ ಹಂತದಲ್ಲಿ ಅವರು 30 ಕೋಟಿ ರೂಪಾಯಿಗಳನ್ನು ತೊಡಗಿಸಬೇಕೆಂದಿದ್ದಾರೆ. ಎರಡು ಮತ್ತು ಮೂರನೆಯ ಹಂತಗಳಲ್ಲಿ ತಲಾ 25 ಕೋಟಿ ರೂಪಾಯಿಗಳು ಮತ್ತೆ ಮೈಸೂರು ಸರಕಾರದೊಂದಿಗೆ ಚರ್ಚಿಸಲು ಅವರಿಗೆ ಅವಕಾಶ ದೊರೆತಿತ್ತು. ಸರಕಾರದಿಂದ ಅವರಿಗೆ ವಿದ್ಯುತ್ ಸರಬರಾಜಿನ ಬಗ್ಗೆ ಖಾತ್ರಿ ಬೇಕಾಗಿತ್ತು. ಮೀಟಿಂಗು ಚೆನ್ನಾಗಿ ನಡೆಯಿತು. ನಾವು ಅವರಿಗೆ ಪೂರ್ತಿ ಸಮಾಧಾನವಾಗುವಂತೆ ಮಾಡಿದ್ದೇವೆಂದು ನಾನು ತಿಳಿದಿದ್ದೇನೆ. ಅವರು ಈಗ ಭಾರತ ಸರಕಾರವನ್ನು ಸಂಪರ್ಕಿಸಿದ್ದಾರೆ. ಮೈಸೂರು ರಾಜ್ಯದಲ್ಲಿ ಈ ಫ್ಯಾಕ್ಟರಿಯನ್ನು ಪ್ರಾರಂಭಿಸಲು ಲಾಯಸೆನ್ಸನ್ನು ಪಡೆಯಲು ಪ್ರಯತ್ನಿಸುತ್ತಿದ್ದಾರೆ. ಆದರೆ ತೊಂದರೆ ಇರುವುದು, ನಮ್ಮ ರಾಜ್ಯದಲ್ಲಿ ದೊರೆಯುವ ಬಾಕ್ಸಾಯಿಟ ಇಂಥ ದೊಡ್ಡ ಕಾರಖಾನೆಗೆ ಸರಬರಾಜು ಮಾಡುವಷ್ಟು ಪ್ರಮಾಣದಲ್ಲಿ ದೊರೆಯುವುದಿಲ್ಲ ಎಂದು ಈವರೆಗಿನ ಸರ್ವೆಗಳು ಹೇಳುತ್ತಿವೆ. ಆದ್ದರಿಂದ ಬದಲೀ ವ್ಯವಸ್ಥೆಗೆ ಅವರೇನು ಯೋಚಿಸಿದ್ದಾರೆ? ಸಧ್ಯ ಅವರು ಹೊರ ದೇಶಗಳಿಂದ ಅಲ್ಯುಮಿನಿಯಾವನ್ನು ಆಮದು ಮಾಡಿಕೊಳ್ಳಬೇಕೆಂದು ಯೋಚಿಸಿದ್ದಾರೆ. ಮತ್ತು ವರುಷಾರುತಿಂಗಳಲ್ಲಿ ಅವರು ಸ್ಮೆಲ್ಟರುಗಳನ್ನು ಇನಸ್ಟಾಲ್ ಮಾಡಬಯಸಿದ್ದಾರೆ. ಅರ್ಥ ವ್ಯವಸ್ಥೆಯಾದನಂತರ ಅವರು ಅಲ್ಯೂಮಿನಿಯಾದಿಂದ ಅಲ್ಯೂಮಿನಿಯಮ್‌ವರೆಗೆ ಬದಲಿಸುತ್ತಾರೆ. ಅವರು ಅಲ್ಯೂಮಿನಿಯಾವನ್ನು ಆಮದು ಮಾಡಿಕೊಂಡರೆ ಅದರ ಬದಲಾಗಿ ಅವರು ಅಲ್ಯುಮಿನಿಯಮ್‌ನ್ನು ಕಳಿಸಬಯಸುತ್ತಾರೆ. ಆದ್ದರಿಂದ ವಿದೇಶಿ ವಿನಿಯಮದ ಪ್ರಶ್ನೆ ಉದ್ಭವಿಸುವುದಿಲ್ಲ. ವಿದೇಶಿ ವಿನಿಮಯದ ಸಮಸ್ಯೆಯನ್ನು ಬಗೆ ಹರಿಸಲು, ಅಗತ್ಯವಿದ್ದ ಅಲ್ಯುಮಿನಿಯಾವನ್ನು ಹೊರದೇಶಗಳಿಂದ ಆಮದು ಮಾಡಿಕೊಳ್ಳಲಾಗುವುದು ಪ್ರತಿಯಾಗಿ ಅಲ್ಯೂಮಿನಿಯಮನ್ನು ರಫ್ತು ಮಾಡಲಾಗುವುದು. ಈ ಪ್ರಸ್ತಾವನೆಯನ್ನು ಭಾರತ ಸರಕಾರ ಒಪ್ಪಿದರೆ, ಮೈಸೂರು ಸರಕಾರ ಇಂಥದೊಂದು ದೊಡ್ಡ ಕಾರಖಾನೆಯನ್ನು ಪ್ರಾರಂಭಿಸಲು ಅವರಿಗೆ ಅನುಮತಿ ನೀಡಲು ಏನೂ ತೊಂದರೆ ಬರಲಾರದು. ಒಂದೇ ಒಂದು ಅಂಶವೆಂದರೆ

ಹಣದ್ದು. ಮೈಸೂರು ಸರಕಾರ 75 ಲಕ್ಷದಿಂದ ಒಂದು ಕೋಟಿ ರೂಪಾಯಿಗಳವರೆಗೆ ಇದರಲ್ಲಿ ತೊಡಗಿಸಬೇಕು ಎಂದು ಕೇಳಿದ್ದಾರೆ. ಅದಕ್ಕಿಂತ ಹೆಚ್ಚಿಲ್ಲ. ಉಳಿದ ಹಣವನ್ನು ಶ್ರೀ ರೇನಾಲ್ಡ ಹಾಗೂ ಇತರ ಒಪ್ಪಂದ ಮಾಡಿಕೊಂಡ ಇತರರು ತೊಡಗಿಸುತ್ತಾರೆ. ಅದರಲ್ಲಿ ನಮ್ಮ ದೇಶದ ವ್ಯಕ್ತಿಗಳು ಇದ್ದಾರೆ. ಅಲ್ಯೂಮಿನಿಯಮ್ ಫ್ಯಾಕ್ಟರಿಯ ಕುರಿತು ಇದು ಇತ್ತೀಚಿನ ಪರಿಸ್ಥಿತಿ.

ಅಧ್ಯಕ್ಷ ಮಹಾಶಯರೆ ನಾನು ಅಪರಾಧಗಳ ಕುರಿತು ಉಲ್ಲೇಖಿಸುತ್ತಿದ್ದೆ. ಮಾನ್ಯ ಗೃಹ ಮಂತ್ರಿಗಳು ಅಂಕಿ ಸಂಖ್ಯೆಗಳನ್ನು ಕೊಡುತ್ತ ಉಳಿದ ರಾಜ್ಯಗಳೊಂದಿಗೆ ಹೋಲಿಸಿದಾಗ ಅದು ಕಡಿಮೆಯದೆಂದು ತೋರಿಸಿದ್ದಾರೆ.

ಅಧ್ಯಕ್ಷರೆ ವಿದ್ಯಾರ್ಥಿಗಳ ಗಲಭೆಗಳ ಬಗ್ಗೆ ಕೂಡ ಸನ್ಮಾನ್ಯ ಗೃಹ ಮಂತ್ರಿಗಳು ಶ್ರೀ ಜೇ. ಬಿ. ಮಲ್ಲಾರಾಧ್ಯರ ಹೇಳಿಕೆಯನ್ನು ಓದಿ ಹೇಳಿದ್ದಾರೆ. ಆ ಸಮಯದಲ್ಲಿ ಅವರು ಪೋಲೀಸರನ್ನು ಹಾಗೂ ಮೈಸೂರು ಸರಕಾರವನ್ನು ಹೊಗಳುವಂಥ ಬಿಕ್ಕಟ್ಟಿನ ಸಂದರ್ಭದಲ್ಲಿ ಸಿಲುಕಿದ್ದರು. ಈಗ ಅವರು ತೊಂದರೆಯಿಂದ ಹೊರಬಂದಿದ್ದಾರೆ. ಮತ್ತು ಈ ಅವಿಶ್ವಾಸ ಗೊತ್ತುವಳಿ ಪಾಸಾಗಲೇಬೇಕು ಎಂದು ಬಯಸುತ್ತಿದ್ದಾರೆ.

*ಶ್ರೀ ಆರ್.ಎಂ. ಪಾಟೀಲ (ನವಲಗುಂದ) ಆ ಸಮಯದಲ್ಲಿ ಅವರೆಂಥ ತೊಂದರೆಯಲ್ಲಿ ಇದ್ದರು ? (ನಗು).

* ಶ್ರೀ ಬಿ.ಡಿ. ಜತ್ತಿ: ಅಧ್ಯಕ್ಷರೆ, ಈಗ ಆ ಕುರಿತು ಯಾವುದನ್ನು ವಿವರವಾಗಿ ಸನ್ಮಾನ್ಯ ಸದಸ್ಯರು ಇಲ್ಲಿರುವಾಗ ಹೇಳುವುದು ಉಚಿತವೆನ್ನಿಸುವುದಿಲ್ಲ. ಅವರು ಕ್ಯಾಂಪಸ್ಸಿನಿಂದ ಹೊರಬರಲೂ ಸಾಧ್ಯವಾಗಲಿಲ್ಲ. ಜನರು ಅವರನ್ನು ಹಿಡಿದು ಇಡಬೇಕೆಂದಿದ್ದರು. ಪೋಲೀಸರ ಸಹಾಯದಿಂದ ಆ ಸಂದರ್ಭ ಬರಲಿಲ್ಲ. ಅವರು ಹೊಗಳಲಿ, ತೆಗಳಲಿ ಅವರಿಗೆ ಸಂರಕ್ಷಣೆ ನೀಡುವುದು ಸರಕಾರದ ಕರ್ತವ್ಯವಾಗಿತ್ತೆಂಬುದೂ ನಿಜ.

ಅಧ್ಯಕ್ಷರೆ ರಾಜ್ಯಪಾಲರಿಂದ ಮರಣದಂಡನೆ ಶಿಕ್ಷೆ ಬದಲಾದ ಬಗ್ಗೆಯೂ ಉಲ್ಲೇಖಿಸಲಾಯಿತು. ಅದಕ್ಕೆ ಮೈಸೂರು ಸರಕಾರವೇ ಕಾರಣ ಎಂದೂ ವಾದಿಸಲಾಯಿತು. ಅಧ್ಯಕ್ಷರೆ ಅಲ್ಲಿ ಕೇಸನ್ನು ಹಿಂತೆಗೆದುಕೊಳ್ಳುವ ಪ್ರಶ್ನೆಯೇ ಇರಲಿಲ್ಲ. ವ್ಯಕ್ತಿಗೆ ಮರಣದಂಡನೆಯ ಶಿಕ್ಷೆಯಾಗಿತ್ತು ಮತ್ತು ನಾಲ್ಕು ಕಾರಣಗಳಿಂದ ದಯಾಭಿಕ್ಷೆಯನ್ನು ಸಲ್ಲಿಸಲಾಗಿತ್ತು.

1) ಆತ 26 ವರುಷದ ತರುಣನಾಗಿದ್ದನು. 2) ಒಂದೇ ವರುಷದ ಹಿಂದೆ ಮದುವೆಯಾಗಿದ್ದನು. 3) ಅವನಿಗೆ 70 ವರುಷದ ತಾಯಿ ಇದ್ದಳು. 4) ಆತ ಗೌರವಾನ್ವಿತ ಕುಟುಂಬದಿಂದ ಬಂದವನಾಗಿದ್ದನು. ಸರಕಾರದ ಸಲಹೆಯ ಮೇರೆಗೆ ರಾಜ್ಯಪಾಲರು ಆತನೆ ಮರಣದಂಡನೆ ಶಿಕ್ಷೆಯನ್ನು ಕಡಿಮೆಗೊಳಿಸಿ ಜೀವಾವಧಿ ಶಿಕ್ಷೆಯನ್ನು ವಿಧಿಸಿದರು. ಆತನ ವಯಸ್ಸು ಮತ್ತು ಇತರ ಕಾರಣಗಳಿಂದಾಗಿ ಸರಕಾರ ಈ ದಯಾಭಿಕ್ಷೆಯ ಅರ್ಜಿಯನ್ನು ಪರಿಶೀಲಿಸಿತು ಮತ್ತು ರಾಜ್ಯಪಾಲರಿಗೆ ಶಿಫಾರಸ್ಸು ಮಾಡಲಾಯಿತು. ಅಂಥ ಮನವಿಗಳಿಗೆ ರಾಜ್ಯಪಾಲರ ಅಥವ

ರಾಷ್ಟ್ರಪತಿಗಳ ಒಪ್ಪಿಗೆ ಬೇಕಾಗುತ್ತದೆ. ಸರಕಾರ ಕೇವಲ ಶಿಫಾರಸ್ಸು ಮಾಡಿತ್ತು ಮತ್ತು ಅದರ ಯುಕ್ತಾಯುಕ್ತ ವಿವೇಚನೆ ರಾಜ್ಯಪಾಲರದ್ದಾಗಿತ್ತು. ಆದ್ದರಿಂದ ಅದನ್ನು ರಾಜ್ಯಪಾಲರಾಗಲಿ ಅಥವ ರಾಷ್ಟ್ರಪತಿಗಳಾಗಲಿ ಒಪ್ಪಿದ್ದಾರೆ. ಅದಕ್ಕೆ ಮೈಸೂರು ಸರಕಾರವನ್ನು ದೂಷಿಸಬಾರದು.

ಅಧ್ಯಕ್ಷರೇ ಹುಬ್ಬಳ್ಳಿಯ ಘಟನೆಯ ಬಗ್ಗೆ ವಿಶಿಷ್ಟ ಉಲ್ಲೇಖವನ್ನು ಮಾಡಲಾಯಿತು. ಬಹುಶಃ ಅದಕ್ಕೆ ನಾನೇ ಉತ್ತರ ಕೊಡಬೇಕೆಂದು ತಿಳಿದು ಮಾನ್ಯ ಗೃಹ ಮಂತ್ರಿಗಳು ಉತ್ತರ ಕೊಡಲಿಲ್ಲ. ಯಾಕೆಂದರೆ ಅದರ ಬಗ್ಗೆ ನನಗೆ ಗೊತ್ತಿದೆ ಎಂಬುದೇ ಆಗಿರಬೇಕು. ಅಧ್ಯಕ್ಷರೇ ದಿನಾಂಕ: 11-01-1961 ರಂದು ಘಟನೆ ಸಂಭವಿಸಿತು. ಒಬ್ಬ ವ್ಯಕ್ತಿಯು ಮಾರವಾಡಿಯೊಬ್ಬರ ಮನೆಯಲ್ಲಿ ಹೊಕ್ಕು ಸಂಶಯಾಸ್ಪದ ರೀತಿಯಲ್ಲಿರುವಾಗ ಪೋಲೀಸರು.....

* ಅಧ್ಯಕ್ಷರು: ಅದೆಲ್ಲ ಸಬ್ ಜುಡೀಸ್ ಎಂದು ನನಗೆ ಅನಿಸುತ್ತದೆ.

* ಶ್ರೀ ಬಿ.ಡಿ. ಜತ್ತಿ: ನಿಮಗೆ ಧನ್ಯವಾದಗಳು ಅಧ್ಯಕ್ಷರೇ ವಿಭಾಗೀಯ ಆಯುಕ್ತರೊಬ್ಬರನ್ನು ವಿಚಾರಣಾಧಿಕಾರಿ ಎಂದು ನೇಮಿಸಲು ಸರಕಾರ ನಿರ್ಣಯ ತೆಗೆದುಕೊಂಡಿದೆ ಮತ್ತು ವಿಚಾರಣೆಯು ರಹಸ್ಯವಾಗಿ ನಡೆದಿದೆ ಸರಿಯಾಗಿ ವರ್ತಿಸದ ಪೋಲೀಸ್ ಅಧಿಕಾರಿಗಳನ್ನು ಅಮಾನತ್ತಿನಲ್ಲಿಡಲಾಗಿದೆ.

* ಶ್ರೀ ಎಫ್.ಎಚ್. ಮೊಹಸೀನ: ವಿಷಯ ಸಬ್‌ಜುಡೀಸ ಆಗುತ್ತದೆಂದು ವಿಭಾಗೀಯ ಆಯುಕ್ತರು ವಿಚಾರಣೆಯನ್ನು ಮಾಡುತ್ತಿಲ್ಲವೆಂದು ನಿಮಗೆ ಗೊತ್ತಿದೆಯೇ?

* ಶ್ರೀ ಬಿ.ಡಿ. ಜತ್ತಿ: ಅದು ಸರಿ, ಆದರೆ ರಹಸ್ಯವಾಗಿ ವಿಚಾರಿಸುವಲ್ಲಿ ತೊಂದರೆ ಇಲ್ಲ. ಅದು ಸಾರ್ವಜನಿಕವಾಗಿ ಆಗುತ್ತಿದ್ದರೆ ಈ ತೊಂದರೆ ಬರುತ್ತಿದೆ.

ಅಧ್ಯಕ್ಷರೇ ಈಗ ನಾನು ಇಂಡೋಕಾರ್ನಿಸ ಉತ್ಪಾದನೆಯ ಬಗ್ಗೆ ಉಲ್ಲೇಖಿಸುತ್ತೇನೆ. ಆಗಸ್ಟ್ 1959 ರಲ್ಲಿ ಎಕ್ಸೈಜ ಕಮೀಶನರರು ಇಂಡೊಕಾರ್ನಿಸ ಉತ್ಪಾದನೆಗೆ ಅನುಮತಿ ನೀಡಿದರು. ಫರ್ಮಿನ ಕೆಲಸಗಳಲ್ಲಿ ಕೆಲವು ಅಕ್ರಮಗಳ ಕುರಿತು ವಿಚಾರಣೆ ಮಾಡಲು 01-04-1960 ರಿಂದ ಅನುಮತಿಗೆ ತಡೆ ನೀಡಿದರು. ಅಕ್ರಮಗಳು ಹೀಗಿವೆ.

01) ಫರ್ಮ ಡಿಸ್ಟಿಲರಿ ಲಾಯಸನ್ಸನ್ನು ಪಡೆಯಬೇಕಾಗಿತ್ತು.

02) ವಿಧಿನಿಯಮಗಳ ಅನುಸಾರ ಅವರು ಶರಾಬು ಉತ್ಪಾದನೆಯ ಲೆಕ್ಕ ಪತ್ರವನ್ನು ಇಡುತ್ತಿರಲಿಲ್ಲ. ಈ ಎರಡು ಕಾರಣಗಳಿಂದಾಗಿ ಅನುಮತಿಗೆ ತಡೆ ನೀಡಲಾಗಿತ್ತು. 20-08-1960 ರಂದು ಕೇಂದ್ರ ಸರಕಾರವು ಮೆಡಿಸಿನಲ್ ಮತ್ತು ಟಾಯಲೆಟ್ ಪ್ರಿಪರೇಶನ್ ರೂಲುಗಳಿಗೆ ತಿದ್ದುಪಡಿ ತಂದರು. ಅದರಲ್ಲಿ ಇಂಡೋಕಾರ್ನಿಸನ್ನು ಮೆಡಿಕೇಟೆಡ್ ಶರಾಬಿನ ಪಟ್ಟಿಯಿಂದ ತೆಗೆದು ಹಾಕಲಾಗಿತ್ತು ಹಾಗಾಗಿ ಅದು ಒಂದು ಸಾದಾ ಶರಾಬಿಗೆ ಪರಿವರ್ತಿತವಾಯಿತು ಮತ್ತು ಅದು ಔಷಧಯುಕ್ತ ಶರಾಬು ಎನಿಸಲಿಲ್ಲ. ಶರಾಬಿನ ಉತ್ಪಾದನೆಗೆ ಲಾಯಸನ್ಸನ್ನು ಕೊಡಬೇಕೋ ಬಾರದೋ ಎಂಬುದನ್ನು ಮೈಸೂರು ಸರಕಾರ

ಪರಿಶೀಲಿಸಬೇಕಾಯಿತು. ಅಧ್ಯಕ್ಷರೆ, ಇದು ಧೋರಣೆಯ ವಿಷಯ ಅದನ್ನು ನಾವು ಪರಿಶೀಲಿಸುತ್ತಿದ್ದೇವೆ ಮತ್ತು ಭಾರತ ಸರಕಾರದಿಂದ ಮಾಹಿತಿಯನ್ನು ಪಡೆಯಲು ಪ್ರಯತ್ನಿಸುತ್ತಿದ್ದೇವೆ. ಶರಾಬು ಉತ್ಪಾದಿಸಲು ಸರಕಾರ ಒಂದು ವೇಳೆ ಅನುಮತಿಯನ್ನು ನೀಡಬೇಕೆಂದು ಮನಸ್ಸು ಮಾಡಿದರೆ, ನಾವು ಅದನ್ನು ಬೇರೆ ಸ್ಥಳಗಳಿಗೆ ರಫ್ತು ಮಾಡಬೇಕಾಗುತ್ತದೆ. ನಮ್ಮ ರಾಜ್ಯದಲ್ಲಿ ಮದ್ಯಪಾನ ನಿಷೇಧವಿರುವುದರಿಂದ, ಉತ್ಪಾದಕರಿಗೆ ನಾವು ಈ ರಾಜ್ಯದಲ್ಲಿ ಮಾರಲಿಕ್ಕು ಅವಕಾಶ ನೀಡುವುದಿಲ್ಲ. ಇದು ಸ್ಥಿತಿ.

ಅಧ್ಯಕ್ಷರೇ ಉಳಿದ ವಿಷಯಗಳ ಬಗ್ಗೆ ಗೃಹ ಮಂತ್ರಿಗಳು ಹೇಳಿದ್ದಾರೆ. ವಿರೋಧ ಪಕ್ಷದ ಸದಸ್ಯರ ವಿರುದ್ಧ ಏನನ್ನೂ ಹೇಳಲು ನನಗೆ ಇಚ್ಛೆ ಇಲ್ಲ. ನಾನಾಗಲೇ ಹೇಳಿರುವೆ. ವಿಶ್ವಾಸ ಗೊತ್ತುವಳಿ ಮಂಡಿಸುವುದರಿಂದ ಜನರಿಗೆ ಏನನ್ನು ಒಳ್ಳೆಯದನ್ನು ಮಾಡಲು ಹೊರಟಿದ್ದಾರೆಂದು ಅವರು ಪ್ರಯತ್ನಿಸಿದ್ದಾರೆ ಮತ್ತು ಇದರಿಂದ ಅವರು ಕಾಂಗ್ರೆಸ್ಸಿಗಿಂತ ಅಧಿಕ ಮತಗಳನ್ನು ಮತ್ತು ಪಡೆಯುತ್ತಾರೆಂದು ತಿಳಿದಿದ್ದಾರೆ. ಆದರೆ ನಾವು ಅಧಿಕ ಮತಗಳನ್ನು ಮತ್ತು ಅಧಿಕ ಸ್ಥಾನಗಳನ್ನು ಪಡೆದು ಮತ್ತೆ ಕಾಂಗ್ರೆಸ್ ಸರಕಾರವನ್ನು ರಚಿಸುತ್ತೇವೆ ಎಂಬ ಬಗ್ಗೆ ಖಾತ್ರಿ ಇದೆ. ಅದರಲ್ಲಿ ಸಂಶಯವೇ ಇಲ್ಲ. ಆದ್ದರಿಂದ ನಾನು ಅವಿಶ್ವಾಸ ಗೊತ್ತುವಳಿಯನ್ನು ವಿರೋಧಿಸುತ್ತೇನೆ.

# ರಾಜ್ಯದ ಸಂಪನ್ಮೂಲ ಮತ್ತು ಮಿತವ್ಯಯ ಸಮಿತಿ ವರದಿ ಅರ್ಥಮಂತ್ರಿಗಳಾಗಿ ವಿಧಾನಸಭೆಯಲ್ಲಿ ಮಾಡಿದ ಭಾಷಣ 19, ಸೆಪ್ಟೆಂಬರ್ 1962

## ಮಾನ್ಯ ಅಧ್ಯಕ್ಷ ಮಹೋದಯರೇ,

ಸರಕಾರೀ ಕೆಲಸ ಕಾರ್ಯ ವಿಧಾನಗಳಲ್ಲಿ ಕೆಲವು ವಿಷಯಗಳ ಕುರಿತು ಚಿಂತನೆ ಮಾಡಬೇಕೆಂದು ಸರಕಾರಕ್ಕೆ ಅನಿಸಿದ್ದು, ಸರಕಾರವು ಇಂಥ ಸಂಪನ್ಮೂಲ ಮತ್ತು ಮಿತವ್ಯಯ ಸಮಿತಿಗಳನ್ನು ನೇಮಕ ಮಾಡುತ್ತದೆ. ಕೆಲವು ಸಮಯದ ಹಿಂದೆ ಬಜೆಟ್ ಸೆಶನ್ನಿನಲ್ಲಿ ಹಿಂದಿನ ಅರ್ಥಮಂತ್ರಿಗಳು ಮೂರನೆಯ ಪಂಚವಾರ್ಷಿಕ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಬೇಕಾಗುವ ಸಂಪನ್ಮೂಲಗಳನ್ನು, ಮತ್ತು ಎಲ್ಲೆಲ್ಲಿ ಮಿತವ್ಯಯವನ್ನು ಸಾಧಿಸಬಹುದೆಂದು ತಿಳಿಯಲು ಇಂಥದೊಂದು ಸಮಿತಿಯನ್ನು ನೇಮಿಸಲು ಬಯಸಿದ್ದರು. ಅನಂತರ ಅವರ ಸಲಹೆಗೆ ಅನುಗುಣವಾಗಿ, ಈ ಸಭೆಯಲ್ಲಿ ಸಮಿತಿಯನ್ನು ನೇಮಕ ಮಾಡಲಾಗಿತ್ತು ಮತ್ತು ಆ ಸಮಿತಿಯು ತುಂಬ ಕಷ್ಟ ಪಟ್ಟು ಬೇರೆ ಬೇರೆ ಇಲಾಖೆಗಳ ಅಭ್ಯಾಸ ಮಾಡಿ ವರದಿಯನ್ನು ತಯಾರಿಸಿದೆ. ಅವರು ಸಾಧ್ಯವಿದ್ದ ಎಲ್ಲೆಡೆಗಳಿಂದ ಸಾಧ್ಯವಿದ್ದ ಎಲ್ಲ ಮಾಹಿತಿಯನ್ನು ಸಂಗ್ರಹಿಸಲು ಪ್ರಯತ್ನಿಸಿದ್ದಾರೆ ಮತ್ತು ಒಂದು ಒಳ್ಳೆಯ ವರದಿಯನ್ನು ಸಲ್ಲಿಸಿದ್ದಾರೆ. ಈ ಮನೆಯ ಮತ್ತು ಮೇಲ್ಮನೆಯ ಎಲ್ಲ ಸನ್ಮಾನ್ಯ ಸದಸ್ಯರುಗಳು ಈ ವರದಿಯನ್ನು ವಿವರವಾಗಿ ನೋಡಿದ್ದೀರಿ. ಚರ್ಚೆಯಲ್ಲಿ ಭಾಗವಹಿಸಿದ ಹಲವಾರು ಸದಸ್ಯರು ಅನೇಕ ಗುಣಾತ್ಮಕ ಸೂಚನೆಗಳನ್ನಿತ್ತಿದ್ದಾರೆ. ಒಂದು ವಿಶೇಷ ಸಮಿತಿಯ ವರದಿಯು ಸರಕಾರದ ಕೈ ಸೇರಿದಾಗ, ಅದರರ್ಥ ಆ ಸಮಿತಿ ಮಾಡಿದ ಎಲ್ಲ ಶಿಫಾರಸ್ಸುಗಳನ್ನು ಒಪ್ಪಲೇಬೇಕು ಎಂದೇನಲ್ಲ. ಸರಕಾರವು ಈ ಮನೆಯ ಮತ್ತು ಮೇಲ್ಮನೆಯ ಸದಸ್ಯರ ಅಭಿಪ್ರಾಯಗಳನ್ನೂ ತೆಗೆದುಕೊಳ್ಳಬೇಕಾಗುತ್ತದೆ. ಆನಂತರ ಸರಕಾರ ಒಂದು ವೇಳೆ ಎಲ್ಲ ಶಿಫಾರಸ್ಸುಗಳನ್ನು ಒಪ್ಪಿದರೆ ಸರಕಾರದ ಮೇಲೆ ಏನು ಪರಿಣಾಮುವಾಗಬಹುದು ಎಂದು ಪರಿಶೀಲಿಸಬೇಕಾಗುತ್ತದೆ. ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸರಕಾರ ಯಾವ ಶಿಫಾರಸ್ಸುಗಳನ್ನು ಒಪ್ಪಬೇಕು, ಕೆಲವನ್ನಷ್ಟೆ ಒಪ್ಪಬಹುದೆ ಅಥವ ಅವುಗಳಲ್ಲಿಯ ಕೆಲವನ್ನು ಭಾಗಶಃ ಒಪ್ಪಬೇಕೆ ಎಂಬುದರ ಬಗ್ಗೆ ನಿರ್ಧಾರಕ್ಕೆ ಬರಬೇಕಾಗುತ್ತದೆ. ಈ ಕೆಲವು ಅಂಶಗಳನ್ನು ಸರಕಾರವು ಗಮನಿಸಬೇಕಾಗುತ್ತದೆ. ಈಗಿನ ಅಧಿವೇಶನದಲ್ಲಿ ಕೆಲ ಸನ್ಮಾನ್ಯ ಸದಸ್ಯರು ಈ ವರದಿಯನ್ನು ವಿವರವಾಗಿ ಚರ್ಚಿಸದೆ. ಕೇವಲ ಕರಾಕರಣೆಯ ಬಗೆಗಿನ ಸಮಿತಿಯ ಶಿಫಾರಸುಗಳನ್ನು ಸರಕಾರ ಒಪ್ಪಿ ಮುಂದುವರಿಯುವುದು ಸರಿಯಲ್ಲ ಎಂದು ಸೂಚಿಸಿದರು. ಸದಸ್ಯರ ಸೂಚನೆಗಳನ್ನು ಗೌರವಾನ್ವಿತ ವರದಿಯ ಚರ್ಚೆಗಾಗಿ ಸರಕಾರವು ನಾಲ್ಕು ದಿನಗಳ ಚರ್ಚೆಗೆ ಒಪ್ಪಿಕೊಂಡಿತು. ಚರ್ಚೆಯಲ್ಲಿ ಸದಸ್ಯರು ವಿಭಿನ್ನ ಅಂಶಗಳನ್ನು ಎತ್ತಿ ತೋರಿಸಿದರು.

ಆ ಎಲ್ಲ ಸದಸ್ಯರು ಎತ್ತಿದ ಎಲ್ಲ ಅಂಶಗಳಿಗೆ ಉತ್ತರಿಸಲು ನನ್ನಿಂದ ಸಾಧ್ಯವಾಗದಿರಬಹುದು. ಆದರೆ ಸನ್ಮಾನ್ಯ ಸದಸ್ಯರು ಎತ್ತಿದ ಕೆಲ ಮಹತ್ವದ ಅಂಶಗಳ ಬಗ್ಗೆ ಹೇಳಲು ಪ್ರಯತ್ನಿಸುವೆ. ಸನ್ಮಾನ್ಯ ಸದಸ್ಯರು ವ್ಯಕ್ತಪಡಿಸಿದ ತಮ್ಮ ದೃಷ್ಟಿಕೋನಗಳ ಬಗ್ಗೆ ಹಾಗೂ ಅದರಲ್ಲಿಯ ತೊಂದರೆಗಳ ಬಗ್ಗೆ ಸರಕಾರವು ಕೆಲಸಮಯದ ನಂತರ ಗಮನಿಸುತ್ತದೆ. ಸರಕಾರ ಒಪ್ಪುವ ಕೆಲವು ಶಿಫಾರಸ್ಸುಗಳ ಬಗ್ಗೆ ಅವಶ್ಯಕ ಕ್ರಮವನ್ನು ತೆಗೆದುಕೊಳ್ಳುತ್ತದೆ. ಸರಕಾರ ಕೆಲವು ಸಮಿತಿಗಳನ್ನು ನೇಮಿಸುತ್ತದೆ. ಆದರೆ ಕೆಲ ಸನ್ಮಾನ್ಯ ಸದಸ್ಯರು ಹೇಳ-ಹೇಳುತ್ತ ಟೀಕಿಸಿದ್ದಾರೆ. ಅದು ಸರಿಯಲ್ಲ. ಅದಕ್ಕೆಂದೇ ನಾನು ಇದೀಗ ಹೇಳಿದೆ. ಶಿಫಾರಸ್ಸುಗಳು ಒಂದು ವೇಳೆ ಉಪಯುಕ್ತ ಎನಿಸಿದರೆ ಅವುಗಳನ್ನು ಸರಕಾರ ಒಪ್ಪುತ್ತದೆ ಮತ್ತು ಅವುಗಳ ಬಗ್ಗೆ ಕ್ರಮವನ್ನು ತೆಗೆದುಕೊಳ್ಳುತ್ತದೆ. ಇದರಂತೆಯೇ ಗೋರವಾಲಾ ಸಮಿತಿಯ ವರದಿಯನ್ನು ಪರಿಶೀಲಿಸಿತ್ತು ಮತ್ತು ಆ ವರದಿಯ ಒಂದೆರಡು ಶಿಫಾರಸ್ಸುಗಳು ಉಪಯುಕ್ತವೆಂದು ತೋರಿದಾಗ ತಾತ್ಕಾಲಿಕವಾಗಿ ಇಂದಿಗೂ ಕೂಡ ಅವುಗಳನ್ನು ಜಾರಿಯಲ್ಲಿಟ್ಟಿದ್ದೇವೆ ಮತ್ತು ಒಂದು ವೇಳೆ ಅವು ಸಫಲವೆಂದು ಸಿದ್ಧವಾದರೆ ಅವುಗಳನ್ನು ಒಪ್ಪಿಕೊಂಡು ಸಚಿವಾಲಯದ ಕಾರ್ಯವಿಧಾನದಲ್ಲಿ ಅವುಗಳನ್ನು ಶಾಶ್ವತವಾಗಿ ರೂಢಿಯಲ್ಲಿ ತರುತ್ತೇವೆ.

ಸಧ್ಯದ ವರದಿಯ ಬಗ್ಗೆ ಬರುತ್ತ, ಕರಾಕರಣೆಯ ಶಿಫಾರಸುಗಳ ಮೇಲೆ ಕ್ರಮಗಳನ್ನು ಕೈಕೊಳ್ಳುವ ಮೊದಲೇ ಈ ವರದಿಯನ್ನು ಚರ್ಚಿಸಬೇಕಾಗಿತ್ತು ಎಂದು ವಿರೋಧ ಪಕ್ಷದ ನಾಯಕರು ಹೇಳಿದರು ಮತ್ತು ಚರ್ಚೆಯ ಮೊದಲೇ ತೆರಿಗೆಯ ಮಸೂದೆಯನ್ನು ಮಂಡಿಸಿದ ಬಗ್ಗೆ ದೂರಿದರು. ವರದಿಯನ್ನು ಚರ್ಚಿಸಲು ಮೊದಲೇ ಸಭೆಯ ಮುಂದೆ ತೆರಿಗೆಯ ಮೊದಲೇ ತೆರಿಗೆಯ ಮಸೂದೆಯನ್ನು ಇಟ್ಟದ್ದೇ ಪ್ರಧಾನ ಆಕ್ಷೇಪಣೆ ಎಂದು ಕಾಣುತ್ತದೆ. ತೃತೀಯ ಯೋಜನೆಯ ಸಂಪನ್ಮೂಲಗಳ ಲೆಕ್ಕ ಹಾಕುವಾಗ ನಾವು ಬರಬಹುದಾದ ರಾಜ್ಯದ ಆದಾಯದಲ್ಲಿಯ ಹೆಚ್ಚಳವನ್ನು ಮತ್ತು ಸಂಭವನೀಯ ಖರ್ಚಿನಲ್ಲಿಯ ಹೆಚ್ಚಳವನ್ನು ಗಮನದಲ್ಲಿಟ್ಟುಕೊಂಡಿದ್ದೇವೆಂದು ಈ ಸಭೆಯಲ್ಲಿ ನಾನು ಹೇಳಬಯಸುತ್ತೇನೆ. ತೃತೀಯ ಯೋಜನೆಯ ಅಂತಿಮ ರೂಪದ ಬಗ್ಗೆ ಯೋಜನಾ ಆಯೋಗದೊಂದಿಗೆ ಚರ್ಚಿಸಲು ಹೋದಾಗ ಆ ಎಲ್ಲ ಅಂಶಗಳನ್ನು ಗಮನಿಸಿದ್ದೇವೆ. ಆದಾಯದಲ್ಲಿಯ ಸಂಭವನೀಯ ಹೆಚ್ಚಳವನ್ನು ಗಮನಿಸಿ ಮೂರನೆಯ ಯೋಜನೆಯ ಅವಧಿಯಲ್ಲಿ ಪ್ರತಿಶತ 40 ರಷ್ಟು ಆದಾಯದ ಹೆಚ್ಚಳವಾಗುತ್ತದೆಂದು ಇತ್ಯರ್ಥಕ್ಕೆ ಬಂದಿದ್ದೇವೆ. 250 ಕೋಟಿ ರೂಪಾಯಿಗಳ ಮೂರನೆಯ ಯೋಜನೆಯನ್ನು ಒಪ್ಪುವ ಮೊದಲೇ ನಾವು ಅದನ್ನು ಗಮನದಲ್ಲಿಟ್ಟುಕೊಂಡಿದ್ದೇವೆ. ಮತ್ತೆ 250 ಕೋಟಿ ರೂಪಾಯಿಗಳ ಯೋಜನೆಗೆ ಒಪ್ಪುವ ಸಮಯದಲ್ಲಿ ಅಂದಾಜು 6 ಕೋಟಿ ರೂಪಾಯಿಗಳನ್ನು ಬೆಟರಮೆಂಟ್ ಚಾರ್ಜ ಎಂದು ಮತ್ತು 4 ರಿಂದ 5 ಕೋಟಿ ರೂಪಾಯಿಗಳ ನೀರಿನ ಕರವೆಂದು ಸರಕಾರ ಸಂಗ್ರಹಿಸಬಹುದೆಂದು ಸಹ ಯೋಚಿಸಿದೆ. ಮೂರನೆಯ ಯೋಜನೆಯ ರೂಪರೇಷೆಗಳನ್ನು ಚರ್ಚಿಸುವಾಗ ಈ ಅಂಶಗಳನ್ನು ಸಹ ಪರಿಶೀಲಿಸಿದ್ದೇವೆ. ಆದ್ದರಿಂದ 110 ಕೋಟಿ ರೂಪಾಯಿಗಳಷ್ಟು ರಾಜ್ಯದ

ಪಾಲನ್ನು ಒದಗಿಸುವಾಗ ಯಾವ ಮೂಲಗಳಿಂದ ಆದಾಯವನ್ನು ನಿರೀಕ್ಷಿಸಬಹುದೆಂದು ವಿಚಾರಿಸಬೇಕಾಗಿತ್ತು ಎಂದು ಹೇಳುವುದು ಸರಿಯಲ್ಲ. ಇದು 110 ಕೋಟಿ ರೂಪಾಯಿಗಳ ಹೊರತಾಗಿ ಬರುವಂಥದು, ಅದಕ್ಕೆಂದೇ ನಾನು ಹೇಳಿದ್ದು 110 ಕೋಟಿ ರೂಪಾಯಿಗಳನ್ನು ಹೊಂದಿಸಲು 42 ಕೋಟಿ ರೂಪಾಯಿಗಳ ಸಂಪನ್ಮೂಲ ಬೇಕಾಗುತ್ತದೆ ಎಂದು.

ಇನ್ನು ಮುಂದೆ, ತೆರಿಗೆ ಕಾನೂನನ್ನು ತಂದಾಗ, ಸಭೆಯ ಮುಂದೆ ಮಸೂದೆಗಳನ್ನು ಮಂಡಿಸಿದ ನಂತರವೇ ಚರ್ಚಿಸಲಾಗುವುದು. ಕೆಲ ಸನ್ಮಾನ್ಯ ಸದಸ್ಯರು ತೆರಿಗೆ ಕಾನೂನಿನ ಬಗ್ಗೆ ಅವರನ್ನು ಸಂಪರ್ಕಿಸಲು ಸೂಚಿಸಿದರು. ಅವರು ತಮ್ಮ ಅಭಿಪ್ರಾಯಗಳನ್ನು ಕೊಡಲಿ, ಇಲ್ಲಿಯಾಗಲಿ, ಇತರತ್ರವಾಗಲಿ, ಚರ್ಚೆಯ ಮೊದಲೇ ಪ್ರಕಟಿಸುವುದು ಒಂದು ರೂಢಿ ಅಥವಾ ಸಂಪ್ರದಾಯವಾಗಿದೆ. ಪ್ರಕಟಣೆಯ ಮೊದಲು ನಾವು ಚರ್ಚಿಸಿದರೆ, ಆನಂತರ ಗಂಭೀರ ಪ್ರತಿಘಾತದ ಸಾಧ್ಯತೆ ಇದೆ. ಆದ್ದರಿಂದ ಮೊದಲು ಚರ್ಚಿಸುವುದು ಆನಂತರ ಮಸೂದೆಯನ್ನು ಮಂಡಿಸುವುದು ಮತ್ತು ಶಾಸನ ಸಭೆಯಲ್ಲಿ ಚರ್ಚಿಸುವ ರೂಢಿ. ಇಲ್ಲ ಸನ್ಮಾನ್ಯ ಸದಸ್ಯರ ಅವಗಾಹನೆಗೆ ತರಬೇಕೆಂದರೆ ಪಾಸಾದ ತೆರಿಗೆ ಕಾನೂನುಗಳಿಂದ ಸಹ 42 ಕೋಟಿ ರೂಪಾಯಿಗಳ ಪ್ರತಿಶತ 50 ರಷ್ಟನ್ನು ಸಹ ಸಂಗ್ರಹಿಸಲು ಸಾಧ್ಯವಾಗದಿರಬಹುದೆಂದು ನಾನು ಹೇಳಬಹುದು. ಅದರರ್ಥ ಈ ಮನೆ ಹಾಗು ಮೇಲ್ಮನೆಗಳಲ್ಲಿ 7 ತೆರಿಗೆ ಮಸೂದೆಗಳನ್ನು ಪಾಸು ಮಾಡಿದರೂ ಸಹ 20 ಕೋಟಿ ರೂಪಾಯಿಗಳನ್ನು ದೊರಕಿಸುವುದು ಸಾಧ್ಯವಾಗಬಹುದು. ನಮಗೆ ಬೇಕಾದದ್ದು 42 ಕೋಟಿ ರೂಪಾಯಿಗಳು. ಇದು ಇದ್ದ ಪರಿಸ್ಥಿತಿ. ಇದನ್ನು ನಾನು ಸಭೆಯ ಮುಂದೆ ಹೇಳಬಯಸುವೆ. ಈಗ ಇರುವ ಪ್ರಶ್ನೆಯೆಂದರೆ ನಾವು ಮೂರನೆಯ ಪಂಚವಾರ್ಷಿಕ ಯೋಜನೆ ರೂಪರೇಷೆಗಳಿಗೆ ಬದ್ಧರಾಗಿರಬೇಕೆ ಎಂಬುದಾಗಿದೆ. 250 ಕೋಟಿ ರೂಪಾಯಿಗಳ ಯೋಜನೆಯನ್ನು ಜಾರಿಗೆ ತರುವುದಾದರೆ, ತೆರಿಗೆ ಹೆಚ್ಚಳದ ಪ್ರಯತ್ನಕ್ಕೆ ಹೋಗುವ ಪ್ರಶ್ನೆ ಆದಾಗ್ಯೂ ತೆರಿಗೆ ಪ್ರಯತ್ನವನ್ನು ಬಿಟ್ಟರೆ ನಮ್ಮ ಯೋಜನೆಯ ಗಾತ್ರವನ್ನು ಕುಗ್ಗಿಸಬೇಕು. ಕೆಲಸಮಯದ ಹಿಂದೆ ಹೇಳಿದ್ದನ್ನೇ ಮತ್ತೆ ನಾನು ಹೇಳಬಯಸುವೆ, ಈ ಸಭೆಯ ಸದಸ್ಯರ ಮತ್ತು ಮೇಲ್ಮನೆಯ ಸದಸ್ಯರ ಸಲಹೆಯನ್ನು ಪಡೆದೇ ನಾವು ಮೂರನೆಯ ಪಂಚವಾರ್ಷಿಕ ಯೋಜನೆಯ ಗಾತ್ರವು 300 ಕೋಟಿ ರೂಪಾಯಿಗಳಿಗಿಂತ ಕಡಿಮೆಯಾಗಿರಬಾರದೆಂದು ಇತ್ಯರ್ಥಕ್ಕೆ ಬಂದಿದ್ದೇವೆ. ಯಾವುದೇ ಸಂದರ್ಭದಲ್ಲಿ ಇದು 300 ಕೋಟಿ ರೂಪಾಯಿಗಳಿಗಿಂತ ಕಡಿಮೆಯಾಗಿರಬಾರದೆಂದು ಈ ಶಾಸನ ಸಭೆಯಲ್ಲಿ ಸೂಚಿಸಲಾಗಿತ್ತು. ಅಂದಾಜು 300 ಕೋಟಿ ರೂಪಾಯಿಗಳ ಯೋಜನೆಗಳನ್ನು ಒಪ್ಪಿದ ನಂತರ ನಾವು ಎಲ್ಲ ಜಿಲ್ಲೆಗಳಲ್ಲಿ ಈ ಯೋಜನೆಗಳನ್ನು ಹಮ್ಮಿಕೊಳ್ಳುತ್ತೇವೆ ಎಂದು ಹೇಳಿದೆವು. ಈಗ ಹಣವನ್ನು ಸಂಗ್ರಹಿಸುವುದಾದರೆ ಅದು ಈ ಶಾಸನ ಸಭೆಯ ಪ್ರತಿಷ್ಠೆಯ ಸರಕಾರ ಮತ್ತು ಪ್ರತಿಯೊಬ್ಬ ನಾಗರಿಕರನ್ನು ಪೇಚಿನಲ್ಲಿ ಸಿಕ್ಕಿಸಿದಂತಾಗುತ್ತದೆ. ಆದ್ದರಿಂದ ಈ ಮನೆಯ ಮತ್ತು ಮೇಲ್ಮನೆಯ ಸನ್ಮಾನ್ಯ ಸದಸ್ಯರು ಮುಂದೆ ಬಂದು ಸರಕಾರಕ್ಕೆ ಸಹಾಯ ಮಾಡಬೇಕು. ಮತ್ತು ಈ ಸಭೆ ಒಪ್ಪಿದ ಯೋಜನೆಯ

ಗಾತ್ರವನ್ನು ಸರಿತೂಗಿಸಲು 42 ಕೋಟಿ ರೂಪಾಯಿಗಳ ಹೊಂದಾಣಿಕೆ ಮಾಡಲು ಪ್ರಯತ್ನಿಸಬೇಕೆಂದು ನಾನು ವಿನಂತಿಸಿಕೊಳ್ಳುತ್ತೇನೆ. ಸನ್ಮಾನ್ಯ ಸದಸ್ಯರಾದ ಶ್ರೀ ಸಿದ್ಧಪ್ಪನವರು ಭಾರತದ ಸರಾಸರಿ ಅರ್ಧ ಮತ್ತು ಮದ್ರಾಸಕ್ಕಿಂತ ಕಡಿಮೆ ನೀರಾವರಿ ಇದೆಯೆಂದು ಎತ್ತಿ ತೋರಿಸಿದರು. ಹೌದು ಅದನ್ನು ನಾವು ಒಪ್ಪಬೇಕು. ಯಾಕೆಂದರೆ ಸನ್ಮಾನ್ಯಸದಸ್ಯರೆಲ್ಲರಿಗೆ ಗೊತ್ತಿದ್ದಂತೆ ಮೈಸೂರು ರಾಜ್ಯದಲ್ಲಿ ಒಂದೇ ಒಂದು ಭಾರೀ ನೀರಾವರಿ ಯೋಜನೆ ಪೂರ್ತಿಗೊಂಡಿದೆ. ಅದು, ಕೃಷ್ಣ ರಾಜಸಾಗರ ಇನ್ನುಳಿದ ಯೋಜನೆಗಳಾದ ಭದ್ರಾ, ತುಂಗಾ ಮತ್ತು ನುಗು ಯೋಜನೆಗಳು ರಾಜ್ಯ ಪುನರ್ ನಿರ್ಮಾಣದ ಸಂದರ್ಭದಲ್ಲಿ ಪ್ರಗತಿಯಲ್ಲಿದ್ದುವು. ಒಂದುಗೂಡಿದ ರಾಜ್ಯದಲ್ಲಿ ಬಳ್ಳಾರಿ ಸೇರಿದಾಗ, ತುಂಗಭದ್ರಾ ಯೋಜನೆ ನಮಗೆ ಬಂದಿತು. ನೀರಾವರಿ ಉದ್ದೇಶದಿಂದ ನೀರನ್ನು ತೆಗೆದುಕೊಂಡರೂ ಭೂಮಿ ಅಭಿವೃದ್ಧಿಗೊಂಡಿಲ್ಲ. ಅದರಂತೆ ಬೆಳಗಾವಿ ವಿಭಾಗದಲ್ಲಿ ಘಟಪ್ರಭಾ ಯೋಜನೆ, ಕಾಲುವೆಗಳಿವೆ, ಆದರೆ ನೀರಿನ ಸಂಗ್ರಹಣೆಗೆ ಡ್ಯಾಮನ್ನು ಕಟ್ಟಿಲ್ಲ. ಈಗ ಸರಕಾರ ಆ ಕೆಲಸವನ್ನು ಕೈಗೆತ್ತಿಕೊಂಡಿದೆ. ಬಹುಶಃ ಮೂರನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದ ವೇಳೆಗೆ ಅಣೆಕಟ್ಟು ಪೂರ್ತಿಯಾಗುತ್ತದೆ. ಆದ್ದರಿಂದ ಈ ಎಲ್ಲ ಅಂಶಗಳನ್ನು ನೋಡಿದಾಗ, ಈ ಎಲ್ಲ ಯೋಜನೆಗಳು ಪೂರ್ತಿಗೊಳ್ಳುವವರೆಗೆ, ಅವಕಾಶಗಳನ್ನು ಹೊಂದಿದ ರಾಜ್ಯಗಳೊಂದಿಗೆ ನಮ್ಮನ್ನು ನಾವು ಹೋಲಿಸಿಕೊಳ್ಳಬಾರದೆಂಬುದನ್ನು ಸನ್ಮಾನ್ಯ ಸದಸ್ಯರು ಒಪ್ಪಿಕೊಳ್ಳಲೇಬೇಕಾಗುತ್ತದೆ. ರಾಜ್ಯ ಪುನರ್ ನಿರ್ಮಾಣವಾದನಂತರ ನಾವು ಅಧಿಕ ಪ್ರಯತ್ನದೊಂದಿಗೆ, ಆಗಲೆ ನಿರ್ಮಾಣದಲ್ಲಿ ಇರುವ ಯೋಜನೆಗಳನ್ನು ಪೂರ್ತಿಗೊಳಿಸಬೇಕು. ಮತ್ತೆ ಹೇಳಬೇಕೆಂದರೆ, ಅಧ್ಯಕ್ಷರೆ, ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸಿದ ಭಾರೀ ನೀರಾವರಿ ಯೋಜನೆಗಳು ಒಂದೆರಡು ವರುಷಗಳಲ್ಲಿ ಪೂರ್ತಿಗೊಳ್ಳದಿರಬಹುದು. ಮೂರನೆಯ ಪಂಚವಾರ್ಷಿಕ ಯೋಜನೆ ಮುಗಿಯುವಾಗ ಕೂಡ ಅವುಗಳು ಪೂರ್ತಿಗೊಳ್ಳದಿರಬಹುದು. ಅವುಗಳನ್ನು ನಾಲ್ಕನೆಯ ಪಂಚವಾರ್ಷಿಕ ಯೋಜನೆಯಲ್ಲು ಪೂರ್ತಿಗೊಳ್ಳದೆ ಉಳಿದ ಯೋಜನೆಗಳೆಂದು ಮುಂದುವರಿಸಬೇಕಾಗುತ್ತದೆ. ಈ ಭಾರೀ ನೀರಾವರಿ ಯೋಜನೆಗಳು ಪೂರ್ತಿಗೊಳ್ಳದ ಹೊರತು ನೀರಾವರಿ ಭೂಮಿ ಕೂಡ ವೃದ್ಧಿಯಾಗದು.

* ಶ್ರೀ ಎಸ್. ಶಿವಪ್ಪ: ಈ ಯೋಜನೆಗಳು ಫಲಕಾರಿಯಾಗುವಲ್ಲಿ ತಡವಾದ ಕಾರಣಗಳೇನು?

*ಶ್ರೀ ಬಿ. ಡಿ. ಜತ್ತಿ: ಕೆಲವು ತಿಂಗಳ ಮಟ್ಟಿಗೆ ತಡವಾಗಬಹುದು ರಾಜ್ಯ ಪುನರ್ ನಿರ್ಮಾಣದ ಹೊಸ್ತಿಲಲ್ಲಿಯ ಚಿತ್ರವನ್ನು ನಾನು ಕೊಟ್ಟೆನು. ರಾಜ್ಯ ಪುನರ್ ನಿರ್ಮಾಣವಾದ ನಂತರ ನಾವು ಎಲ್ಲರು ಕೆಲವು ಶಕ್ತಿಗಳೊಂದಿಗೆ ಹೋರಾಡುತ್ತಿದ್ದೇವೆ ಮತ್ತು ಈ ಕ್ಷೇತ್ರದಲ್ಲೂ ನಮಗೆ ಹೋರಾಡಲು ಸಾಧ್ಯವಿದೆ. ಇಲ್ಲವಾದಲ್ಲಿ ಜನರು ಒಂದುಗೂಡದಿದ್ದರೆ ಅದು ಕೂಡ ಸಾಧ್ಯವಾಗುವುದಿಲ್ಲ. ಏನೇ ಆಗಲಿ ಈ ಎಲ್ಲ ವಿಷಯಗಳಲ್ಲಿ ಅದು ಜಲವಿದ್ಯುತ್ ಆದೀತು ಅಥವ ನೀರಾವರಿ ಯೋಜನೆ ಇದ್ದೀತು ನಿಗದಿತ ಅವಧಿಯಲ್ಲಿ ಪವಾಡ ಸದೃಶ ಫಲವನ್ನು

ಅಪೇಕ್ಷಿಸುವುದು ಸಾಧ್ಯವಿಲ್ಲ. ಮತ್ತು ಇಷ್ಟೊಂದು ಕಡಿಮೆ ಅವಧಿಯಲ್ಲಿ ಅಂಥ ಭಾರೀ ಯೋಜನೆಗಳನ್ನು ಪೂರ್ತಿಗೊಳಿಸುವುದೂ ಸಾಧ್ಯವಿಲ್ಲ.

ಕೆಲ ಸನ್ಮಾನ್ಯ ಸದಸ್ಯರು ಯೋಜನಾವೆಚ್ಚ ಅಧಿಕವಾಗುತ್ತಿರುವ ಬಗ್ಗೆ ಉಲ್ಲೇಖಿಸಿದರು. ನಾವು ಅದನ್ನು ಒಪ್ಪುತ್ತೇವೆ. ವಸ್ತುಗಳು ಮತ್ತು ಲೇಬರ್ ಚಾರ್ಜುಗಳು ಹೆಚ್ಚಿದ್ದರಿಂದ ಯೋಜನಾ ವೆಚ್ಚವೂ ಅಧಿಕವಾಗಲೇಬೇಕಾಗುತ್ತದೆ. ಅಧ್ಯಕ್ಷರೆ, ವಸ್ತುಗಳು ಮತ್ತು ಕೂಲಿಯ ದರ ಕಡಿಮೆ ಇದ್ದಾಗ ಅಂದಿನ ಸರಕಾರ ಈ ಎಲ್ಲ ಯೋಜನೆಗಳನ್ನು ತೆಗೆದುಕೊಳ್ಳಬಹುದಾಗಿತ್ತು. ಆದರೆ ಆ ಸಮಯದಲ್ಲಿ ತೊಂದರೆ ಎಂದರೆ ಅವರಿಗೆ ಸಾಲುವಷ್ಟು ಹಣ ದೊರೆಯಲಿಲ್ಲ. ಆದ್ದರಿಂದ ಅವರು ಇಂಥ ನೀರಾವರಿ ಯೋಜನೆಗಳನ್ನು ತೆಗೆದುಕೊಳ್ಳಲಿಲ್ಲ. ಈಗ ವಸ್ತುಗಳ ಮತ್ತು ಕೂಲಿಯ ದರ ಹೆಚ್ಚಿದಾಗಲೂ ಕೂಡ ನಮ್ಮ ದೇಶದ ಮತ್ತು ನಮ್ಮ ರಾಜ್ಯದ ಜನರ ಆರ್ಥಿಕ ಸ್ಥಿತಿಯನ್ನು ಅಭಿವೃದ್ಧಿಪಡಿಸುವುದು ಅವಶ್ಯಕವಾಗಿದೆ. ಆದ್ದರಿಂದ ನಾವು ಈ ಎಲ್ಲ ಯೋಜನೆಗಳನ್ನು ಕೈಗೆತ್ತಿಕೊಂಡಿದ್ದೇವೆ. ವಸ್ತುಗಳ ಮತ್ತು ಕೂಲಿಯ ದರ ಹೆಚ್ಚುತ್ತ ಹೋದರೂ ನಾವು ಅವುಗಳನ್ನು ಪೂರ್ತಿಗೊಳಿಸಬೇಕು ಮತ್ತು ರಾಜ್ಯದ ಜನತೆಗೆ ಒಳ್ಳೆಯ ಪರಿಹಾರ ನೀಡಿ ಬದುಕನ್ನು ಸಂತಸಗೊಳಿಸಬೇಕು. ಆದರೂ ನೀರಾವರಿ ಯೋಜನೆಗಳನ್ನು ಪೂರ್ತಿಗೊಳಿಸಲು ಮೈಸೂರು ಸರಕಾರಕ್ಕೆ ಕೆಲವು ತೊಂದರೆಗಳಿವೆ. ನಾವು ಬಜೆಟ್‌ನ್ನು ಪಾಸು ಮಾಡಿದೆವು. ಆದರೆ ಏನಾಯಿತು? ಬಜೆಟ್ ಪಾಸು ಮಾಡಿದ ವರುಷದಲ್ಲೆ ಅಥವಾ ನಂತರ ಕೆಲವು ಪ್ರದೇಶಗಳನ್ನು ಅಭಾವ ಅಥವಾ ಬರಪೀಡಿತ ಪ್ರದೇಶಗಳೆಂದು ಅಥವ ಪ್ರವಾಹ ಪೀಡಿತ ಇಲ್ಲವೆ ಇಂಥದೇ ತೊಂದರೆಗೊಳಗಾದ ಪ್ರದೇಶಗಳೆಂದು ಘೋಷಣೆ ಮಾಡಬೇಕಾಗುತ್ತದೆ. ಆಗ ಕ್ರಮವಾಗಿ ನಡೆದ ಈ ಯೋಜನೆಗಳ ಸಿಬ್ಬಂದಿಯನ್ನು ಈ ಕೆಲಸಕ್ಕೆ ಉಪಯೋಗಿಸಬೇಕಾಗುತ್ತದೆ. ಅದರಂತೆ ಯೋಜನೆ ಪೂರ್ತಿಗೊಳ್ಳಲು ಉಪಯೋಗಿಸಬೇಕೆಂದಿದ್ದ ಹಣವನ್ನು ಅಭಾವ ಪರಿಸ್ಥಿತಿಗೆ ಅಥವ ಬರ ಪೀಡಿತ ಪ್ರದೇಶಗಳಿಗೆ ಉಪಯೋಗಿಸಲಾಗುತ್ತಿತ್ತು. ಆಗ ತುಸು ತಡವಾಗುತ್ತದೆ ಮತ್ತು ಕಿಂಚಿತ್ ಅಧಿಕ ಹಣವೂ ಖರ್ಚಾಗುತ್ತದೆ. ಯಾಕೆಂದರೆ ದಿನದಿಂದ ದಿನಕ್ಕೆ ವಸ್ತುಗಳ ಬೆಲೆಗಳು ಏರುತ್ತಲೆ ನಡೆದಿವೆ. ಅಧ್ಯಕ್ಷರೆ, ಇದೇ ಸನ್ಮಾನ್ಯ ಸದಸ್ಯರಾದ ಶ್ರೀ ಶಿವಪ್ಪನವರು ವರದಿಯನ್ನು ಉಲ್ಲೇಖಿಸುತ್ತ ಸಚಿವಾಲಯದಲ್ಲಿಯ ತಡವಾಗುವುದರ ಬಗ್ಗೆ ಉಲ್ಲೇಖಿಸಿದರು. ಸನ್ಮಾನ್ಯ ಸದಸ್ಯರಿಗೆ ನಾನು ಕಿಂಚಿತ್ ಅಧಿಕ ಮಾಹಿತಿಯನ್ನು ಕೊಡಬಯಸುತ್ತೇನೆ. ಯಾಕೆಂದರೆ ನಾನು ಕೂಡ ಒಂದು ಮಹತ್ವದ ಪತ್ರಿಕೆಯಲ್ಲಿಯ ಕೆಲವು ಸುದ್ದಿ ಪತ್ರಗಳನ್ನು ಓದಿದ್ದೇನೆ. ಅನುಸರಿಸುತ್ತಿರುವ ಸರಿಯಾದ ವಿಧಾನವನ್ನು ತಿಳಿಸುವುದು ಸೂಕ್ತವೆನ್ನಿಸುತ್ತದೆ. ಸಚಿವಾಲಯದಲ್ಲಿಯ ಕಾರ್ಯ ವಿಧಾನ ಕುರಿತು ತಪ್ಪು ಚಿತ್ರ ಕೊಡುವ ಸಮಿತಿಯ ಅಭಿಪ್ರಾಯಗಳು ಅತ್ಯಂತ ದುರ್ದೈವವಾದವುಗಳಾಗಿವೆ. ಅವರು ಹೇಳಿದ ಪ್ರತಿಯೊಂದು ಇಲಾಖೆಯಿಂದ ಕಾರ್ಯ ವಿಧಾನದ ಮೇಲೆ ಬೆಳಕು ಚೆಲ್ಲಲಾರವು. ಅಧ್ಯಕ್ಷರೆ, ಅತ್ಯಂತ ಸರಳವಾದ ವಿಷಯಗಳಿಂದ ಹಿಡಿದು ಅತ್ಯಂತ ಜಟಿಲವಾದ ವಿಷಯದವರೆಗೆ, ಫೈಲುಗಳ

ಬಗ್ಗೆ ಯಾರಾದರೂ ಉಲ್ಲೇಖಿಸುತ್ತಾರೆ. ಅಂದರೆ ಯಾವುದೇ ಪತ್ರವ್ಯವಹಾರಕ್ಕೆ ಫೈಲು ಎನ್ನಲಾಗುವುದಿಲ್ಲ. ಯಾಕೆಂದರೆ, ಒಂದು ವಿಶೇಷ ಕಾಗದ ಫೈಲು ಎಂದು ಕರೆಯಿಸಿಕೊಳ್ಳಲಾಗದು ಮತ್ತು ಫೈಲುಗಳಲ್ಲಿ ಕೂಡ ಸರಳವಾದ ಫೈಲುಗಳಿವೆ. ಜಟಿಲವಾದ ಫೈಲುಗಳಿವೆ. ಇನ್ನೂ ಕೆಲವು ಫೈಲುಗಳಲ್ಲಿ ಮಹತ್ವದ ಧೋರಣೆಗಳನ್ನು ಬಿಂಬಿಸುವ ಫೈಲುಗಳಿರುತ್ತವೆ. ಎಲ್ಲ ಫೈಲುಗಳನ್ನು ಆದೇಶಕ್ಕೆ ಮತ್ತು ಅದೇ ಪ್ರಾಧಾನ್ಯದಿಂದ ನೋಡುತ್ತಿದ್ದರೂ ಎಲ್ಲ ಫೈಲುಗಳನ್ನು ಒಂದೇ ಅವಧಿಯ ಅಡಿಯಲ್ಲಿ ನೋಡಲು ಸಾಧ್ಯವಾಗುವುದಿಲ್ಲ. ಧೋರಣೆಯ ವಿಷಯಗಳನ್ನೊಳಗೊಂಡ ಫೈಲುಗಳ ಬಗ್ಗೆ ಹೆಚ್ಚಿನ ಯೋಚನೆ ಬೇಕಾಗುತ್ತದೆ. ಮತ್ತಷ್ಟು ಮಾಹಿತಿಗಳನ್ನು ಕಲೆಹಾಕಿ ಅಂತಿಮ ನಿರ್ಣಯವನ್ನು ತೆಗೆದುಕೊಳ್ಳಬೇಕಾಗುತ್ತದೆ. ಕೆಲವು ಜಟಿಲ ವಿಷಯಗಳ ಫೈಲುಗಳನ್ನು ನೋಡುವಾಗ ವಿವಿಧ ಭಾಗಗಳಿಂದ ಮಾಹಿತಿಗಳನ್ನು ತರಿಸಿಕೊಳ್ಳಬೇಕಾಗುತ್ತದೆ.

*ಶ್ರೀ ಎಸ್.ಶಿವಪ್ಪ: ಒಂದು ಫೈಲನ್ನು ವಿಲೇವಾರಿ ಮಾಡಲು ಸರಾಸರಿ ಎಷ್ಟು ಸಮಯವನ್ನು ನೀವು ತೆಗೆದುಕೊಳ್ಳುತ್ತೀರಿ ?

ಶ್ರೀ ಬಿ.ಡಿ.ಜತ್ತಿ: ನಾನು ಎಲ್ಲ ಮಾಹಿತಿಯನ್ನು ಕೊಡುವೆ. ಎಲ್ಲ ಫೈಲುಗಳು ಪಾಲಿಸಿ ಮ್ಯಾಟರ್ಸ್‌ದಿಂದ ಕೂಡಿರುವುದಿಲ್ಲ ಅಥವ ಜಟಿಲವೂ ಆಗಿರುವುದಿಲ್ಲ. ಸರಳ ಫೈಲುಗಳೂ ಇರುತ್ತವೆ. ಆದ್ದರಿಂದ ನೀವು ಪ್ರತಿಯೊಂದು ಫೈಲಿಗೂ ಇಂತಿಷ್ಟೇ ಸಮಯ ಎಂದು ವಿಧಿಸಲಾಗದು. ಅವುಗಳು ಸರಳ ಫೈಲುಗಳಾಗಿದ್ದರೆ ಒಂದೇ ನಿಮಿಷದಲ್ಲಿ ವಿಲೇವಾರಿ ಮಾಡಬಹುದು. ಅರ್ಥ ಮಂತ್ರಿಯಾಗಿ ನಾನು ಪ್ರತಿ ದಿನ 20 ಫೈಲುಗಳು ಬರುತ್ತವೆ. ಪ್ರವಾಸ ಭತ್ಯೆ ಪಡೆಯಲು ಸಲ್ಲಿಸಲು ತಡವಾದುದಕ್ಕೆ ಮನ್ನಿಸಲು, ಅಥವ ಇನ್‌ಕ್ರಿಮೆಂಟ್ ಪಡೆಯಲು ತಡವಾದುದಕ್ಕೆ ಬಂದ ಫೈಲುಗಳನ್ನು ನಾನು ತಕ್ಷಣ ನಿರ್ಣಯ ತೆಗೆದುಕೊಳ್ಳುವೆ ಇವುಗಳೆಲ್ಲ ರುಟೀನ ವಿಷಯಗಳು. ಫೈಲಿನಲ್ಲಿಯ ಕೊನೆಯಸಾಲನ್ನು ಓದಿದ ತಕ್ಷಣ ಫೈಲನ್ನು ಮುಂದೆನೋಡುವ ಅವಶ್ಯಕತೆ ಇರುವುದಿಲ್ಲ. ಅವುಗಳಿಗೆ ಸಮಯ ಬೇಕಾಗುವುದಿಲ್ಲ. ಅಂಥ ಫೈಲುಗಳನ್ನು ಪ್ರತಿದಿನ 50 ಕ್ಕಿಂತ ಅಧಿಕ ವಿಲೇವಾರಿ ಮಾಡಬಹುದು. ಅದಕ್ಕೆ ಪ್ರಯತ್ನವೂ ಬೇಕಾಗುವುದಿಲ್ಲ. ಒಂದು ವೇಳೆ ಅದು ಶರಾವತಿಯ ಜಲ ವಿದ್ಯುತ್ ಶಕ್ತಿಯ ಫೈಲಿದ್ದರೆ ಮತ್ತು ಅದರಲ್ಲಿ ಕಂಟ್ರಾಕ್ಟರನಿಗೆ ಒಂದು ಬಗೆಯ ವಿಶಿಷ್ಟ ಮಂಜೂರಾತಿಯನ್ನು ನೀಡಬೇಕಾಗಿದ್ದರೆ, ಆಗ ನಿಗದಿಯಾದ ದರ ಎಷ್ಟು? ಪ್ರತಿಯೊಬ್ಬ ಕಂಟ್ರ್ಯಾಕ್ಟರ ಯಾವ ಯಾವ ಬಗೆಯ ಕೆಲಸ ಮಾಡಿದ್ದಾನೆ ಈ ವಿಷಯಗಳಲ್ಲಿ ಪರಿಶೀಲಿಸಬೇಕಾದರೆ, ಆರ್ಥಿಕ ಮಂಜೂರಾತಿಯನ್ನು ನೀಡಲು ವಿಷಯದ ಬಗ್ಗೆ ನಾವು ಆಳವಾಗಿ ವಿಚಾರಿಸಬೇಕಾಗುತ್ತದೆ ಅಥವ ಫೈಲುಗಳನ್ನು ಹೋಲಿಸುವುದಾದರೆ ಇಂಥ ಫೈಲುಗಳನ್ನು ವಿಲೇವಾರಿ ಮಾಡಲು ಅಧಿಕ ಸಮಯ ಬೇಕಾಗುತ್ತದೆ.

ಹೀಗಾಗಿ ಒಂದು ವಿಶಿಷ್ಟ ಫೈಲಿಗೆ ಅಧಿಕ ಸಮಯಬೇಕಾಯಿತು ಎಂದ ತಕ್ಷಣ ಸಚಿವಾಲಯದಲ್ಲಿಯ ಎಲ್ಲ ಫೈಲುಗಳಿಗೂ ತಡವಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ.

ಇಂಥದೊಂದು ಫೈಲಿಗೆ ಇಂತಿಷ್ಟೆ ಸಮಯ ಎಂದು ನಿಗದಿ ಮಾಡಲಾಗದು. ಅದು ವಿಷಯದ ಮೇಲೆ ಮತ್ತು ಸಂಬಂಧಿಸಿದ ಅಧಿಕಾರಿ ಅಥವ ಸಚಿವರ ಸಾಮರ್ಥ್ಯದ ಮೇಲೆ ಅವಲಂಬಿಸಿರುತ್ತದೆ. ಅಸೆಂಬ್ಲಿಯಲ್ಲಿ ನಾನು ಮೊದಲ ಬಾರಿ ಈ ಉತ್ತರವನ್ನು ಕೊಡುತ್ತಿಲ್ಲ ಮತ್ತು ಇದುವೆ ನನ್ನ ಮೊದಲ ಸ್ಥಳವೂ ಅಲ್ಲ. ಮುಂಬಯಿ ಸಚಿವಾಲಯದ ಕೆಲಸವನ್ನು ನೋಡಿರುವೆ. ಅಲ್ಲಿ ಕೂಡ ಸಮಯ ನಿಗದಿ ಮಾಡಿಲ್ಲ.

* ಶ್ರೀ ಎಸ್. ಶಿವಪ್ಪ: ಸಚಿವಾಲಯದಲ್ಲಿಯ ಫೈಲುಗಳ ವಿಲೇವಾರಿ ಬಗ್ಗೆ ಸರಕಾರಕ್ಕೆ ಸಮಾಧಾನವಿದೆಯೆ?

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ: ಐದು ವರುಷಗಳ ಬಗ್ಗೆ ಅವರು ಫೈಲುಗಳನ್ನು ಇಟ್ಟುಕೊಳ್ಳಬಹುದು ಯಾರೂ ಕೇಳಲಾರರು ಎಂದು ಅವರು ಹೇಳುತ್ತಿದ್ದಾರೆ.

* ಶ್ರೀ ಬಿ.ಡಿ. ಜತ್ತಿ: ನಾನು ಐದು ವರುಷಗಳವರೆಗೆ ಫೈಲುಗಳನ್ನು ಇಟ್ಟುಕೊಳ್ಳಬಹುದು ಎಂದು ಹೇಳುವಷ್ಟು ನನ್ನ ಸನ್ಮಾನ್ಯ ಸ್ನೇಹಿತರು ಅಸಹಾನುಭೂತಿ ಉಳ್ಳವರಾಗಿರಬಾರದು. ಪ್ರತಿಶತ 80 ರಷ್ಟು ಫೈಲುಗಳು ಅರ್ಥಮಂತ್ರಿಯ ಮುಖಾಂತರ ಹೋಗುತ್ತವೆ. ಅವುಗಳಲ್ಲಿಯ ಪ್ರತಿಶತ 80 ಅಥವ 90 ರಷ್ಟು ಫೈಲುಗಳು ಸಾಧ್ಯವಿದ್ದಷ್ಟು ಜಾಗ್ರತೆಯಾಗಿ, ತಡವಿಲ್ಲದೆ ವಿಲೇವಾರಿ ಆಗುತ್ತವೆಂದು ಯಾವ ಅಂಜಿಕೆಯಿಲ್ಲದೆ ಹೇಳಬಹುದು. ಈ ಮೂರು ತಿಂಗಳಲ್ಲಿ ನನಗೆ ಬಂದ ಅನುಭವ ಅದು. ಅದರಿಂದಾಗಿ ಅಲ್ಲಿ ತಡ ಎಂಬುದೇ ಇಲ್ಲ ಎಂದೂ ಹೇಳಲಾಗದು. ಕೆಲವು ಭಾಗಗಳಲ್ಲಿ ತಡ ಇದೆ. ಆದರೆ ಅದು ಎಷ್ಟರ ಮಟ್ಟಿನ ತಡ ಇದೆ ಮತ್ತು ಅದನ್ನು ಹೇಗೆ ಕಡಿತಗೊಳಿಸಬಹುದು ಮತ್ತು ತಡವಾಗುವ ಬಗ್ಗೆ ಪರಿಣಾಮಕಾರಿಯಾಗಿ ಹೇಗೆ ಮತ್ತು ಎಲ್ಲಿ ಅದನ್ನು ಚೆಕ್ ಮಾಡಬಹುದು ಎಂಬ ಬಗ್ಗೆ ನಾವು ಪರಿಶೀಲಿಸಬಹುದು ಮತ್ತು ಅದನ್ನೇ ನಾವು ಗಮನಿಸುತ್ತಿದ್ದೇವೆ. ನಾನು ತಡ ಆಗುವುದೇ ಇಲ್ಲ ಎಂದು ಹೇಳುತ್ತಿಲ್ಲ. ಆದರೆ ತಡ ಆಗುತ್ತಿದೆ. ಆದರೆ ಸಧ್ಯದ ವಿಷಯಕ್ಕೆ ಬಂದಾಗ ವರುಷದಲ್ಲಿ ಲಕ್ಷಾನುಗಟ್ಟಲೆ ಫೈಲುಗಳು ಸಚಿವಾಲಯದಲ್ಲಿ ಓಡಾಡುವಾಗ ಒಂದು ಇಲಾಖೆಯ ಐದಾರು ಫೈಲುಗಳನ್ನು ನೋಡಿ ಅಥವ ಎಲ್ಲ ಇಲಾಖೆಗಳಲ್ಲಿಯ ಒಟ್ಟು 30 ರಿಂದ 50 ಫೈಲುಗಳನ್ನು ನೋಡಿ ಸಚಿವಾಲಯದಲ್ಲಿಯ ಕೆಲಸ ಹೀಗೆ-ಹೀಗೆ ನಡೆಯುತ್ತದೆ ಎಂದು ಹೇಳುವುದು ಸರಿಯಲ್ಲ. ಅಧ್ಯಕ್ಷರೆ, 1961-62 ರಲ್ಲಿ ತೆರಿಗೆಯ ದರಗಳನ್ನು ಜಾರಿಗೊಳಿಸಿದ ಮೇಲೆ, ಅದು ಮುಂದಿನ ಐದು ವರುಷಗಳಲ್ಲಿ 10 ಕೋಟಿ ರೂಪಾಯಿಗಳನ್ನು ಸಂಗ್ರಹಿಸುತ್ತದೆ ಎಂದುಸನ್ಮಾನ್ಯ ಸದಸ್ಯರಾದ ಶ್ರೀ ಶಿವಪ್ಪನವರು ಹೇಳಿದರು. ಭೂಕಂದಾಯದ ಸರಚಾರ್ಜ ಬಗ್ಗೆ ಅವರ ಹೇಳಿಕೆಯ ಬಗ್ಗೆ, ಈ ವರೆಗೆ ಸರಚಾರ್ಜನ್ನು ಸಂಗ್ರಹಿಸಿಲ್ಲ ಎಂದು ನಾನು ಹೇಳಬಹುದು. ಯಾಕೆಂದರೆ ವಿಧಿನಿಯಮಗಳು ಇನ್ನೂ ನಿರ್ಣಯವಾಗಿಲ್ಲ. ಈಗ ಸರಚಾರ್ಜನ್ನು ತೆಗೆದುಕೊಂಡರೂ ಅದು ಮುಂದಿನ ಕೇವಲ ಮೂರು ವರುಷಗಳಿಗೆ ಮಾತ್ರ ವಾರ್ಷಿಕ 30 ಲಕ್ಷ ರೂಪಾಯಿ ಬರಬಹುದು. ಅದು ಮೂರು ವರುಷಗಳಲ್ಲಿ 90 ಲಕ್ಷ ರೂಪಾಯಿ ಆಗುತ್ತದೆ.

* ಶ್ರೀ ಎಂ.ಆರ್. ಪಾಟೀಲ (ಹುಬ್ಬಳ್ಳಿ): ಮುಂಬಯಿ ಕರ್ನಾಟಕದಲ್ಲಿ ಅದನ್ನು ಸಂಗ್ರಹಿಸಲಾಗಿದೆ.

* ಶ್ರೀ ಬಿ.ಡಿ. ಜತ್ತಿ: ಅದು ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಇರಬಹುದು. ಉಳಿದೆಲ್ಲ ಪ್ರದೇಶಗಳಲ್ಲಿ ಸಂಗ್ರಹಿಸಲು ಯಾಕೆಂದರೆ ನಿಯಮಗಳನ್ನು ರೂಪಿಸಿಲ್ಲ ಮತ್ತು ನಿರೀಕ್ಷಿತ ಹಣ ಮೂರನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದ ಹೊತ್ತಿಗೆ 90 ಲಕ್ಷ ರೂ. ಆದೀತು ಅನಂತರ ಪ್ಯಾಸಿಂಜರ ಘೇರ ಮೇಲಿನ ಕರ ರೂ. 5.40 ಕೋಟಿ ಅದರಲ್ಲಿ 2 ಕೋಟಿ ಲಾಭವನ್ನು ಕಳೆದರೆ 3.40 ಕೋಟಿ ಆಯಿತು. ವಿದ್ಯುತ್ ಮೇಲಿನ ಕರದ ಬಗ್ಗೆ ಹೇಳುವುದಾದರೆ ಅದು ಹೊಸದೇನೂ ಅಲ್ಲ. ಹಳೆಯ ಕಾನೂನಿನ ಪ್ರಕಾರ ನಾವು ಅದನ್ನು ಏರಿಸಿದ್ದೇವೆ. ಅದು ವಾರ್ಷಿಕ 30 ಲಕ್ಷ ಆದರೆ 5 ವರುಷಗಳಲ್ಲಿ 150 ಲಕ್ಷ ರೂ. ಆಯಿತು. ಮೂರನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದ ಹೊತ್ತಿಗೆ ಈ ಎಲ್ಲ ಬಾಬುಗಳಿಂದ 5.8 ರೂಪಾಯಿ ಸಂಗ್ರಹವಾಗಬಹುದು.

* ಶ್ರೀಎಸ್. ಶಿವಪ್ಪ: ನಿಮ್ಮ ನಿರೀಕ್ಷೆಯಂತೆ ಆರು ಕೋಟಿ ರೂಪಾಯಿಗಳು ಆದರೆ ಅಂಕಿ ಸಂಖ್ಯೆಗಳ ಪ್ರಕಾರ ಅದು ಹತ್ತು ಕೋಟಿ ರೂಪಾಯಿಗಳಾಗುತ್ತದೆ. ಇತ್ತೀಚಿನ ಅಂಕಿ ಸಂಖ್ಯೆಗಳನ್ನು ನಾವು ನೋಡಿದ್ದೇವೆ ಅದ್ಹೇಗೆ ಬದಲಾಗುತ್ತವೆ.

ಶ್ರೀ ಬಿ.ಡಿ. ಜತ್ತಿ: ರೂ 5.8 ಕೋಟಿಯ ಬದಲಾಗಿ ನಮಗೆ 10 ಕೋಟಿ ರೂಪಾಯಿ ದೊರೆತರೆ ಸಂತೋಷದ ಸಂಗತಿ ಅದರಿಂದ ಜನೋಪಯೋಗಿ ಯೋಜನೆಗಳ ಮೇಲೆ ಅಧಿಕ ಹಣವನ್ನು ಖರ್ಚು ಮಾಡಲು ಬರುತ್ತದೆ. ಈ ಯೋಜನೆಗಳಿಂದ ಶ್ರೀಮಂತರಿಗಷ್ಟೇ ಉಪಯೋಗವಾಗುವುದಿಲ್ಲ. ಅದು ಎಲ್ಲರಿಗೂ ಇದೆ. ಮತ್ತೆ ಮಾರಾಟ ತೆರಿಗೆ ಹಾಗು ಅರಣ್ಯ ವಿಭಾಗಗಳಲ್ಲಿಯ ಸೋರುವಿಕೆಯನ್ನು ತಡೆದರೆ ನಮಗೆ ಪ್ರತಿ ವರುಷ ಹೆಚ್ಚಿನ 5 ಕೋಟಿ ರೂಪಾಯಿಗಳೂ ನಮಗೆ ದೊರೆಯಬಹುದೆಂದು ಸನ್ಮಾನ್ಯ ಸದಸ್ಯರು ಸಲಹೆ ಮಾಡಿದರು. ತೆರಿಗೆ ವಂಚನೆಯೂ ತುಸು ಮಟ್ಟಿಗೆ ಇರಬಹುದು. ಆದರೆ 25 ಕೋಟಿ ಎಂದು ಹೇಳುವುದು ಅತಿ ರಂಜಿತವೆನಿಸುತ್ತದೆ. ಅದು ಸತ್ಯವಲ್ಲ ಎಂದು ನಾನು ಭಾವಿಸಿದ್ದೇನೆ. ಆದರೆ ನನಗೆ ದೊರೆತ ಮಾಹಿತಿ ಮತ್ತು ಮೂರು ತಿಂಗಳ ಅರ್ಥ ಇಲಾಖೆಯ ನನ್ನ ಅನುಭವದಂತೆಯೇ ಆದು ಸಾಧ್ಯವಿಲ್ಲ; ಬಹುಶಃ 1 ರಿಂದ 4 ಪ್ರತಿಶತ ಇದ್ದೀತು. ಆದರೆ ಈ ಸೋರುವಿಕೆಯನ್ನು ತಡೆಯುವುದರಿಂದ 20 ರಿಂದ 25 ಕೋಟಿ ರೂಪಾಯಿ ದೊರೆಯುತ್ತವೆಂಬುದು ಸತ್ಯವಲ್ಲ. ನಾನಾಗಲೇ ಹೇಳಿದಂತೆ ಸಂಪನ್ಮೂಲಗಳ ಲೆಕ್ಕ ಹಾಕುವಾಗ ನಾವು ಪ್ರತಿಶತ 30 ರ ವೃದ್ಧಿಯನ್ನು ಮೂರನೆಯ ಯೋಜನೆಯ ಅವಧಿಯಲ್ಲಿ ವಾರ್ಷಿಕ 6 ಪ್ರತಿಶತದಂತೆ ನಾವು ಲೆಕ್ಕಕ್ಕೆ ತೆಗೆದುಕೊಂಡಿದ್ದೇವೆ. ಮತ್ತೆ ನಾನು ಅದನ್ನು ಹೇಳಬಯಸುವುದಿಲ್ಲ. ಸಮಿತಿಯ ವರದಿಯ 40 ನೆಯ ಪುಟದಲ್ಲಿ ರಾಜ್ಯಕ್ಕೆ ಕೇಂದ್ರೀಯ ಅನುದಾನದ ಕುರಿತಾದ ಅಭಿಪ್ರಾಯಗಳನ್ನು ಉಲ್ಲೇಖಿಸುತ್ತ ಸನ್ಮಾನ್ಯ ಸದಸ್ಯರಾದ

ಶ್ರೀ ದೇವ ಅವರು ಅದುವೆ ಅಮಿತವ್ಯಯದ ಖರ್ಚಿನ ಕಾರಣವೆಂದು ಹೇಳಿದರು. ನಮ್ಮ ದೇಶದಲ್ಲಿ ಎಲ್ಲ ರಾಜ್ಯಗಳಿಗೆ ಒಂದೇ ತೆರನಾದ ಅನುದಾನದ ಪದ್ಧತಿ ಇರುವವರೆಗೆ, ಆ ಪದ್ಧತಿಯನ್ನು ನಾವು ಹೇಗೆ ಬದಲಿಸಬಹುದು? ನಮಗೆ ನಮ್ಮದೇ ಆದ ಪದ್ಧತಿಯನ್ನು ಹೊಂದಬೇಕಿದ್ದರೆ ಮತ್ತು ಸದಸ್ಯರು ಸಮಿತಿಯವರ ಸಲಹೆಯಂತೆ ಅರ್ಥ ವ್ಯವಸ್ಥೆಯನ್ನು ಮಾಡಬೇಕೆಂದರೆ, ಅದರ ಕೇವಲ ಪರಿಣಾಮವೆಂದರೆ ನಮಗೆ ಭಾರತ ಸರಕಾರದ ಸಹಾಯಧನ ದೊರೆಯುವುದಿಲ್ಲ. ಕೊನೆಗೆ ನಾವೆ ಅನುಭವಿಸಬೇಕಾಗುತ್ತದೆ. ಆದ್ದರಿಂದ ಈ ಪದ್ಧತಿಯನ್ನು ನಾವು ಉಳಿದ ಭಾರತದೊಂದಿಗೆಯೇ ಹೋಗಿ ಪಡೆಯುವುದು ಲೇಸು. ಸಾಧ್ಯವಿದ್ದಷ್ಟು ಸಹಾಯದ ಉಪಯೋಗವನ್ನು ನಾವು ಮಾಡಬೇಕು. ನಮ್ಮ ಪ್ರಯತ್ನವಿದ್ದರೆ ಮತ್ತು ಇತರ ಕೆಲವು ರಾಜ್ಯಗಳ ಪ್ರಯತ್ನದಿಂದ ಪದ್ಧತಿಯನ್ನೆ ಬದಲಿಸಿ ಅಧಿಕ ಹಣವನ್ನು ಪಡೆಯುವ ಸಾಧ್ಯತೆ ಇದೆ. ಅದನ್ನು ನಾನು ಸ್ವೀಕರಿಸಲು ಸಿದ್ಧನಿರುವೆ. ಎಲ್ಲಿಯವರೆಗೆ ಅದು ಸಾಧ್ಯವಿಲ್ಲವೊ ಭಾರತ ಸರಕಾರ ಅನುಮೋದಿಸಿದ ಸಹಾಯವನ್ನು ಈ ಪದ್ಧತಿಯಲ್ಲಿಯೇ ಪಡೆದು ಅದನ್ನು ಉಪಯೋಗಿಸಬೇಕು ಅವರು ಮುಂದಿನ ನೇಮಕಾತಿಗಳನ್ನು ಸ್ಥಗಿತಗೊಳಿಸುವ ಕುರಿತೂ ಉಲ್ಲೇಖಿಸಿದರು. ಯೋಜನೆಯ ಪ್ರಾಥಮಿಕ ಉದ್ದೇಶ ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದಾಗಿದೆ. ಒಂದು ವೇಳೆ ಸನ್ಮಾನ್ಯ ಸದಸ್ಯರು ನೇಮಕಾತಿ ಸ್ಥಗಿತವನ್ನು ಸೂಚಿಸುವುದಾದರೆ, ಮೊದಲ, ದ್ವಿತಿಯ, ತೃತೀಯ ಅಥವಾ ಚತುರ್ಥ ಪಂಚವಾರ್ಷಿಕ ಯೋಜನೆಗಳ ಅವಶ್ಯಕತೆಯೇ ಇಲ್ಲ. ಸನ್ಮಾನ್ಯ ಸದಸ್ಯರಾದ ಶ್ರೀ ದೇವ ಅವರ ವಾದ ವಿಚಿತ್ರವಾಗಿದೆ. ಸಾಧ್ಯವಿದ್ದಷ್ಟು ಅಪ್ರಯೋಜಕತೆಯನ್ನು ತಪ್ಪಿಸಬೇಕೆ ಹೊರತು ನಾವು ನಮ್ಮ ಮಕ್ಕಳು ಮೊಮ್ಮಕ್ಕಳ ಉದ್ಯೋಗಾವಕಾಶಗಳನ್ನು ವಂಚಿಸಬಾರದು. ಯೋಜನೆಯ ಉದ್ದೇಶವೆ ನಮ್ಮ ಮಕ್ಕಳು - ಮೊಮ್ಮಕ್ಕಳಿಗೆ ಒಳ್ಳೆಯ ಉದ್ಯೋಗಾವಕಾಶಗಳನ್ನು ಕೊಡುವುದಾಗಿದೆ. ಅದನ್ನು ತಪ್ಪಿಸಲು ಸಾಧ್ಯವಿಲ್ಲ. ಉದಾಹರಣೆಗೆ, ನಾವು ಇಂಥದೊಂದು ಸೆಕ್ಷನ್ನಿನಲ್ಲಿಯ ಉದ್ಯೋಗ ಕಡಿತವನ್ನು ನಿರ್ಧರಿಸಿದೆವಾದರೆ, ಅಲ್ಲಿ ಕೂಡ ಉಳಿಸಲು ಸಾಧ್ಯವಿಲ್ಲ. ಒಮ್ಮೆಲೇ ನಾವು ತೃತೀಯ - ಚತುರ್ಥ ವರ್ಗದ ನೌಕರರನ್ನು ಮನೆಗೆ ಕಳಿಸಲು ಸಾಧ್ಯವಿಲ್ಲ. ಉಳಿದ ಇಲಾಖೆಗಳಲ್ಲಿಯ ನೇಮಕಾತಿಯನ್ನು ನಾವು ಸ್ಥಗಿತಗೊಳಿಸಿ, ಇಲ್ಲಿಯ ಅಧಿಕ ಸಿಬ್ಬಂದಿಯನ್ನು ಅವಕಾಶ ದೊರೆತಂತೆ ಅಲ್ಲಿ ಸೇರ್ಪಡೆ ಮಾಡುತ್ತೇವೆ.

ಒಂದು ಇಲಾಖೆಯಲ್ಲಿ ನಿರ್ದಿಷ್ಟ ವಿಭಾಗದಲ್ಲಿ ಅಧಿಕ ಸಂಖ್ಯೆಯ ಸಿಬ್ಬಂದಿ ಇದೆ ಎಂದು ಅವರನ್ನೆಲ್ಲ ಮನೆಗೆ ಕಳಿಸುವ ಅಮಾನವೀಯ ಕೃತ್ಯವನ್ನು ನಾವು ಮಾಡಬಾರದೆಂದು ನನಗೆ ಅನಿಸುತ್ತದೆ.

ಸನ್ಮಾನ್ಯ ಸದಸ್ಯರಾದ ಶ್ರೀ ಡಿಮೆಲ್ಲೋ ಅವರು ಮೈಸೂರು ಸರಕಾರವು ಎಲ್ಲದ್ದಕ್ಕೂ ಕೇಂದ್ರ ಸರಕಾರವನ್ನೇ ಅವಲಂಬಿಸಿದ ಬಗ್ಗೆ ದು:ಖಿಸಿದರು. ಫೆಡರಲ್ ಪದ್ಧತಿಯ ಆಡಳಿತದಲ್ಲಿ ಧನಸಹಾಯಕ್ಕಾಗಿ ರಾಜ್ಯಗಳು ಕೇಂದ್ರವನ್ನೇ ಅವಲಂಬಿಸಬೇಕಾಗುತ್ತದೆ. ಮತ್ತು ಕೇಂದ್ರವು ತನ್ನ ಸಂಪನ್ಮೂಲವನ್ನು ಹೆಚ್ಚಿಸಿಕೊಳ್ಳಲು ರಾಜ್ಯಗಳನ್ನು ಅವಲಂಬಿಸಬೇಕಾಗುತ್ತದೆ. ಅಖಿಲ

ಭಾರತದ ಯೋಜನೆಯು ಒಂದು ಸಮಗ್ರ ಯೋಜನೆಯಾಗಿದೆ ಭಾರತ ಸರಕಾರ ಮತ್ತು ಮೈಸೂರು ಸರಕಾರ ಉಭಯೆತರರೂ ಯೋಜನೆಯ ಅನುಷ್ಠಾನಕ್ಕೆ ಮತ್ತು ಅದನ್ನು ಯಶಸ್ವಿಗೊಳಿಸುವಲ್ಲಿ ಜವಾಬ್ದಾರರಾಗಿರುತ್ತಾರೆ. ಅದು ಭಾರತಸರಕಾರದ ಗುತ್ತಿಗೆಯು ಅಲ್ಲ. ಮೈಸೂರು ಸರಕಾರದ ಗುತ್ತಿಗೆಯೂ ಅಲ್ಲ. ಇಬ್ಬರೂ ತಮ್ಮ ಯತ್ನಗಳಿಂದ ಅಧಿಕ ಹಣವನ್ನು ಸಂಗ್ರಹಿಸಬೇಕು. ಅದರಿಂದ ಯೋಜನೆಗಳು ಯಶಸ್ವಿಯಾಗುವಂತೆ ನೋಡಿಕೊಳ್ಳಬೇಕು.

ಸನ್ಮಾನ್ಯ ಸದಸ್ಯರಾದ ಶ್ರೀ ಅಣ್ಣಾರಾಯರು ಉನ್ನತಾಧಿಕಾರದ ಆರ್ಥಿಕ ಮತ್ತು ಪ್ರಗತಿಯ ಆಯೋಗದ ನೇಮಕಾತಿಯನ್ನು ಬೆಂಬಲಿಸಿದ್ದಾರೆ. ಯೋಜನಾ ಆಯೋಗ ಕೂಡ ಯೋಜನಾ ಮಂಡಳಿಯ ನೇಮಕಾತಿಗಾಗಿ ಶಿಫಾರಸ್ಸು ಮಾಡಿದೆ. ನಮ್ಮಲ್ಲಿ ಆಗಲೇ ರಾಜ್ಯ ಅಭಿವೃದ್ಧಿ ಆಯೋಗ ಇದೆ. ನನ್ನ ಸ್ವಂತದ ಅಭಿಪ್ರಾಯದಲ್ಲಿ ಅಭಿವೃದ್ಧಿ ಮಂಡಳಿಯನ್ನು ವಿಭಜಿಸಿ ಬೇರೆ ಬೇರೆ ಕಮೀಟಿಗಳನ್ನೋ ಅಥವ ಗ್ರೂಪ್‌ಗಳನ್ನೋ ಮಾಡಿ ಅವರಿಗೆ ನಮ್ಮ ರಾಜ್ಯದಲ್ಲಿಯ ವಿವಿಧ ಕಾಮಗಾರಿಗಳ ಅಭಿವೃದ್ಧಿ ಚಟುವಟಿಕೆಗಳ ಅಧ್ಯಯನವನ್ನು ವಹಿಸಬಹುದು. ಮತ್ತೆ ಬೇರೆ ಖರ್ಚು ಮಾಡುವ ಅಗತ್ಯವಿಲ್ಲ. ನಾವು ಬೇರೆ ಕಮೀಟಿ ಅಥವಾ ಆಯೋಗಗಳನ್ನು ನೇಮಕಾತಿ ಮಾಡಿ ಬಯಸುವ ಫಲಶೃತಿಯನ್ನೇ ಅಧಿಕ ಖರ್ಚಿಲ್ಲದೆ ಇದರಿಂದ ಪಡೆಯಬಹುದು. ನಾನು ಸನ್ಮಾನ್ಯ ಸದಸ್ಯರ ಸಲಹೆಯನ್ನು ತಿರಸ್ಕರಿಸುತ್ತಿಲ್ಲ. ಸರಕಾರ ಅದನ್ನು ಪರಿಶೀಲಿಸುತ್ತದೆ. ಮತ್ತು ಅಗತ್ಯವೆನಿಸಿದರೆ ಸರಕಾರವು ಅಂಥ ಉನ್ನತಾಧಿಕಾರದ ಆಯೋಗ ಅಥವ ಬೋರ್ಡನ್ನು ನೇಮಿಸುವ ಕುರಿತು ವಿಚಾರಿಸುತ್ತದೆ.

ಸನ್ಮಾನ್ಯ ಸದಸ್ಯರಾದ ಶ್ರೀ ಅಣ್ಣಾರಾಯರು ಹೇಳಿದಂತೆ ಹೈಸ್ಕೂಲು ಮುಖ್ಯಾಧ್ಯಾಪಕರು ಇನಸ್ಪೆಕ್ಟರ್ ಎಂದು ನೇಮಕಾತಿ ಮಾಡಬಹುದೆಂಬ ಸಮಿತಿಯ ಶಿಫಾರಸ್ಸು ಕಾರ್ಯರೂಪದಲ್ಲಿ ತರುವಂಥ ಸಲಹೆ ಅಲ್ಲ ಎಂಬುದನ್ನು ನಾನು ಒಪ್ಪುತ್ತೇನೆ. ಅದರಂತೆ ಪರೀಕ್ಷಾ ಉಪ ಆಯುಕ್ತರು ಶಿಕ್ಷಣ ಕಚೇರಿಯ ಕೆಲಸವನ್ನು ತೆಗೆದುಕೊಳ್ಳಬೇಕೆಂಬ ಸಲಹೆಯೂ ಸಲ್ಲ. ಪ್ರತಿಯೊಂದು ಕೆಲಸವೂ ಭಿನ್ನಾವಾಗಿದೆ ಮತ್ತು ಅವುಗಳನ್ನು ಕೂಡಿಸಲು ಬರುವುದಿಲ್ಲ ಎಂಬುದು ಗೊತ್ತಿರುವ ಸಂಗತಿ, ಸದಸ್ಯರ ಸಲಹೆ ಸಕಾರಣವಾಗಿದೆ ಸರಕಾರದ ಅಭಿಪ್ರಾಯವೂ ಅದೆಯೇ ಆಗಿದೆ.

ವಿಶ್ವವಿದ್ಯಾಲಯಗಳನ್ನು ಕೇಂದ್ರ ಸರಕಾರವು ವಹಿಸಿಕೊಳ್ಳಬೇಕು ಎಂಬುದಾಗಿ ಕಮಿಟಿಯು ಸೂಚಿಸುವ ಅಗತ್ಯವಿರಲಿಲ್ಲ ಎಂಬ ಸದಸ್ಯರ ಸಲಹೆಯೂ ನನಗೆ ಒಪ್ಪಿಗೆಯಾಗಿದೆ. ಯಾಕೆಂದರೆ ಅದು ಸಂಪೂರ್ಣವಾಗಿ ರಾಜ್ಯದ ಜವಾಬ್ದಾರಿಯಾಗಿದೆ. ಕೇಂದ್ರ ಸರಕಾರವೇ ವಿಶ್ವವಿದ್ಯಾಲಯಗಳ ಕಾರ್ಯವನ್ನು ವಹಿಸಿಕೊಳ್ಳಬೇಕೆಂದು ಸೂಚಿಸುವುದರ ಬದಲಾಗಿ ವಿಶ್ವವಿದ್ಯಾಲಯಗಳ ಕೆಲಸ ನಡೆಯಲು ಮತ್ತು ಸುಧಾರಿಸಲು ಕೇಂದ್ರ ಸರಕಾರವು ಇನ್ನಷ್ಟು ಹಣವನ್ನು ಕೊಡಬೇಕೆಂದು ಕಮೀಟಿಯು ಸೂಚಿಸಬೇಕಾಗಿತ್ತೆಂದು ನನ್ನ ಆಶೆ.

ಅನಂತರ ಸನ್ಮಾನ್ಯ ಸದಸ್ಯರು ಕಟ್ಟಡಗಳ ಮೇಲಿನ ತೆರಿಗೆಯನ್ನು ವಿರೋಧಿಸಿದರು. ಅದು ಸ್ಥಳೀಯರ ಸಂಪನ್ಮೂಲವಾದ್ದರಿಂದ ಅವರಿಗೆ ಬಿಡಬೇಕೆಂದರು. ನಾನು ಅವರ ಸಲಹೆಯನ್ನು ವಿರೋಧಿಸುವುದಿಲ್ಲ. ಸ್ಥಳೀಯ ಸಂಸ್ಥೆಗಳಿಗೆ ಮಾರಾಟ ತೆರಿಗೆ ಅಥವ ಸೆಸ್ಸನ್ನು ಸಂಗ್ರಹಿಸಲು ಒಂದು ನಿರ್ದಿಷ್ಟ ಮಿತಿಯನ್ನು ಹಾಕಲಾಗಿದೆ. ಬಹುತೇಕ ನಗರ ಸಭೆಗಳು ಮತ್ತು ಸ್ಥಳೀಯ ಸಂಸ್ಥೆಗಳು ಈ ತೆರಿಗೆ ಅಥವ ಸೆಸ್ಸನ್ನು ಸಂಗ್ರಹಿಸಿಲ್ಲ ಮತ್ತು ಸಂಗ್ರಹಿಸುವ ಅಧಿಕಾರವನ್ನು ಬಳಸಿಕೊಳ್ಳಲು ಅವರಿಂದ ಸಾಧ್ಯವಾಗಿಲ್ಲ.

* ಶ್ರೀ ಅಣ್ಣಾರಾವ್ ಗಣಮುಖಿ (ಅಫಜಲಪುರ): ಬೆಂಗಳೂರು ನಗರ ಪಾಲಿಕೆಗೆ ಕೇವಲ ಪ್ರತಿಶತ 16ರಷ್ಟು ಮಿತಿಯನ್ನು ಹಾಕಲಾಗಿದೆ ಪ್ರತಿಶತ 25 ರಷ್ಟು ಸಂಗ್ರಹಿಸುವ ಮಿತಿಯನ್ನು ಹಾಕುವಂತೆ ಕಾನೂನಿನಲ್ಲಿ ತಿದ್ದುಪಡಿ ಮಾಡಲು ಸೂಚಿಸಿರುವೆ ಸರಕಾರ ಈ ಬಗ್ಗೆ ಯಾವ ಕ್ರಮವನ್ನು ಕೈಕೊಂಡಿಲ್ಲ ಆದ್ದರಿಂದ ಇದರಲ್ಲಿ ನಗರ ಪಾಲಿಕೆಯ ತಪ್ಪಿಲ್ಲ. ಸರಕಾರವನ್ನು ದೂಷಿಸಬೇಕಾಗುತ್ತದೆ.

* ಶ್ರೀ ಬಿ.ಡಿ. ಜತ್ತಿ: ನಾನು ಸರಕಾರವನ್ನೊ ಅಥವ ಸ್ಥಳೀಯ ಸಂಸ್ಥೆಗಳನ್ನೊ ದೂಷಿಸಬೇಕೆಂದು ಹೇಳುತ್ತಿಲ್ಲ. ಇತ್ತೀಚಿಗಷ್ಟೆ ನಗರ ಪಾಲಿಕೆ ಗೊತ್ತುವಳಿಯನ್ನು ಸ್ವೀಕರಿಸಿ ಸರಕಾರಕ್ಕೆ ಸ್ವೀಕರಿಸಿ ಸರಕಾರಕ್ಕೆ ಕಳಿಸಿಕೊಟ್ಟಿದೆ ಅದು ನಿರ್ಧಾರ ತೆಗೆದುಕೊಳ್ಳುತ್ತದೆ. ಸಧ್ಯದ ಮಿತಿಯನ್ನೆ ಮುಟ್ಟಲು ಅವರಿಂದ ಸಾಧ್ಯವಾಗಿಲ್ಲ ಅವರಲ್ಲಿ ಆ ಶಕ್ತಿ ಇದ್ದರೆ ಸರಕಾರ ಅವರ ಮಧ್ಯ ಬರುವುದಿಲ್ಲ. ಒಂದು ವೇಳೆ ಸರಕಾರವೇ ಈ ತೆರಿಗೆಯನ್ನು ಸಂಗ್ರಹಿಸಿದರೆ ಅನಂತರ ಕೂಡ ಅದನ್ನು ಸ್ಥಳೀಯ ಸಂಸ್ಥೆಗಳಿಗೆಯೇ ಕೊಡಬೇಕಾಗುತ್ತದೆ ಸಧ್ಯ ನಾವು ಸಿಬ್ಬಂದಿಗೆ ಪ್ರತಿಶತ 50 ರಷ್ಟು ತುಟ್ಟಿಭತ್ಯೆಯನ್ನು ಕೊಡುತ್ತಿದ್ದೇವೆ. ಆರೋಗ್ಯ ಮತ್ತು ನಗರಾಭಿವೃದ್ಧಿ ಸಿಬ್ಬಂದಿಗೆ ಕೂಡ ಭತ್ಯೆಯನ್ನು ಕೊಡಬೇಕಾಗುತ್ತದೆ. ಯೋಜನೆಯಲ್ಲಿ ಒಂದು ಲಕ್ಷದಷ್ಟನ್ನು ಪೂರೈಸಿದ್ದರೆ ಸ್ಥಳೀಯ ಸಂಸ್ಥೆಗಳಲ್ಲಿ 15 ಲಕ್ಷ ಖರ್ಚಿದೆ. ಅದರಂತೆ ಅನೇಕ ನಗರ ಸಭೆಗಳು ಮತ್ತು ಪಾಲಿಕೆಗಳು ಮೈಸೂರು ಸರಕಾರದ ಹತ್ತಿರ ಆರ್ಥಿಕ ಸಹಾಯ ಕೇಳಿ ಬರುತ್ತವೆ. ಅವರು ಸೆಸ್ ಅಥವಾ ತೆರಿಗೆಗಳನ್ನು ಸಂಗ್ರಹಿಸಲು ಸಾಧ್ಯವಾಗುತ್ತಿಲ್ಲವೆಂದು ನಾವು ಅವರಿಗೆ ಯಾವ ಆರ್ಥಿಕ ಸಹಾಯವನ್ನು ಕೊಡಲು ಸಾಧ್ಯವಿಲ್ಲವೆಂದು ಹೇಳಲು ಬರುವುದಿಲ್ಲ. ಅವರು ಸಂಗ್ರಹಿಸಲಿ ಬಿಡಲಿ, ಸ್ಥಳೀಯ ಸಂಸ್ಥೆಗಳ ಕೆಲಸ ಚೆನ್ನಾಗಿ ನಡೆವಂತೆ ನೋಡಿಕೊಳ್ಳುವುದು ಸರಕಾರದ ಜವಾಬ್ದಾರಿಯಾಗಿದೆ ಮತ್ತು ಅವಶ್ಯವಿದ್ದ ಕಡೆಗೆಲ್ಲ ನಾವು ಅಧಿಕ ಹಣವನ್ನು ಕೊಡಬೇಕಾಗುತ್ತದೆ. ಸರಕಾರ ಅಧಿಕ ಹಣವನ್ನು ಸಂಗ್ರಹಿಸಿದರೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ನೀಡಿದ ಹಣ ಸಾರ್ಥಕವಾಗಿ ಬಳಸಲಾಗುತ್ತಿದೆ ಎಂದು ಕಂಡು ಬಂದರೆ, ಅವರ ಪ್ರಸ್ತಾವನೆಯನ್ನು ಸರಕಾರ ಗಮನಿಸಲು ಹಿಂಜರಿಯುವುದಿಲ್ಲ.

* ಶ್ರೀ **ಅಣ್ಣಾರಾವ ಗಣಮುಖಿ**: ನಗರ ಸಭೆಗಳಿಗೆ ನೀಡುವ ಗ್ರ್ಯಾಂಟುಗಳು ಏನಾದವು?

* ಶ್ರೀ ಬಿ.ಡಿ. ಜತ್ತಿ : ಕೆಲವು ವಿಷಯಗಳಲ್ಲಿ ಗ್ರ್ಯಾಂಟನ್ನು ಕೊಡಲಾಗುತ್ತದೆ. ಉದಾಹರಣೆಗೆ, ಮಂಗಳೂರಿನಲ್ಲಿಯ ಫಿಲಾರಿಯಾ ಯೋಜನೆ, ಅವರು ಭಾರತ ಸರಕಾರದಿಂದ ಅಥವ ಮೈಸೂರು ಸರಕಾರದಿಂದ ಗ್ರ್ಯಾಂಟನ್ನು ನಿರೀಕ್ಷಿಸುವುದಿಲ್ಲವೆ? ನಗರ ಪಾಲಿಕೆ ತಾನೆ ಸ್ವತಃ ಅನುಷ್ಠಾನಗೊಳಿಸಲು ಸಾಧ್ಯವೆ? ಅವರು ನಿರ್ದಿಷ್ಟ ಮಹತ್ವದ ಯೋಜನೆಗಳನ್ನು ತೆಗೆದುಕೊಂಡರೆ ಮತ್ತು ಸರಕಾರದ ಹತ್ತಿರ ಬಂದರೆ ಗ್ರ್ಯಾಂಟಗಾಗಿಯೋ ಅಥವ ಸಬ್‌ಸೀಡಿಯನ್ನೋ ಸರಕಾರ ಗಮನಿಸಬೇಕಾಗುತ್ತದೆ. ಮರುಪಾವತಿಯ ಸಾಧ್ಯತೆಯನ್ನು ಅವರು ಸರಕಾರಕ್ಕೆ ಮನಗಾಣಿಸಿಕೊಟ್ಟರೆ ಸರಕಾರವು ಅವರಿಗೆ ಸಾಲ ಕೊಡುತ್ತದೆ.

* ಶ್ರೀ ಅಣ್ಣಾರಾವ ಗಣಮುಖಿ: ಆಸ್ತಿ ಕರದಿಂದಾಗಿ ಅವರ ಸಾಮರ್ಥ್ಯವನ್ನು ಕಡಿತಗೊಳಿಸಲಾಗಿದೆ.

* ಶ್ರೀ ಬಿ.ಡಿ. ಜತ್ತಿ : ಎಲ್ಲೆಲ್ಲಿ ಅವರು ಮಿತಿಯನ್ನು ತಲುಪಿದ್ದಾರೋ ಸರಕಾರ ಅವರ ಸಾಮರ್ಥ್ಯವನ್ನು ತೆಗೆದುಕೊಳ್ಳಲು ಸಿದ್ಧವಿಲ್ಲ. ಮಾರಾಟ ತೆರಿಗೆಯ ಸರಳೀಕರಣದ ಕುರಿತು ಅಧಿಕಾರಿಗಳ ಮತ್ತು ಉದ್ಯೋಗಪತಿಗಳ ಒಂದು ಸಮಿತಿಯನ್ನು ರಚಿಸಲೂ ಅವರು ಸೂಚಿಸಿದ್ದಾರೆ. ನಾನು ಸಭೆಗೆ ತಿಳಿಯಪಡಿಸುವುದೇನೆಂದರೆ, ಮದ್ರಾಸ್, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳ ಮಾರಾಟ ತೆರಿಗೆಯೊಂದಿಗೆ ಹೋಲಿಸಿದರೆ, ನಮ್ಮ ಮಾರಾಟ ತೆರಿಗೆ ಆ್ಯಕ್ಟ ಮತ್ತು ರೂಲ್ಸಗಳು ಸರಳವಾಗಿವೆ. ಆ ಬಗ್ಗೆ ಅವರು ಏನಾದರೂ ಸಲಹೆ ಕೊಡುವುದಿದ್ದರೆ ಸರಕಾರ ಸ್ವೀಕರಿಸಲು ಸಿದ್ಧವಿದೆ. ನಾವು ಬೆಂಗಳೂರು ಚೇಂಬರ್ ಆಫ್ ಕಾಮರ್ಸದವರನ್ನು ವಿನಂತಿಸಿಕೊಂಡು ಅವರಿಂದ ಸರಳೀಕರಣದ ಆಕ್ಟ ಮತ್ತು ರೂಲ್ಸಗಳ ಕುರಿತಾಗಿ ಸಲಹೆ ಕೊಡಲು ಕೇಳಿದ್ದೇವೆ. ಆದರೆ ಈ ವರೆಗೆ ಅವರು ಯಾವ ಗುಣಾತ್ಮಕ ಸಲಹೆಗಳನ್ನು ಕಳಿಸಿಲ್ಲ.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ಈ ಬಗ್ಗೆ ಸಮಿತಿಯನ್ನು ರಚಿಸುವ ವಿಷಯ ಏನಾಯ್ತು?

* ಶ್ರೀ ಬಿ.ಡಿ. ಜತ್ತಿ : ಸಮಿತಿಯನ್ನು ರಚಿಸಿದರೆ, ಸನ್ಮಾನ್ಯಸದಸ್ಯರು ಮುಂದೆ ಬಂದು ನೀವು ಇಷ್ಟೊಂದು ಹಣವನ್ನು ಖರ್ಚು ಮಾಡುತ್ತಿದ್ದೀರಿ ಎಂದು ಹೇಳುತ್ತಾರೆ. ಅದರ ಬದಲು ಸಂಬಂಧ ಪಟ್ಟ ಜನರು ಸಲಹೆಗಳನ್ನು ನೀಡಿದರೆ, ನಾವು ಅವುಗಳನ್ನು ಗಮನಿಸಿ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಲು ಸಿದ್ಧರಿದ್ದೇವೆ.

ಸನ್ಮಾನ್ಯ ಸದಸ್ಯರಾದ ಶ್ರೀ ಅಣ್ಣಾರಾಯರು, ನೀರು ಸರಬರಾಜು ಮತ್ತು ಒಳಚರಂಡಿ ಕೆಲಸಗಳಿಗೆ ಗ್ರ್ಯಾಂಟ ಕೊಟ್ಟರೆ ಈ ಸೂಚನೆಯನ್ನು ಅನುಷ್ಠಾನಗೊಳಿಸಲಾಗುವುದು. ಕೆಲವು ಕಾಲ ಅವರು ಕೊಡುತ್ತಿದ್ದರು. ನಾವು ಅಧಿಕ ಹಣ ನೀಡಲು ಭಾರತ ಸರಕಾರವನ್ನು ಒತ್ತಾಯಿಸುತ್ತಿದ್ದೆವು. ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಈ ಯೋಜನೆಯನ್ನೂ ಅಳವಡಿಸಲಾಗಿದೆ. ಭಾರತ ಸರಕಾರದಿಂದಾಗಲೀ ಅಥವಾ ಮೈಸೂರು ಸರಕಾರದಿಂದಾಗಲೀ ಗ್ರ್ಯಾಂಟು ದೊರೆತರೆ ಅದನ್ನು ತೆಗೆದುಕೊಳ್ಳುತ್ತೇವೆ. ಇದೂ ಅಲ್ಲದೆ ಭಾರತ ಸರಕಾರದಿಂದ

ದೊರೆತ ಗ್ರಾಂಟಿನಲ್ಲಿ ಕೆಲವು ಸ್ಥಳೀಯ ಸಂಸ್ಥೆಗಳು ಗ್ರಾಂಟನ್ನು ಬಯಸಿದರೆ ಅದನ್ನೂ ಗಮನಿಸಬಹುದು ಹಾಗೆ ಗಮನಿಸಲಾಗದೆಂದು ನಾನು ಹೇಳುವುದಿಲ್ಲ.

ಈಗಿದ್ದ ಭಿನ್ನ - ಭಿನ್ನ ಭೂಕಂದಾಯ ಕಾನೂನುಗಳನ್ನು ಏಕರೂಪಗೊಳಿಸುವಂತೆಯೂ ಅವರು ಸೂಚಿಸಿದರು. ಏಕರೂಪ ಭೂಕಂದಾಯ ಕಾನೂನು ಸಭೆಯ ಮುಂದಿದೆ ಅದು ಸ್ವೀಕೃತವಾಗುತ್ತಿದ್ದಂತೆ ಕೆಲ ಏಕರೂಪತೆ ಸಾಧ್ಯವಾಗುವುದು.

ಸಚಿವಾಲಯ ಹಾಗೂ ಇಲಾಖಾ ಮುಖ್ಯಸ್ಥರ ಕಾರ್ಯಾಲಯಗಳಲ್ಲಿಯ ಕೆಲ ಸಿಬ್ಬಂದಿಯ ಕಡಿತದ ಬಗ್ಗೆ ಸನ್ಮಾನ್ಯ ಸದಸ್ಯರಾದ ಶ್ರೀ ಅಪ್ಪಣ್ಣ ಅವರು ಉಲ್ಲೇಖಿಸಿದರು. ಕೆಲಸಮಯದ ಹಿಂದೆ ಇದೇ ಮನೆಯಲ್ಲಿ ನಾನು ಹೇಳಿದಂತೆ ಸಚಿವ ಸಂಪುಟದಲ್ಲಿ ಒಂದು ಉಪ ಸಮಿತಿಯನ್ನು ನೇಮಿಸಲಿದ್ದೇವೆ. ಅವರು ವಿವಿಧ ಇಲಾಖೆಗಳಿಂದ ಮಾಹಿತಿಗಳನ್ನು ತರಿಸುತ್ತಿದ್ದಾರೆ. ಮಿತವ್ಯಯ ಅಥವ ಸಿಬ್ಬಂದಿ ಕಡಿತ ಅಥವ ಸಿಬ್ಬಂದಿಯಲ್ಲಿ ಕಡಿಮೆ ಮಾಡಬಹುದೆ? ಎಂದು ಕೇಳಲಾಗಿದೆ.

ವಾರ ಒಪ್ಪತ್ತಿನಲ್ಲಿ ಆ ಉಪಸಮಿತಿಯು ಮಾಹಿತಿಯನ್ನು ಸಂಗ್ರಹಿಸುತ್ತದೆ ಎಂದು ನಾನು ಆಶಿಸಿದ್ದೇನೆ. ವಿವಿಧ ಸನ್ಮಾನ್ಯ ಸದಸ್ಯರು ಸೂಚಿಸಿದಂತೆ, ಸಾಧ್ಯವಿದ್ದೆಡೆ ಅವರ ಸಲಹೆಗಳನ್ನು ಗಮನಿಸಿ ಸಿಬ್ಬಂದಿ ಕಡಿತವನ್ನು ಮಾಡಬಹುದು ಅದರಂತೆ ಮಿತವ್ಯಯದ ಸಲಹೆಯನ್ನೂ ಗಮನಿಸಲಾಗುವುದು.

ಆದರೆ ಮಿತವ್ಯಯದ ಕಾರಣದಿಂದಾಗಿ ದಕ್ಷತೆ ಹಾಳಾಗಬಾರದೆಂದು ನಾನು ಹೇಳಬಯಸುತ್ತೇನೆ. ದಕ್ಷತೆಯೂ ಇರಬೇಕು ಮಿತವ್ಯಯವನ್ನೂ ಸಾಧಿಸಬೇಕು.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ತಾವು ರಿಟ್ರೆಂಚಮೆಂಟ್ ಯಾವ ರೀತಿ ಮಾಡುತ್ತೀರಿ? ಈಗ ಅಪಾಯಿಂಟ್‌ಮೆಂಟ ಮಾಡಿಕೊಂಡಿರುವವರನ್ನು ರಿಟ್ರೆಂಚ್ ಮಾಡುತ್ತೀರಾ ಅಥವ ಈಗಾಗಲೇ ಸರ್ವೀಸಿನಲ್ಲಿ ಇರುವವರನ್ನು ರಿಟ್ರೆಂಚ್ ಮಾಡುತ್ತೀರಾ?

* ಶ್ರೀ ಬಿ.ಡಿ. ಜತ್ತಿ : ಮಾನ್ಯರೆ, ಕೆಲವು ಇಲಾಖೆಗಳಲ್ಲಿ ಕೆಲಸದ ಒತ್ತಡ ಕಡಿಮೆ ಇದೆ, ಅಲ್ಲಿ ಕನಿಷ್ಟ ಮಿತಿಯಲ್ಲಿ ಕಡಿತಗೊಳಿಸಬಹುದು. ಅದರರ್ಥ ಅವರನ್ನು ಮನೆಗೆ ಕಳಿಸಲಾಗುವುದು ಎಂದಲ್ಲ. ಅವರನ್ನು ಬೇರೆ ಇಲಾಖೆಗಳಲ್ಲಿ ಸೇರಿಸಿಕೊಳ್ಳಲಾಗುವುದು. ಆ ಮಾದರಿಯನ್ನೆ ಎಲ್ಲ ಕಾಲಗಳಲ್ಲೂ ಅನುಸರಿಸಲಾಗುತ್ತದೆ. ಅಪತ್ರಾಂಕಿತ ಸಿಬ್ಬಂದಿಯನ್ನು ಮೇಲಿಂದ ಮೇಲೆ ಬದಲಿ ಮಾಡುವುದನ್ನು ನಿಲ್ಲಿಸಬೇಕೆಂದು ಕೆಲವು ಸದಸ್ಯರು ಸೂಚಿಸಿದರು. ಅದು ಕೇವಲ ಅಪತ್ರಾಂಕಿತ ಸಿಬ್ಬಂದಿಗಷ್ಟೇ ಅಲ್ಲ ಎಲ್ಲ ಸಿಬ್ಬಂದಿಗೂ ಅನ್ವಯಿಸುತ್ತದೆ. ಪತ್ರಾಂಕಿತ - ಅಪತ್ರಾಂಕಿತ ಯಾವುದೇ ಅಧಿಕಾರಿ ಇರಲಿ ಎರಡು ವರುಷದ ಮೊದಲು ಅವರನ್ನು ಬದಲಿ ಮಾಡಲೇಬಾರದು ಎಂದು ಇತ್ತೀಚೆಗಷ್ಟೇ ಸರಕಾರ ಖಚಿತ ನಿರ್ಧಾರವನ್ನು ತೆಗೆದುಕೊಂಡಿದೆ. ವಿಶೇಷ ಕಾರಣ ಅಥವ ಪದೋನ್ನತಿಯ ವಿಷಯದಲ್ಲಿ ಪರಿಗಣಿಸಬಹುದು.

* ಶ್ರೀ ಎಸ್. ಶಿವಪ್ಪ : ಒಂದು ಅಥವ ಒಂದೂವರೆ ವರುಷದ ಒಳಗಡೆಯೇ ಬದಲಿಯಾದ ಉದಾಹರಣೆಗಳಿದ್ದರೆ ಸರಕಾರ ಆ ಬಗ್ಗೆ ವಿಚಾರಣೆ ಮಾಡುತ್ತದೆಯೆ? ಅಂಥ ನೂರಾರು ಉದಾಹರಣೆಗಳಿವೆ.

* ಶ್ರೀ ಬಿ.ಡಿ. ಜತ್ತಿ : ಮಾನ್ಯರೆ, ರಾಜಕೀಯ ಶಬ್ದವನ್ನು ಬಳಸದೆ ಹೇಳಬೇಕೆಂದರೆ ಅಂಥ ಕೆಲವು ಬದಲಿಗಳಾಗಿವೆ ಎಂಬುದನ್ನು ನಾನು ಒಪ್ಪುವೆ. ಅದನ್ನು ತಪ್ಪಿಸಲೆಂದೇ ಸರಕಾರ ನಿರ್ಧಾರ ತೆಗೆದುಕೊಂಡಿದೆ. ನಿರ್ದಿಷ್ಟ ವ್ಯಕ್ತಿಯ ಬಗ್ಗೆ ತಕರಾರುಗಳು ಏನೂ ಇರದಿದ್ದರೆ ಮೂರು ವರುಷಗಳ ವರೆಗೆ ಇಡಬಹುದೆಂದೂ ಸರಕಾರ ನಿರ್ಧರಿಸಿದೆ. ಇನ್ನು ಮೇಲೆ ಅಂಥ ನಿದರ್ಶನಗಳೇನಾದರೂ ಕಂಡು ಬಂದದ್ದನ್ನು ಸನ್ಮಾನ್ಯ ಸದಸ್ಯರು ಗಮನಕ್ಕೆ ತಂದರೆ ಆ ಬಗ್ಗೆ ನಮ್ಮ ನಿರ್ಧಾರದ ಅನುಗುಣವಾಗಿ ವಿಚಾರಿಸಿ ಸರಿಪಡಿಸಲು ಸಿದ್ಧರಿದ್ದೇವೆ.

* ಶ್ರೀ ಬಿ.ಪಿ. ಕದಮ: ಉತ್ತರ ಕರ್ನಾಟಕ ಜಿಲ್ಲೆಯಲ್ಲಿ ಹಲವಾರು ಜಿಲ್ಲಾಧಿಕಾರಿಗಳನ್ನು ಬದಲಾಯಿಸಲಾಗಿದೆ.

* ಶ್ರೀ ಬಿ.ಡಿ. ಜತ್ತಿ : ಮಾನ್ಯರೆ, ಸನ್ಮಾನ್ಯ ಸದಸ್ಯರ ಗಮನಕ್ಕೆ ತರಬಯಸುವುದೇನೆಂದರೆ ಕಳೆದ 14 ವರುಷಗಳಲ್ಲಿ ತೆಗೆದುಕೊಂಡ ಕ್ರಮಗಳ ಬಗ್ಗೆ ಈ ಸರಕಾರ ಬಾಧ್ಯವಾಗುವುದಿಲ್ಲ.

(ಗೊಂದಲ ಅಡೆ - ತಡೆ)

ಮಾನ್ಯರೆ, ಸನ್ಮಾನ್ಯ ಸದಸ್ಯರಿಗೆ ಗೊತ್ತಿದ್ದಷ್ಟೇ ಉತ್ತರ ಕನ್ನಡ ಜಿಲ್ಲೆಯ ಬಗ್ಗೆ ನನಗೂ ಗೊತ್ತು 14 ವರುಷಗಳಲ್ಲಿ ನಡೆದ ಘಟನೆಗಳ ಬಗ್ಗೆ ಮೈಸೂರು ಸರಕಾರವನ್ನು ದೂಷಿಸಲಾಗದು. ನವಂಬರ 1956ರ ನಂತರವೇ ಉತ್ತರ ಕನ್ನಡ ಜಿಲ್ಲೆ ಇಲ್ಲಿಗೆ ಬಂದಿದೆ ಆಗಲೇ ಹೇಳಿದಂತೆ ಎರಡು ವಾರಗಳ ಹಿಂದಷ್ಟೆ ನಾವು ಒಂದು ಖಚಿತ ನಿರ್ಧಾರವನ್ನು ತೆಗೆದುಕೊಂಡಿದ್ದೇವೆ. ನಿರ್ಧಾರದ ನಂತರ ಏನಾದರೂ ಘಟಿಸಿದರೆ ನಾವು ವಿಚಾರಿಸಲು ಸಿದ್ಧರಿದ್ದೇವೆ.

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ :ಅದರಿಂದ ನೀವು ಏನು ಸಾಧಿಸುತ್ತೀರಿ.

* ಶ್ರೀ ಬಿ.ಡಿ. ಜತ್ತಿ : ಹಾಗೆ ಅಂದಾಜು ಮಾಡಲು ಬರುವುದಿಲ್ಲ.

* ಶ್ರೀ ಜೆ.ಟಿ. ರಂಗಪ್ಪ (ಹೊಸದುರ್ಗ) : ಎನ್‌ಕ್ವೈರಿ ಮಾಡದೆ ಹೊಸದುರ್ಗದಲ್ಲು ಕೆಲವು ಸರಕಾರಿ ನೌಕರರನ್ನು ಟ್ರಾನ್ಸಫರ್ ಮಾಡಿದ್ದಾರೆ ಅದನ್ನು ವಿಚಾರಿಸುತ್ತೀರಾ?

* ಶ್ರೀ ಬಿ.ಡಿ. ಜತ್ತಿ : ಹೊಸದುರ್ಗವಾಗಲಿ, ಜಮಖಂಡಿಯಲ್ಲಾಗಲಿ ಅಥವ ಎಲ್ಲೇ ಆಗಲಿ ಈಗ 15 ದಿವಸದೊಳಗೆ ಯಾರನ್ನಾದರೂ ಟ್ರಾನ್ಸಫರ್ ಮಾಡಿದ್ದರೆ ಅಂಥಾದ್ದನ್ನು ನನ್ನ ಗಮನಕ್ಕೆ ತಂದರೆ ಅದನ್ನು ವಿಚಾರಿಸಿ ಸರಿ ಮಾಡುತ್ತೇನೆ.

* ಶ್ರೀ ಅಣ್ಣಾರಾವ ಗಣಮುಖಿ: ಈಗಾಗಲೇ ಟ್ರಾನ್ಸಫರ್ ಮಾಡಿದವರ ಆದೇಶಗಳನ್ನು ರದ್ದು ಮಾಡಬಾರದೆಂದು ಸರಕಾರ ನಿರ್ಧಾರ ತೆಗೆದುಕೊಂಡಿದೆಯೇ? ಟ್ರಾನ್ಸ್‌ಫರ್

ಆರ್ಡರ್‌ಗಳನ್ನು ಪೋಸ್ಟ್ ಮಾಡುತ್ತೀರಿ. ಅದು ಮುಟ್ಟುವ ಮೊದಲೆ ಆರ್ಡರ್ ಕ್ಯಾನ್ಸಲ್ ಮಾಡಿದ ಇನ್ನೊಂದು ಆರ್ಡರ್ ಇರುತ್ತದೆ.

* ಶ್ರೀ ಬಿ.ಡಿ. ಜತ್ತಿ : ಹೌದು ಮಾನ್ಯರೆ, ಅಂಥ ಟ್ರಾನ್ಸಫರಗಳನ್ನು ರದ್ದು ಮಾಡಬಾರದೆಂದು ಈಗ ನಾವು ಕಟ್ಟುನಿಟ್ಟಿನ ನಿರ್ಧಾರ ತೆಗೆದುಕೊಂಡಿದ್ದೇವೆ. ಈ ನಂತರ ಅದರ ಅನುಷ್ಠಾನವನ್ನು ಕಾಣಬಹುದು.

ಸನ್ಮಾನ್ಯ ಸದಸ್ಯರಾದ ಶ್ರೀ ಕೃಷ್ಣ ಅವರು ಮಂತ್ರಿ ಮತ್ತು ಉಪಮಂತ್ರಿಗಳ ಕಾರ್ಯ ವೈಖರಿ ಹಾಗೂ ನಿರಂತರ ಪ್ರವಾಸದ ಬಗ್ಗೆ ಉಲ್ಲೇಖಿಸಿದರು. ನಿಜ ಮಂತ್ರಿಗಳಾಗಲಿ ಉಪಮಂತ್ರಿಗಳಾಗಲಿ ಸಣ್ಣ ವಿಷಯಗಳಿಗಾಗಿ ಪ್ರವಾಸ ಮಾಡಬಾರದೆಂಬುದನ್ನು ನಾನು ಒಪ್ಪುತ್ತೇನೆ. ಸಾರ್ವಜನಿಕರು ಮತ್ತು ಸನ್ಮಾನ್ಯ ಸದಸ್ಯರು ಸಾಮಾನ್ಯಕಾರ್ಯಕ್ರಮಗಳಿಗೆ ಮಂತ್ರಿಗಳನ್ನು ಕರೆಯಬಾರದು. ಹಾಗೆ ಬರಬಾರದೆಂದೂ ನಮ್ಮ ಉದ್ದೇಶವಿಲ್ಲ ಆದರೆ ಶಾಸಕರಾದವರೂ ಅಂಥ ಆಮಂತ್ರಣಗಳನ್ನು ಕೊಡದಿದ್ದರೆ.

* ಶ್ರೀ ಎಸ್. ಶಿವಪ್ಪ : ನಿಮ್ಮ ಕಡೆಯ ಸದಸ್ಯರು........

* ಶ್ರೀ ಬಿ.ಡಿ. ಜತ್ತಿ : ಯಾವುದೇ ಕಡೆಯ ಸದಸ್ಯರಿರಲಿ ಈ ಕಡೆಯ ಆಕಡೆಯ ಸದಸ್ಯರೆಂದು ನಾನು ಅಂತರ ಮಾಡಿ ಹೇಳುವುದಿಲ್ಲ ಇಬ್ಬರೂ ಜವಾಬ್ದಾರಿ ಸ್ಥಾನದಲ್ಲಿದ್ದ ಸದಸ್ಯರೇ, ಇದು ಪಕ್ಷದ ವಿಷಯವಲ್ಲ. ನೀವೂ ಚೆನ್ನಾಗಿ ವರ್ತಿಸಿದರೆ ನಾವು ಈ ಸಂಪ್ರದಾಯಗಳನ್ನು ಪಾಲಿಸಿದರೆ ಉಭಯತರರಿಗೂ ಯೋಗ್ಯವೇ, ಇಲ್ಲಿರುವ ವಿಷಯದಲ್ಲಿ ಪ್ರವಾಸ ಭತ್ಯೆಗಳನ್ನು ಸಾಧ್ಯವಿದ್ದಷ್ಟು ಮಿತಿಯಲ್ಲಿ ಮಾಡಬೇಕೆಂಬುದು ಹಾಗೆ ನಾವು ಮಾಡಿಕೊಳ್ಳುತ್ತೇವೆ ಮತ್ತು ಸಾಧ್ಯವಿದ್ದಷ್ಟು ಜಾರಿಯಲ್ಲಿ ತರುತ್ತೇವೆ.

ಸಿ.ಡಿ.ಎಸ್.ಇ. ಎಸ್. ಮತ್ತು ಪ್ಯಾಕೇಜ್ ಸ್ಕೀಮಗಳ ಕುರಿತು ಒಂದು ದಾರಿ ಹುಡುಕಲು ಚಿಕ್ಕ ಸಮಿತಿಯನ್ನು ನೇಮಿಸುವ ಕುರಿತು ಸಲಹೆ ಮಾಡಲಾಯಿತು. ಅದು ಒಳ್ಳೆಯ ಸಲಹೆ, ಸರಕಾರ ಗಮನಕೊಡಬೇಕು. ನಾವು ಅದನ್ನು ಪರಿಶೀಲಿಸಿ ಕೆಲ ಸಮಯದ ನಂತರ ನಿರ್ಧಾರಕ್ಕೆ ಬರುತ್ತೇವೆ.

ದೇಶದಲ್ಲಿ ಸಂಪತ್ತಿನ ಸಮಾನ ವಿತರಣೆ ಇದೆಯೆಂದು ಸನ್ಮಾನ್ಯ ಸದಸ್ಯರಾದ ಶ್ರೀ ಗದಗ ಅವರು ಎತ್ತಿ ತೋರಿಸಿದರು. ಬಡ ಜನರ ಜೀವನ ಮಟ್ಟ ಏರಬೇಕಾದಷ್ಟು ಏರಿಲ್ಲವಾದರೂ ಒಂದಿಷ್ಟು ಏರಿದೆ ಎಂಬುದನ್ನು ನಾವು ಗುರುತಿಸಬೇಕು. ಸಮಾಜದ ಅತ್ಯಂತ ಕೊನೆಯ ಮನುಷ್ಯನ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸುವಲ್ಲಿ ನಾವು ಬಹಳಷ್ಟು ಮಾಡಬೇಕಾಗಿದೆ. ಅದಕ್ಕೆ ಅಧಿಕ ಸಮಯವೂ ಹಿಡಿಯುತ್ತದೆ. ಬಡತನದಿಂದ ದೂರಾಗಲು ನಾವು ಸಮಾಜದ ಕೊನೆಯ ಮನುಷ್ಯನ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ನಾವು ಬಹಳಷ್ಟು ಯತ್ನಿಸಬೇಕಾಗುತ್ತದೆ.

ಸಚಿವಾಲಯ ಮತ್ತಿತರ ಇಲಾಖೆಗಳಲ್ಲಿಯ ಸಿಬ್ಬಂದಿಯನ್ನು ಕಡಿತಗೊಳಿಸುವ ಸಮಿತಿಯ ಶಿಫಾರಸ್ಸುಗಳನ್ನು ಶ್ರೀ ಗದಗ ಅವರು ಒಪ್ಪಲಿಲ್ಲ. ಈ ವಿಷಯವನ್ನು ನಾನಾಗಲೇ ಉಲ್ಲೇಖಿಸಿರುವೆ. ಅವರು ನೇಮಕಾತಿ ಮತ್ತು ತರಬೇತಿ ಕುರಿತಾಗಿ ಉಲ್ಲೇಖಿಸಿದರು. ಇಲ್ಲಿ ನಾನು ಹೇಳಬಯಸುವುದೇನೆಂದರೆ ಸರಕಾರವು ಪ್ರೊಬೇಶನರಿ ಗ್ಯಾಜೆಟೆಡ್ ಸಿಬ್ಬಂದಿಗಾಗಿ ಮಿತವ್ಯಯದಲ್ಲಿ ತರಬೇತು ನೀಡಲು ಮೈಸೂರಿನಲ್ಲಿ ಒಂದು ಕೇಂದ್ರವನ್ನು ಪ್ರಾರಂಭಿಸುತ್ತಿದೆ ಕಡಿಮೆ ಖರ್ಚಿನಲ್ಲಿ ಅಧಿಕ ಜನರಿಗೆ ತರಬೇತಿ ನೀಡುವ ವಿಧಾನವನ್ನೂ ಗಮನಿಸುತ್ತಿದ್ದೇವೆ. ತರಬೇತಿ ನೀಡದೆ ಗುಣಾತ್ಮಕ ಕಾರ್ಯವನ್ನು ಅಪೇಕ್ಷಿಸಲು ಸಾಧ್ಯವಿಲ್ಲ. ಈ ಅಧಿಕಾರಿಗಳಿಗೆ ತರಬೇತಿ ನೀಡಬೇಕೆಂದು ಸರಕಾರ ನಿರ್ಧರಿಸಿದೆ.

* ಶ್ರೀ ಸಿ.ಜೆ. **ಮುಕ್ಕಣ್ಣಪ್ಪ** : ರಾಜ್ಯದಲ್ಲಿ ಸುಮಾರು ಹತ್ತರಿಂದ ಹದಿನೈದು ಸಾವಿರ ಎಕರೆ ಪ್ರದೇಶದಲ್ಲಿ ಅನಧಿಕೃತ ಕೃಷಿ ವ್ಯವಸಾಯ ನಡೆಯುತ್ತಿದೆ. ಇದು ಭೂಕಂದಾಯ ನಷ್ಟ ಅಲ್ಲವೆ?

* ಶ್ರೀ ಬಿ.ಡಿ. ಜತ್ತಿ : ಅದು ಸರಕಾರಕ್ಕೆ ನಷ್ಟ: ಕಾನೂನಿಗನುಗುಣವಾಗಿ ಅವರಿಂದ ದಂಡವನ್ನು ಸಂಗ್ರಹಿಸಬೇಕು ಅಥವ ಅನಧಿಕೃತ ಕೃಷಿ ಭೂಮಿಯನ್ನು ಹಿಂತಿರುಗಿ ಪಡೆಯಬೇಕು.

ಸನ್ಮಾನ್ಯ ಸದಸ್ಯರಾದ ಶ್ರೀ ಗಾಂಜಿ ವೀರಪ್ಪನವರು ಮಾತನಾಡುತ್ತ ತೃತೀಯ ಯೋಜನೆಗೆ ಇನ್ನುಳಿದ ರಾಜ್ಯಗಳಿಗೆ ಹೋಲಿಸಿದರೆ ರಾಜ್ಯಕ್ಕೆ ಕೇಂದ್ರದ ಸಹಾಯ ಅತಿ ಕಡಿಮೆಯಾಯಿತು ಎಂದರು. ಕೇಂದ್ರದ ನೆರವಿಗೆ ಅನೇಕ ವಿಷಯಗಳನ್ನು ಅವಲಂಬಿಸಿದೆ. ಅದು ಜನಸಂಖ್ಯೆಯನ್ನು ಅವಲಂಬಿಸಿದೆ, ರಾಜ್ಯದಲ್ಲಿಯ ಹಿಂದುಳಿದ ಜಿಲ್ಲೆಗಳನ್ನು ಅವಲಂಬಿಸಿದೆ. ಹಿಂದಿನ ಯೋಜನೆಗಳಲ್ಲಿಯು ಕಾರ್ಯವಿಧಾನವನ್ನೂ ಅವಲಂಬಿಸಿದೆ. ಜೊತೆಗೆ ನಾವು ಸಂಗ್ರಹಿಸುವ ತೆರಿಗೆಯ ಪ್ರಮಾಣವನ್ನು ಅವಲಂಬಿಸಿದೆ. ಯೋಜನೆಯ ಗಾತ್ರವನ್ನು ನಿರ್ಧರಿಸುವಾಗ ಈ ಎಲ್ಲ ವಿಷಯಗಳನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತದೆ.

ಆದಾಯ ತೆರಿಗೆಯ ಅಧಿಕಾರಿಗಳಂತೆ ಮಾರಾಟ ತೆರಿಗೆಯವರೂ ಆಗಾಗ ಇನ್ಸ್ಪೆಕ್ಷನ್ಗಳನ್ನು ಮಾಡಬೇಕೆಂದೂ ಅವರು ಸೂಚಿಸಿದರು. ಮಾರಾಟ ತೆರಿಗೆಯ ಆಯುಕ್ತರು ಮತ್ತು ಉಪ ಆಯುಕ್ತರು ಅದನ್ನು ಮಾಡುತ್ತಿದ್ದಾರೆಂದು ನಾನು ಅವರಿಗೆ ಹೇಳಬಯಸುವೆ, ಸರಕಾರಕ್ಕೆ ವರದಿಗಳನ್ನು ಕಳಿಸುತ್ತಾರೆ ಅವರ ಸಲಹೆಯನ್ನು ಗಮನಿಸುತ್ತ ತಪಾಸಣೆಯನ್ನು ಇನ್ನಷ್ಟು ಚುರುಕುಗೊಳಿಸಲು ಹೇಳಲಾಗುವುದು. ಅದರಿಂದ ಒಳ್ಳೇಯ ಫಲವನ್ನು ನಿರೀಕ್ಷಿಸಬಹುದು.

ಸ್ಟೋರ ಪರ್ಚೆಜ ಕಮೀಟಿಗೆ ಒಬ್ಬ ಫುಲ್‌ಟೈಮ ನಿರ್ದೇಶಕರನ್ನು ನೇಮಿಸುವ ಸಲಹೆ ಚೆನ್ನಾಗಿದೆ. ಇದೊಂದು ಒಳ್ಳೆಯ ಸಲಹೆ. ಯಾಕೆಂದರೆ ನಾವು ಹಲವಾರು ಯೋಜನೆಗಳನ್ನು ಹಮ್ಮಿಕ್ಕೊಂಡಿದ್ದೇವೆ. ಅನೇಕ ವಸ್ತುಗಳನ್ನು ಖರೀದಿಸಬೇಕಾಗುತ್ತದೆ. ಅಲ್ಲೊಬ್ಬ ಜವಾಬ್ದಾರಿಯುತ ಅಧಿಕಾರಿ ಇದ್ದರೆ ಒಳ್ಳೆಯದು. ಸರಕಾರ ಈ ಬಗ್ಗೆ ಪರಿಶೀಲಿಸಿ ಸೂಕ್ತ ನಿರ್ಧಾರ ತೆಗೆದುಕೊಳ್ಳುತ್ತದೆ.

ಹಲವಾರು ಸದಸ್ಯರು ತೆರಿಗೆ ಹೆಚ್ಚಳದ ಬಗ್ಗೆ ಆಕ್ಷೇಪಿಸುತ್ತ ಅದು ಬಡವರ ಮೇಲೆ ಭಾರವಾಗುತ್ತದೆಂದರು. ಅದು ನಿಜ. ಪ್ರತಿಯೊಬ್ಬ ಆತ ಬಡವನಿರಲಿ, ಶ್ರೀಮಂತನಿರಲಿ ಆತನ ಶಕ್ತ್ಯಾನುಸಾರ ತೆರಿಗೆಯ ಭಾರವನ್ನು ಹೊರಬೇಕಾಗುತ್ತದೆ. ಇಲ್ಲವಾದಲ್ಲಿ ರೂ 250 ಕೋಟಿಯ ಮೂರನೆಯ ಯೋಜನೆಗೆ ಸರಕಾರ ತನ್ನ ಪಾಲಿನ ರೂ. 110 ಕೋಟಿ ಸಂಗ್ರಹಿಸುವುದು ಸಾಧ್ಯವಾಗುವುದಿಲ್ಲ. ಆರ್ಥಿಕ ಆಯೋಗವು ಸಮರ್ಪಕವಾದ ವರದಿಯನ್ನು ಸಲ್ಲಿಸಿಲ್ಲ ಎಂದು ಸನ್ಮಾನ್ಯ ಸದಸ್ಯರಾದ ಶ್ರೀ ಗಾಂಜಿ ವೀರಪ್ಪನವರು ಹೇಳಿದರು. ಸನ್ಮಾನ್ಯ ಸದಸ್ಯರ ಗಮನಕ್ಕೆ ತರುವುದೆಂದರೆ ಶಾಸಕರ ಗ್ರಂಥಾಲಯದಲ್ಲಿ ವರದಿಯ ನಕಲುಗಳನ್ನು ಇಟ್ಟಿದೆ. ಅದೊಂದು ಒಳ್ಳೆಯ ಮತ್ತು ಉಪಯುಕ್ತ ವರದಿಯಾಗಿದೆ ದಯವಿಟ್ಟು ನೋಡಲಿ.

ಅದೇ ಸದಸ್ಯರು ಕೋರ್ಟುಗಳ ಪರಮಾಧಿಕಾರ ಮತ್ತು ಕೆಲಸ ಇಲ್ಲದ ಕಡೆಗಳಲ್ಲಿಯ ಕೋರ್ಟುಗಳ ರದ್ದು ಮಾಡುವ ಕುರಿತು ಉಲ್ಲೇಖಿಸಿದರು. ಇಲ್ಲಿ ನಾವು ಉಚ್ಚನ್ಯಾಯಾಲಯದ ಅಭಿಪ್ರಾಯಗಳನ್ನು ಕೇಳಬೇಕು. ಅವರ ಅಭಿಪ್ರಾಯಗಳಂತೆ ನಡೆಯುವುದು ಸಂಪ್ರದಾಯ. ಅವರು ಹೇಳಿದ್ದನ್ನು ಕೇಳೋಣ. ಇಲ್ಲಿ ಆರ್ಥಿಕ ವಿಷಯಗಳನ್ನು ಗಮನಿಸುವುದಿಲ್ಲ ಸಾರ್ವಜನಿಕರ ಅನುಕೂಲವನ್ನು ಮಾತ್ರ ಗಮನಿಸುತ್ತೇವೆ.

ಅದೇ ಸದಸ್ಯರು ಜಿಲ್ಲಾ ಪುನರ್ವಿಂಗಡನೆ ಕುರಿತು ಹೇಳುತ್ತ ರಾಜ್ಯದಲ್ಲಿ ಕೇವಲ 10 ರಿಂದ 12 ಜಿಲ್ಲೆಗಳು ಇರಬೇಕು ಎಂದರು. ಬೇರೆ ಬೇರೆ ಅನೇಕ ಸದಸ್ಯರು ಈ ಕುರಿತು ಭಿನ್ನ ಅಭಿಪ್ರಾಯಗಳನ್ನು ನೀಡಿದ್ದಾರೆ.

* ಶ್ರೀ ಶ್ರೀ ಸಿ.ಜೆ. **ಮುಕ್ಕಣ್ಣಪ್ಪ** : ಕೊನೆಗೆ ವಿಭಾಗಗಳನ್ನು 4 ರಿಂದ 2 ಕ್ಕೆ ಇಳಿಸಲಾಗದೆ?

* ಶ್ರೀ ಬಿ.ಡಿ. ಜತ್ತಿ : ಜಿಲ್ಲೆಗಳ ಬಗ್ಗೆ ಸರಕಾರ ಯೋಚಿಸುವಾಗ ಸದಸ್ಯರ ಸಲಹೆಯನ್ನು ಗಮನಿಸಲಾಗುವುದು.

ಹಲವಾರು ಸದಸ್ಯರು ಸಿಬ್ಬಂದಿ ಕಡಿತದ ಬಗ್ಗೆ ಹೇಳಿದರು. ಈ ಸಭೆಯ ಗಮನವನ್ನು ಸೆಳೆಯುತ್ತ ನಾನು ಒಂದು ವಿಷಯವನ್ನು ಹೇಳಬಯಸುವೆ. ಸರಕಾರಿ ಯಂತ್ರದಲ್ಲಿ ಪ್ರತಿಯೊಬ್ಬರೂ ಅತ್ಯಂತ ಅನುಭವಿ ಎಂದು ನಿರೀಕ್ಷಿಸಲಾಗದು. ಅಲ್ಲಿ ಒಳ್ಳೆಯ , ಕೆಟ್ಟ ಹಾಗೂ ಸರಾಸರಿ ಎಲ್ಲರೂ ಇದ್ದಾರೆ. ಈ ಎಲ್ಲರ ಕಾರ್ಯವಿಧಾನವನ್ನು ಸರಕಾರ ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಆದ್ದರಿಂದ ಸರಕಾರೀ ಕೆಲಸಕ್ಕೆ ಕೇವಲ (ಎ-1) ಉತ್ಕೃಷ್ಟ ಜನರನ್ನು ಮಾತ್ರ ನೇಮಿಸಿಕೊಳ್ಳಬೇಕು ಎಂದು ಹೇಳುವುದು ಸರಿಯಾಗದು. ತಾತ್ವಿಕವಾಗಿ ಅದು ಸರಿ. ಆದರೆ ರೂಢಿಯಲ್ಲಿ ನೇಮಕಾತಿ ಮಾಡುವಾಗ ಸಮಾಜದ ಎಲ್ಲ ವರ್ಗದ ಜನರನ್ನು ನೇಮಕಾತಿ ಮಾಡಿಕೊಳ್ಳಬೇಕಾಗುತ್ತದೆ, ಅಂಥ ಸಂದರ್ಭದಲ್ಲಿ ಈ ವರೆಗೆ ಸರಕಾರಿ ಸೇವೆಯಲ್ಲಿ ಅವಕಾಶ ಸಿಗದಂಥ ಹಿಂದುಳಿದ ವರ್ಗದ ಜನರಿಗೆ ಅವರು ಮೇಲೆ ಬರಲು ಅಧಿಕ ಸ್ಥಳಗಳನ್ನು ಕೊಡಬೇಕಾಗುತ್ತದೆ. ಆದ್ದರಿಂದ ಮುಂಬರುವ ದಿನಗಳಲ್ಲಿ ನೇಮಕಾತಿಯಿಂದಾಗಿ ಪ್ರತಿಶತ ನೂರರಷ್ಟು ಪರಿಣಾತಿಯನ್ನು ನಿರೀಕ್ಷಿಸಲಾಗುವುದಿಲ್ಲ. ಅವರು

ಪರಿಣತರಾಗಿರದಿದ್ದರೆ ಅವರಿಗೆ ತರಬೇತಿಯನ್ನು ನೀಡಬೇಕು. ಮತ್ತು ಅವರಿಗೆ ಉತ್ತೇಜನ ನೀಡಬೇಕು ಅನಂತರ ಕೆಲಸಮಯದಲ್ಲಿ ಸರಕಾರಿ ಸೇವೆಯಲ್ಲಿ ಸೇರಿದವರೆಲ್ಲರಿಂದ ಒಂದೇ ಬಗೆಯ ಪರಿಣತಿಯನ್ನು ನಿರೀಕ್ಷಿಸಬಹುದು.

* ಶ್ರೀ ಸಿ.ಜಿ.. ಮುಕ್ಕಣ್ಣಪ್ಪ : ಅಂದರೆ ಹಿಂದುಳಿದ ವರ್ಗದ ಜನರು ಸಮರ್ಥರು ಅಲ್ಲ ಎಂದು ನಿಮ್ಮ ಅಭಿಪ್ರಾಯವೆ?

* ಶ್ರೀ ಬಿ.ಡಿ. ಜತ್ತಿ : ನಾನು ಹಾಗೆ ಎಲ್ಲರೂ ಅಸಮರ್ಥರು ಎಂದು ಹೇಳುವುದಿಲ್ಲ. ಎಲ್ಲ ಜಾತಿಗಳಲ್ಲೂ ಸರಾಸರಿ ಜನ ಇರುತ್ತಾರೆ ಹಾಗೆ ಹಿಂದುಳಿದ ಸಮಾಜದಲ್ಲಿ ಸಮರ್ಥರ ಸರಿಸಮಾನರಾಗಿ ಕೆಲಸ ಮಾಡುವಂತೆ ನಾವು ಅವರನ್ನು ತರಬೇತುಗೊಳಿಸಬೇಕು.

ಸಮಾಜದ ಎಲ್ಲ ಸ್ತರಗಳಲ್ಲೂ ಒಳ್ಳೇಯ ಜನರು ಇರುವಂತೆ ಕೆಟ್ಟ ಜನರೂ ಇರುವ ಸಾಧ್ಯತೆ ಇದೆ. ಯಾರೋ ಕೆಲವರು ಅಸಮರ್ಥರು, ಅವರನ್ನು ನೇಮಿಸಿಕೊಳ್ಳಲಾಗದು ಎನ್ನಲು ಬರುವುದಿಲ್ಲ.

ಸಚಿವಾಲಯದ ಪುನರ್ ಸಂಘಟನೆ ಮಾಡಬೇಕೆಂದು ಸನ್ಮಾನ್ಯ ಸದಸ್ಯರಾದ ಶ್ರೀ ಕೃಷ್ಣ ಶೆಟ್ಟಿ ಹೇಳಿದರು. ಅವರ ಸೂಚನೆಗಳನ್ನು ಪರೀಕ್ಷಿಸುವುದು ತುಂಬ ಕಠಿಣವಾಗುತ್ತದೆ ಇನ್ನಿತರ ಹಲವಾರು ಸಲಹೆಗಳು ನನ್ನ ಹತ್ತಿರ ಬಂದಿವೆ. ಅವರು ಸಚಿವಾಲಯದ ರೂಪವನ್ನೆ ಬದಲಿಸಬೇಕು ಎನ್ನುತ್ತಾರೆ. ಅವರ ಸಲಹೆಯನ್ನು ಸ್ವೀಕರಿಸುವುದು ಸಾಧ್ಯವಿಲ್ಲ. ನಮ್ಮ ಹತ್ತಿರ ಇರುವ ಯಂತ್ರದಲ್ಲಿ ಏನಾದರೂ ದೋಷವಿದ್ದರೆ ಅದನ್ನು ಸುಧಾರಿಸಬೇಕು. ಒಂದು ವಿಭಾಗ ಚನ್ನಾಗಿ ಕೆಲಸ ಮಾಡುತ್ತಿಲ್ಲವಾದರೆ, ಅಗತ್ಯ ಬಿದ್ದರೆ ಅದನ್ನು ಬದಲಿಸಬೇಕು. ಅಲ್ಲೇನಾದರೂ ದೋಷವಿದ್ದರೆ ತಿದ್ದಬೇಕು. ಆದರೆ ಇಡೀ ವ್ಯವಸ್ಥೆಯನ್ನೇ ಬದಲಿಸಿ ಮತ್ತೊಂದು ವ್ಯವಸ್ಥೆಯನ್ನು ಮಾಡುವ ಅವಶ್ಯಕತೆ ಇಲ್ಲ.

ಕೆಲ ಮಾನ್ಯ ಸದಸ್ಯರು ಡಿವಿಜನಲ್ ಕಮೀಶನರ ಹುದ್ದೆಗಳನ್ನೆ ರದ್ದು ಮಾಡಬೇಕೆಂದು ಸೂಚಿಸಿದರು. ಅದನ್ನು ಸದ್ಯ ಉಳಿಸಿಕೊಳ್ಳುವ ಒಂದೇ ಒಂದು ಕಾರಣವೆಂದರೆ ರಾಷ್ಟ್ರೀಯ ಭಾವೈಕ್ಯತೆಯನ್ನು ಉತ್ತೇಜಿಸುವುದೇ ಆಗಿದೆ. ಹೊಸ ಮೈಸೂರು ರಾಜ್ಯದಲ್ಲಿ ಸೇರಿದ ಭಿನ್ನ-ಭಿನ್ನ ಪ್ರದೇಶಗಳ ಜನರಲ್ಲಿ ಒಂದೇ ಎಂಬ ಭಾವನೆ ಬರುವಂತೆ ಡಿವಿಜನಲ್ ಕಮೀಶನರರ ಹತ್ತಿರ ಕೆಲವು ನಿರ್ದಿಷ್ಟ ಅಧಿಕಾರಗಳಿವೆ. ಅದರಿಂದ ಕೆಲ ಸಮಯದವರೆಗೆ ಆ ಹುದ್ದೆಗಳನ್ನು ಉಳಿಸಿಕೊಳ್ಳುವುದು ಅಗತ್ಯವಾಗಿದೆ. ಮತ್ತು ಅನಂತರದ ದಿನಗಳಲ್ಲಿ ಡಿವಿಜನಲ್ ಕಮೀಶನರ ಸ್ಥಾನಗಳನ್ನು ಕಡಿಮೆಗೊಳಿಸುವ ಬಗ್ಗೆ ಅಥವ ಇಡಿಯಾಗಿ ರದ್ದು ಮಾಡುವ ಬಗ್ಗೆ ಯೋಚಿಸಬಹುದು. ಆ ಸಂದರ್ಭದಲ್ಲಿ ಶ್ರೀ ಮುಕ್ಕಣ್ಣಪ್ಪನವರ ಸಲಹೆಯನ್ನೂ ಸಹ ಸರಕಾರ ಗಮನಿಸುತ್ತದೆ.

* ಶ್ರೀ ವಿ.ಎಮ್. ದೇವ (ಗುಬ್ಬಿ): ನೀವು ಸಿಬ್ಬಂದಿಯನ್ನು ಅಧಿಕಗೊಳಿಸಿದಂತೆ ವಿಳಂಬವೂ ಅಧಿಕವಾಗುತ್ತದೆ. ಅದನ್ನು ತಡೆಯಲು ಏನಾದರೂ ವಿಧಾನಗಳನ್ನು ತೆಗೆದುಕೊಳ್ಳಬೇಕು.

* ಶ್ರೀ ಬಿ.ಡಿ. ಜತ್ತಿ : ಸರಕಾರ ಆ ಸಲಹೆಯನ್ನು ಗಮನಿಸಲು ಸಿದ್ಧವಿದೆ. ಮಾಧ್ಯಮ ಇಲಾಖೆಯ ಬಗ್ಗೆ ಹೇಳಿದರು. ಅದು ಅಭಿವೃದ್ಧಿಗೊಳ್ಳುತ್ತಿರುವ ಇಲಾಖೆ ಇದನ್ನು ಇತರ ಇಲಾಖೆಗಳೊಂದಿಗೆ ಮರ್ಜ ಮಾಡಲು ಸಾಧ್ಯವಿಲ್ಲ ಕೆಲ ಸದಸ್ಯರು ಮತ್ಸ್ಯೋದ್ಯಮ ಇಲಾಖೆಯನ್ನು ಪಶು ಸಂಗೋಪನ ಇಲಾಖೆಯಲ್ಲಿ ಕೂಡಿಸಬೇಕು ಎಂದು ಹೇಳಿದರು.

* ಸದಸ್ಯರೊಬ್ಬರು: ಅದನ್ನು ಸಮಿತಿಯೇ ಶಿಫಾರಸ್ಸು ಮಾಡಿದೆ.

* ಶ್ರೀ ಬಿ.ಡಿ. ಜತ್ತಿ : ಇದನ್ನು ಸಮಿತಿ ಶಿಫಾರಸು ಮಾಡಿದೆ ಎಂದು ವಾದ ಮಾಡುವುದೇ ಆಶ್ಚರ್ಯಕರವಾಗಿದೆ. ಆದರೆ ನಮ್ಮ ರಾಜ್ಯದಲ್ಲಿ 200 ಮೈಲುಗಳ ಕರಾವಳಿ ಇದೆ ಎಂಬುದನ್ನು ನೆನಪಿಟ್ಟುಕೊಳ್ಳಬೇಕು. ಹಲವಾರು ವಿದೇಶೀಯರು ರಾಜ್ಯಕ್ಕೆ ಭೇಟಿಕೊಟ್ಟಾಗ, ನಾವು ಮತ್ಸ್ಯೋದ್ಯಮಕ್ಕೆ ಉತ್ತೇಜನ ಕೊಡಬೇಕೆಂದು ಹೇಳಿದ್ದಾರೆ. ಅಗತ್ಯ ಬಿದ್ದರೆ ಇದಕ್ಕಾಗಿ ಅಧಿಕ ಹಣ ಕೇಳಬೇಕು ಎಂದಿದ್ದಾರೆ. ನಮ್ಮ ಮತ್ಸ್ಯೋದ್ಯಮ ಅಭಿವೃದ್ಧಿಯಾದರೆ, ಸಾಕಷ್ಟು ವಿದೇಶೀ ವಿನಿಮಯವನ್ನು ಉಳಿಸಬಹುದು. ಆದ್ದರಿಂದ ಆ ಇಲಾಖೆಯನ್ನು ಯಾವುದೇ ಇಲಾಖೆಯೊಂದಿಗೆ ಸೇರಿಸುವುದು ಸಾಧ್ಯವೇ ಇಲ್ಲ.

* ಶ್ರೀ ಎಸ್. ಶಿವಪ್ಪ : ಹಾಗಾದರೆ ಕೋಳಿ ಸಾಕಾಣಿಕೆಗೆ ಬೇರೆಯೇ ಒಂದು ಇಲಾಖೆ ಯಾಕೆ ಬೇಡ?

* ಶ್ರೀ ಬಿ.ಡಿ. ಜತ್ತಿ : ಕೋಳಿ ಸಾಕಾಣಿಕೆ ಹಾಗೆ ಪ್ರಾಧಾನ್ಯತೆಯನ್ನು ಪಡೆದರೆ ಸರಕಾರ ಅದಕ್ಕೆ ಪ್ರತ್ಯೇಕ ಇಲಾಖೆಯನ್ನು ನಿರ್ಮಿಸಬೇಕಾಗುತ್ತದೆ. ಕೋಳಿ ಸಾಕಾಣಿಕೆಯೊಂದಿಗೆ ಮೀನು ಸಾಕಾಣಿಕೆಯನ್ನು ನೀವು ಹೋಲಿಸುವ ಹಾಗಿಲ್ಲ. ಕೆಲಸಕ್ಕೆ ಭಾರದ ಮೇಲೆ ಪ್ರತ್ಯೇಕ ಇಲಾಖೆಯ ನಿರ್ಮಾಣ ಅವಲಂಬಿಸಿರುತ್ತದೆ. ಅದರಂತೆ ಸಮಾಜ ಕಲ್ಯಾಣ ಇಲಾಖೆಯನ್ನು ಮುಚ್ಚಲು ಸಮಿತಿ ಶಿಫಾರಸು ಮಾಡಿದೆ. ನಾವು ಅದಕ್ಕೆ ಬಹಳ ಮಹತ್ವ ಕೊಡುವುದಿಲ್ಲ. ಯಾಕೆಂದರೆ ಸಮಾಜ ಕಲ್ಯಾಣ ಇಲಾಖೆ ಬಹಳ ಮಹತ್ವದ್ದಾಗಿದೆ, ಆದ್ದರಿಂದ ನಾವು ಅದನ್ನು ಮುಚ್ಚುವುದಿಲ್ಲ.

ಮಾನ್ಯರೆ, ನನ್ನ ಮಾತುಗಳನ್ನು ಮುಗಿಸುವ ಮುನ್ನ ಒಂದು ಮಾತನ್ನು ಹೇಳಬಯಸುವೆ. ಸರಕಾರ ಯಾವುದೇ ನಿರ್ಧಾರಗಳನ್ನು ತೆಗೆದುಕೊಂಡರೂ ಅದನ್ನು ಈ ಸಭೆಯ ಮುಂದೆ ಇಡಲಾಗುತ್ತದೆ. ಅನಂತರ ತೆಗೆದುಕೊಂಡ ನಿರ್ಧಾರ ಸರಿಯೋ ತಪ್ಪೋ ತಿಳಿಯುತ್ತದೆ.

ಖರ್ಚಿಗೆ ಕಡಿವಾಣ ಹಾಕುವಂತೆ, ಮಂತ್ರಿಗಳು - ಉಪ ಮಂತ್ರಿಗಳು ಮಿತವ್ಯಯ ಮಾಡಬೇಕೆಂದು ಸದಸ್ಯರು ಸಲಹೆ ಕೊಡಬಹುದು. ನಾವು ದೊಡ್ಡ - ದೊಡ್ಡ ಕಾರುಗಳನ್ನು ಉಪಯೋಗಿಸಬಾರದು. ಒಪ್ಪುವೆ. ಬಹಳಷ್ಟು ಪ್ರವಾಸ ಮಾಡಬಾರದು ಅದನ್ನೂ ಕೂಡ ನಾವು ಒಪ್ಪಬಹುದು ಆದರೆ ಅದೇ ಹೊತ್ತಿಗೆ ನಾವು 250 ಕೋಟಿ ರೂಪಾಯಿಗಳನ್ನು ಐದು ವರುಷಗಳಲ್ಲಿ ಖರ್ಚು ಮಾಡುತ್ತೇವೆ. ಎಲ್ಲ ಮಂತ್ರಿ- ಉಪ - ಮಂತ್ರಿಗಳು ಯೋಜನೆಗಳನ್ನು ಜಾಗರೂಕರಾಗಿ ಅಭ್ಯಸಿಸಿದರೆ, ಮತ್ತು ಎಲ್ಲ ಯೋಜನೆಗಳನ್ನು ನಿಗದಿತ ಅವಧಿಯಲ್ಲಿ

ಅನುಷ್ಠಾನಗೊಳಿಸುವಂತಾದರೆ ಬಹುಶಃ ನಾವು ಬಹಳಷ್ಟು ಉಳಿಸಲು ಸಾಧ್ಯವಾಗುತ್ತದೆ. ಈ ಕ್ಷಣದಲ್ಲಿ ನಾನು ಕೊಡುವ ಉತ್ತರ ಎಂದರೆ ಅದೊಂದೇ. ಬಹುಶಃ ನಾನು ಎಲ್ಲ ವಿಷಯಗಳಲ್ಲಿ ಉತ್ತರ ಕೊಡಲು ಪ್ರಯತ್ನಿಸಿದ್ದೇನೆಂದು ಭಾವಿಸುವೆ. ಏನಾದರೂ ಉತ್ತರಿಸುವ ವಿಷಯಗಳು ಇದ್ದರೆ....

* ಶ್ರೀ ಸಿ.ಜೆ. ಮುಕ್ಕಣ್ಣಪ್ಪ : ನೀವು ಪಾನ ನಿಷೇಧವನ್ನು ಮುಟ್ಟಲೇ ಇಲ್ಲ ಸಲೀಸಾಗಿ ವಿಷಯವನ್ನು ಬಿಟ್ಟಿರಿ.

* ಶ್ರೀ ಬಿ.ಡಿ. ಜತ್ತಿ : ನಾನು ಬಿಟ್ಟಿಲ್ಲ ಅದು ಅಖಿಲ ಭಾರತ ಮಟ್ಟದಲ್ಲಿ ಒಪ್ಪಿಕೊಂಡ ಪಾಲಿಸಿ. ಆದ್ದರಿಂದ ಈ ಸರಕಾರವೂ ಅದನ್ನು ಅನುಷ್ಠಾನಕ್ಕೆ ತರಲು ಬಯಸುತ್ತದೆ. ಅದನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುವಲ್ಲಿ ಬರುವ ತೊಡಕುಗಳ ಬಗ್ಗೆ ಸರಕಾರ ಎಚ್ಚರವಾಗಿದೆ. ಆದರೆ ತೊಡಕುಗಳಿದ್ದರೆ ಅವುಗಳನ್ನು ಸಾಧ್ಯವಾದರೆ ನಿವಾರಿಸಿಕೊಳ್ಳಬೇಕು ಮತ್ತು ಒಂದು ವೇಳೆ ಸರಕಾರ ಖಚಿತ ನಿರ್ಧಾರಕ್ಕೆ ಬಂದ ನಂತರ ಪಾನ ನಿಷೇಧ ಅವಶ್ಯವೇ ಅಥವ ಅಲ್ಲವೆ ಎಂದು ಪರಿಶೀಲಿಸುವುದು. ಆದರೆ ನಿರ್ಧಾರ ತೆಗೆದುಕೊಳ್ಳುವ ಮುನ್ನ ಈ ಮನೆಯ ಹಾಗೂ ಮೇಲ್ಮನೆಯ ಸದಸ್ಯರಿಗೆ ಚರ್ಚಿಸಲು ಒಂದು, ಎರಡು ಅಥವ ನಾಲ್ಕು ದಿನಗಳ ಅವಕಾಶ ಕೊಡಲಾಗುವುದು. ಅನಂತರ ಅವಿರೋಧವಾಗಿ ಅಥವ ಬಹುಮತದೊಂದಿಗೆ ಪಾನ ನಿಷೇಧ ಉಪಯೋಗವಿಲ್ಲ ಎಂದು ನಿರ್ಧಾರವಾದರೆ, ಆಗ ಅದನ್ನು ಮುಂದುವರಿಸಬೇಕೆ ಅಥವ ರದ್ದು ಮಾಡಬೇಕೆ ಎಂಬುದಾಗಿ ಪರಿಶೀಲಿಸುವ ಹಂತ ಬರುತ್ತದೆ.

# 1956ರ ವೇತನ ಪರಿಷ್ಕರಣ ವರದಿ ಕುರಿತು ವಿಧಾನ ಪರಿಷತ್ತಿನಲ್ಲಿ ಮಾಡಿದ ಭಾಷಣ

ಶ್ರೀ ಬಿ.ಡಿ. ಜತ್ತಿ:- ಮಾನ್ಯ ಸಭಾಪತಿಗಳೆ, ಸನ್ಮಾನ್ಯ ಸದಸ್ಯರ ಮಾತುಗಳನ್ನು ತುಂಬ ಜಾಗರೂಕತೆಯಿಂದ ಇಂದು ನಾನು ಕೇಳಿರುವೆ. ಈ ವಿಷಯದ ಕುರಿತು ಚರ್ಚೆ ನಡೆಯುತ್ತಿರುವುದು ಇದು ಮೊದಲನೆಯ ಸಲವೇನೂ ಅಲ್ಲ. ಬಜೆಟ್ ಸೆಶನ್ನಿನಲ್ಲಿ ಮತ್ತು ಹಲವಾರು ಸಂದರ್ಭಗಳಲ್ಲಿ ಸನ್ಮಾನ್ಯ ಸದಸ್ಯರು ಭಾಗವಹಿಸಿದಾರೆ ಮತ್ತು ತಮ್ಮ ವಿಚಾರಗಳನ್ನು ತುಂಬ ಸ್ಪಷ್ಟವಾಗಿ ವ್ಯಕ್ತ ಪಡಿಸಿದ್ದಾರೆ. ಹಣಕಾಸಿನ ಪರಿಸ್ಥಿತಿಯನ್ನು ಅವಲಂಬಿಸಿ ಸರಕಾರವು ಎನ್‌ಜಿಓಗಳಿಗೆ ಗರಿಷ್ಟತಮ ಸಹಾಯ ನೀಡುವ ಉದ್ದೇಶವನ್ನಿಟ್ಟುಕೊಂಡಿದೆ. ಸರಕಾರ ಈ ವಿಷಯವನ್ನು ಯಾವತ್ತಿಗೂ ಮುಂದೂಡಬೇಕೆಂಬ ಇಚ್ಛೆಯನ್ನು ಹೊಂದಿಲ್ಲ . ಒಂದು ವೇಳೆ ಸರಕಾರಕ್ಕೆ ಹಾಗೆ ಇಚ್ಛೆ ಇದ್ದರೆ, ಸರಕಾರ ವೇತನ ಆಯೋಗವನ್ನು ನಿಯಮಿಸಿ ವಿಷಯವನ್ನು ಒಂದೆರಡು ವರುಷಗಳ ಮಟ್ಟಿಗೆ ಮುಂದೂಡಬಹುದಿತ್ತು. ಅದು ಯೋಗ್ಯವಾದ ಪರಿಹಾರವಾಗುವುದಿಲ್ಲ ಈಗ ಸರಕಾರ ಮನಸ್ಸು ಮಾಡಿದೆ ಮತ್ತು ದಿನಾಂಕ 1-4-1965 ರಿಂದ ಎನ್‌ಜಿಓಗಳಿಗೆ ಈ ಲಾಭವನ್ನು ಕೊಡುತ್ತಲಿದೆ. ಸರಕಾರ ಇದನ್ನು ಪ್ರಕಟಿಸಿದ್ದರಿಂದ ಕೆಲವು ಸನ್ಮಾನ್ಯ ಸದಸ್ಯರು ಯಾಕೆ ಇದನ್ನು ಮಧ್ಯಂತರ ಪರಿಹಾರವೆಂದು ತಿಳಿದು ವೇತನ ಆಯೋಗವನ್ನೇಕೆ ನಿಯಮಿಸಬಾರದು ಎಂದು ಯೋಚಿಸುತ್ತಿದ್ದಾರೆ. ಅದು ಪರಿಹಾರವನ್ನು ಕಂಡು ಹಿಡಿಯಲು ಯೋಗ್ಯ ಮಾರ್ಗವಲ್ಲ. ಮಾರ್ಕೆಟ್ಟಿನಲ್ಲಿ ಕೆಲವು ವಸ್ತುಗಳ ಬೆಲೆ ಏರಿದ್ದರಿಂದ ಮೊದಲು ಆ ಸಮಯದಲ್ಲಿ ಎಲ್ಲ ಎನ್‌ಜಿಓಗಳಿಗೆ ಐದು ರೂಪಾಯಿಗಳ ಮಧ್ಯಂತರ ಪರಿಹಾರವೆಂದು ಆಡ್‌ಹಾಕ್ ಆಗಿ ಕೊಡಬೇಕೆಂದು ಸರಕಾರ ಬಯಸಿತ್ತು. ಅನಂತರ ಹಲವಾರು ಸನ್ಮಾನ್ಯ ಸದಸ್ಯರುಗಳು ಮತ್ತು ಅನೇಕ ಎನ್‌ಜಿಓಗಳು ಬಂದ ನನ್ನನ್ನು ಕಂಡು ಮಾತನಾಡಿದರು. ಮತ್ತು ಮದ್ರಾಸ್ ರಾಜ್ಯದ ಪ್ಯಾಟರ್ನವನ್ನು ಯಾಕೆ ಅನುಸರಿಸಬಾರದು? ಎಂದರು. ಆಗ ಸರಕಾರ ಮನಸ್ಸು ಮಾಡಿರಲಿಲ್ಲ. ಆದ್ದರಿಂದ ಮದ್ರಾಸ್ ರಾಜ್ಯ ಅನುಸರಿಸಿದ ಅಥವ ಅನುಸರಿಸಬಹುದಾದ ಮಾರ್ಗವನ್ನು ಬಹುಶಃ ನಮ್ಮ ಸರಕಾರ ಒಪ್ಪಲಿಕ್ಕಿಲ್ಲ ಎನ್ನಲಾಯಿತು. ಆದರೆ, ಇಂದು ಸರಕಾರವೇ ಇದನ್ನು ಅನುಸರಿಸಲು ಮುಂದೆ ಬಂದಾಗ, ಕೇಂದ್ರ ಸರಕಾರದ ನೌಕರರ ಸಂಬಳಕ್ಕೆ ಸರಿಯಾದ ವೇತನವನ್ನು ನಮ್ಮ ನೌಕರರು ಯಾಕೆ ಪಡೆಯಬಾರದು? ಎನ್ನುತ್ತಿದ್ದಾರೆ. ಮತ್ತೆ ಮತ್ತೆ ಈ ಸಭೆಯಲ್ಲಿ ಈ ಕುರಿತು ವಾದ ಮಾಡುತ್ತಿದ್ದಾರೆ. ಮೈಸೂರು ರಾಜ್ಯ ಪುನಾರಚಿತವಾದ ಮೇಲೆ ಸರಕಾರವು ತನ್ನ ನೌಕರರ ಸಂಬಳವನ್ನು ಅನೇಕ ಸಲ ಪರಿಷ್ಕರಿಸಿದೆ. ಹೊಸ ಮೈಸೂರು ರಾಜ್ಯ ರಚಿತವಾಗುವ ಮೊದಲು, ನಮ್ಮ ಸನ್ಮಾನ್ಯ ಸ್ನೇಹಿತರಾದ ಶ್ರೀ ಮಲ್ಲಾರಾಧ್ಯರು ಬೇರೆ- ಬೇರೆ ಅಧಿಕಾರದಲ್ಲಿದ್ದಾಗ ಯಾವ ವೇತನ ಶ್ರೇಣಿ ಇತ್ತು? ಆ ಸಮಯದಲ್ಲಿ ವೇತನ-ವಿಧಾನ ಏನಿತ್ತು? ಮತ್ತು ನಾಲ್ಕನೆಯ ವರ್ಗ ಮೂರನೆಯ ವರ್ಗ, ಎರಡನೆಯ ವರ್ಗ ಮತ್ತು ಮೊದಲ ವರ್ಗದ

ವಿ. ಪ.ನಡಿ: 7-4-1965

ನೌಕರರಿಗೆ ಸಂಬಳ ಎಷ್ಟಿತ್ತು? ಆಗ ಅವರು ಪ್ರಾಮಾಣಿಕರಾಗಿ, ನಂಬಿಗಸ್ತರಾಗಿ, ಮತ್ತು ನಿಷ್ಠೆಯಿಂದ ಕೆಲಸ ಮಾಡುತ್ತಿರಲಿಲ್ಲವೆ? ಆಗ ಕೂಡ ಅವರು ತುಂಬ ಚೆನ್ನಾಗಿ ಕೆಲಸ ಮಾಡುತ್ತಿದ್ದರು. ಈಗ ಯಾಕೆಂದರೆ ಬೆಲೆ ಏರಿಕೆಯಿಂದಾಗಿ ಮತ್ತು ಹೊಸ ರಾಜ್ಯ ನಿರ್ಮಾಣವಾದ ಮೇಲೆ ಬೇರೆ ಬೇರೆ ರಾಜ್ಯದ ಸಿಬ್ಬಂದಿ ಬಂದು ಸೇರಿದ ಮೇಲೆ ಅವರ ವೇತನಗಳಲ್ಲಿಯ ತಾರತಮ್ಯವನ್ನು ಕಂಡು ಸರಕಾರ ವೇತನ ಪರಿಷ್ಕರಣವನ್ನು ಯೋಚಿಸಿತು. 1957 ರಲ್ಲಿ ಉದಾರ ಮನೋಭಾವನೆಯಿಂದಲೇ ವೇತನವನ್ನು ಪರಿಷ್ಕರಿಸಲಾಯಿತು. ಮತ್ತೆ 1961 ರಲ್ಲಿ ವೇತನ ಶ್ರೇಣಿಯನ್ನು, ತುಟ್ಟಿಭತ್ಯೆ ಮತ್ತು ಅನುಕಂಪ ಭತ್ಯೆಯೊಂದಿಗೆ ಪರಿಷ್ಕರಿಸಲಾಯಿತು. ತುಟ್ಟಿಭತ್ಯೆ ಮತ್ತು ಇತರ ಭತ್ಯೆಗಳನ್ನು 1-4-1963ರಿಂದ 1-4-1964 ಮತ್ತು 1-4-1965 ರಿಂದ ಮತ್ತೆ ಮತ್ತೆ ಪರಿಷ್ಕರಿಸಲಾಗಿದೆ. ಮತ್ತೆ ಬೇಡಿಕೆ ಬಂದದ್ದರಿಂದ ಮತ್ತು ಬೆಲೆ ಏರಿಕೆಯ ದೃಷ್ಟಿಯಿಂದ ಮದ್ರಾಸ್ ಪ್ಯಾಟರ್ನನ್ನು ಈ ರಾಜ್ಯದಲ್ಲಿ ಅನುಸರಿಸಲಾಗುವುದೆಂದು ಸರಕಾರ ಪ್ರಕಟಿಸಿತು. ಮಾನ್ಯರೆ, 1957 ರ ವೇತನ ಪರಿಷ್ಕರಣೆಯಿಂದ ವಾರ್ಷಿಕ ಸುಮಾರು 4, 4 1/2 ಕೋಟಿ ರೂಪಾಯಿ ಅಧಿಕ ಭಾರಬಿತ್ತು. ಅನಂತರದ ಪರಿಷ್ಕರಣೆಗಳಿಂದ ವಾರ್ಷಿಕ 6,7 ಕೋಟಿ ಭಾರ ಬಿದ್ದಿದೆ. ಇಂದಿನ ಮದ್ರಾಸ್ ವೇತನ ಶ್ರೇಣಿಯ ಸ್ವೀಕೃತಿಯ ನಿರ್ಧಾರದಿಂದ 1-1-1965 ರ ಏರಿಕೆಯನ್ನೊಳಗೊಂಡು ಮತ್ತು 6-7 ಕೋಟಿ ರೂಪಾಯಿ ಭಾರ ಬೀಳಲಿದೆ. ಇದು ನಿಜವಾಗಿ ಹೇಳಬೇಕೆಂದರೆ ರಾಜ್ಯದ ಸಂಪನ್ಮೂಲಕ್ಕಿಂತ ಅಧಿಕವಾಯಿತು. ಫೈನಾನ್ಸ್ ಕಮೀಶನ್ನಿನ ಅವಾರ್ಡು ಹೊರಬಿದ್ದ ನಂತರವೇ ಎಲ್ಲವನ್ನೂ ಮಾಡಲಾಗುವುದೆಂದು ನಾನೆಂದೂ ಹೇಳಲಿಲ್ಲ. ನನ್ನ ಬಜೆಟ್ ಭಾಷಣದಲ್ಲಿ, ಎನ್‌ಜಿಓಗಳಿಗೆ ಒಂದಿಷ್ಟು ಅಡ್‌ಹಾಕ್ ಪರಿಹಾರ ಕೊಡಲು ಪ್ರಯತ್ನಿಸಿರುವೆನೆಂದು ಹೇಳಿದ್ದೆ. ಆದರೆ ಫೈನಾನ್ಸ್ ಕಮೀಶನ್ನಿನ ಸದಸ್ಯರನ್ನು ಕಂಡು ಬಂದ ಮೇಲೆ ಇಡೀ ಪರಿಸ್ಥಿತಿಯನ್ನು ಪರಿಷ್ಕರಿಸಲು ನಾವು ಪ್ರಯತ್ನಿಸುತ್ತೇವೆ ಎಂದು ಬಜೆಟ್ ಭಾಷಣದಲ್ಲಿ ಹೇಳಿದ ಮೇಲೆ ಫೈನಾನ್ಸ್ ಕಮೀಶನ್ನಿನ ಸದಸ್ಯರನ್ನು ಭೇಟಿಯಾಗಿ ಬಂದ ಮೇಲೆ ಸರಕಾರ ತಾನು ಮಾಡ ಬಯಸಿದ್ದನ್ನು ಪ್ರಕಟಿಸುವುದು ಸಹಜವಾಗಿತ್ತು. ಅವಾರ್ಡ ಬರುವವರೆಗೂ ಅವರು ತಡೆಯಲು ಸಿದ್ಧರಿರಲಿಲ್ಲ. ಮತ್ತು ಆ ಅವಾರ್ಡು ಆಗಸ್ಟ್ ತಿಂಗಳ ಹೊತ್ತಿಗೆ ದೊರೆಯಬಹುದು. ನಾವು ಕೂಡ ಅಲ್ಲಿಯವರೆಗೆ ತಡೆಯುವುದಿಲ್ಲ. ಇಷ್ಟಾಗಿಯೂ ನಾವು ಫೈನಾನ್ಸ್ ಕಮೀಶನನ್ನು ಭೇಟಿಯಾದಾಗ ನಾವು ಪರಿಸ್ಥಿತಿಯನ್ನು ತುಂಬ ಸ್ಪಷ್ಟವಾಗಿ ತಿಳಿಸಿದ್ದೇವೆ.

ಮಾನ್ಯರೆ, ಇಲ್ಲಿ, ಈ ಮೇಲ್ಮನೆ ಸಭೆಯಲ್ಲಿ ಸಲಹೆಗಳನ್ನು ನೀಡಲಾಯಿತು. ಭಾರತ ಸರಕಾರದ ಸೇವೆಯಲ್ಲಿದ್ದ ಇಲ್ಲಿಯ ನೌಕರರಿಗೆ ಮತ್ತು ರಾಜ್ಯ ಸರಕಾರದ ನೌಕರರಿಗೆ ಏಕರೂಪ ಸಂಬಳವಿರಬೇಕು ಕೇಂದ್ರ ಮತ್ತು ರಾಜ್ಯ ಸರಕಾರಗಳ ನೌಕರರ ಮಧ್ಯ ತಾರತಮ್ಯವಿರಬಾರದು ಎಂದು ಹೇಳಲಾಯಿತು. ಹೀಗೆ ನಾವು ಹೋಲಿಕೆಯನ್ನು ಮಾಡುತ್ತ ಹೋದರೆ, ಬಹುಶಃ ನಾವು ಒಂದು ಇತ್ಯರ್ಥಕ್ಕೆ ಬರುವುದೇ ಸಾಧ್ಯವಾಗುವುದಿಲ್ಲ. ಈ ಮನೆಯಲ್ಲಿ ಮತ್ತು

ಕೆಳಮನೆಯಲ್ಲಿ ಶಾಸಕರಿದ್ದಾರೆ. ಅವರು ಲೋಕ ಸಭೆಯ ಸಂಸದರಿಗಿಂತ ಕಡಿಮೆಯವರೆಂದು ನಾನೆಂದೂ ತಿಳಿದಿಲ್ಲ ಅವರಲ್ಲಿಯ ಕೆಲವರು ಅವರಿಗಿಂತ ಚೆನ್ನಾಗಿ ಕೆಲಸ ಮಾಡಬಹುದು. ಆದರೆ ಶಾಸಕರಿಗೆ ಇಲ್ಲಿ 250 ರೂ ಕೊಡಲಾಗುತ್ತದೆ. ಅದನ್ನು ಲೋಕಸಭಾ ಸದಸ್ಯರ ಸಂಬಳಕ್ಕೆ ಯಾಕೆ ಏರಿಸಬಾರದು? ಮತ್ತು ಮುಂದುವರೆದು ಹೇಳಬೇಕೆಂದರೆ, ಮಾನ್ಯ ಸದಸ್ಯರೆ, ಇಲ್ಲಿ ಕೆಲಸ ಮಾಡುವ ಮಂತ್ರಿಗಳು ಕೇವಲ 900 ರೂ ಪಡೆಯುತ್ತಾರೆ. ಆದರೆ ಕೇಂದ್ರ ಸಚಿವರು ರೂ 2000/- ಆದಕ್ಕಿಂತ ಅಧಿಕ ಪಡೆಯುತ್ತಾರೆ. ರಾಜ್ಯದ ಮಂತ್ರಿಗಳೂ ಯಾಕೆ ಕೇಂದ್ರ್ರದವರ ಸಂಬಳ ಮತ್ತು ಸವಲತ್ತುಗಳನ್ನು ಪಡೆಯಬಾರದು? ಹೀಗೆ ನಾವು ತುಲನೆ ಮಾಡುತ್ತ ಹೋದರೆ, ಬಹುಶಃ ನಾವು ಒಂದು ಸರಿಯಾದ ಇತ್ಯರ್ಥಕ್ಕೆ ಬರುವುದು ಸಾಧ್ಯವಾಗಲಿಕ್ಕಿಲ್ಲ. ಹಾಗೆ ನಮ್ಮನ್ನು ತುಲನೆ ಮಾಡಿಕೊಳ್ಳುವ ದಾರಿಯೂ ಅದಲ್ಲ ನಮ್ಮಷ್ಟಕ್ಕೆ ನಾವು ಒಂದು ವೇಳೆ ತುಲನೆ ಮಾಡಿ ನೋಡುವುದೇ ಆದರೆ, ನಾವು ದಕ್ಷಿಣದ ರಾಜ್ಯಗಳೊಂದಿಗೆ ತುಲನೆ ಮಾಡಿಕೊಳ್ಳಬೇಕು. ಉದಾಹರಣೆಗೆ, ಕೇರಳ ಆಂಧ್ರ ಅಥವಾ ಮದ್ರಾಸ್. ಈ ರಾಜ್ಯಗಳು ದಕ್ಷಿಣ ಭಾರತದಲ್ಲಿ ಬರುತ್ತವೆ. ಮತ್ತು ಇಲ್ಲಿಯ ಸ್ಥಿತಿಗತಿಗಳು ಸಾಮಾನ್ಯವಾಗಿ ಒಂದೇ ಆಗಿವೆ. ನಾವು ಏನಾದರೂ ಮಾಡಬೇಕಿದ್ದರೆ, ಅದು ಈ ಮದ್ರಾಸ್ ಕೇರಳ ಮತ್ತು ಆಂಧ್ರಗಳನ್ನು ಗಮನದಲ್ಲಿಟ್ಟುಕೊಂಡು ಮಾಡಬೇಕು. ಆಗ ಕೆಲವು ತಳಹದಿಗಳೊಂದಿಗೆ ನಾವು ಏನಾದರೂ ಸಲಹೆಗಳನ್ನು ಯೋಚಿಸಬಹುದು. ಕೇಂದ್ರ ಸರಕಾರವನ್ನು ಅನುಸರಿಸಬೇಕು ಎಂದು ಬಯಸಿದರೆ, ಆಗ ನಾವು ಭಾರತ ಸರಕಾರದ ಸಂಪನ್ಮೂಲಗಳನ್ನು ಮತ್ತು ರಾಜ್ಯ ಸರಕಾರದ ಸಂಪನ್ಮೂಲಗಳನ್ನು ಪರ್ಯಾಲೋಚಿಸಬೇಕು. ನಾವು ಸಂಪನ್ಮೂಲಗಳನ್ನು ತುಲನೆ ಮಾಡಿದಾಗ, ಸಾರಾಸಾರ ವಿಚಾರ ಉಳ್ಳಯಾವನಾದರೂ ಭಾರತ ಸರಕಾರದ ವೇತನ ಶ್ರೇಣಿಯೊಂದಿಗೆ - ಯಾವುದೇ ರಾಜ್ಯ ಸರಕಾರಗಳು ತಮ್ಮ ಸಂಬಳಗಳನ್ನು ಏರಿಸಲು ಅಸಾಧ್ಯ ಎಂಬುದನ್ನು ಒಪ್ಪಿಕೊಳ್ಳುತ್ತಾನೆ, ಇದು ನಿಜದಲ್ಲಿ ಇದ್ದ ವಸ್ತು ಸ್ಥಿತಿ. ಈ ದೃಷ್ಟಿಯಿಂದ ನಾವು ಪರ್ಯಾಲೋಚಿಸಬೇಕು.

ಸರಕಾರವು ವೇತನ ಆಯೋಗವನ್ನು ನೇಮಿಸುತ್ತದೆಯೇ ಅಥವಾ ಇಲ್ಲವೇ ಎಂಬುದನ್ನು ಖಚಿತವಾಗಿ ಹೇಳಬಲ್ಲುದೇ ಎಂಬುದನ್ನು ಕೆಲವು ಸದಸ್ಯರು ಸೂಚಿಸಿದರು. ಮಾನ್ಯರೆ, ವೇತನ ಆಯೋಗವನ್ನು ನಿಯಮಿಸುವುದರಿಂದ ಪರಿಹಾರ ದೊರಕಲಾರದು. ನಾವು ವೇತನ ಆಯೋಗವನ್ನು ನಿಯಮಿಸಬೇಕು ಎಂದು ಬಯಸಿದ್ದರೆ, ಅಥವಾ ವೇತನ ಆಯೋಗವನ್ನು ನೇಮಿಸಬೇಕು ಎಂಬುದು ಕೆಲ ಸನ್ಮಾನ್ಯ ಸದಸ್ಯರ ಉದ್ದೇಶವಾಗಿದ್ದರೆ ಆಗ ನಾವು 1-4-1965 ರಿಂದ ಕೊಡಬೇಮಾಡಬೇಕೆಂದಿದ್ದ ಪರಿಹಾರವನ್ನು ಕೊಡಬಾರದು ಮತ್ತು ಸರಕಾರವು ಆ ಪ್ರಸ್ತಾವನೆಯನ್ನು ಪರ್ಯಾಲೋಚಿಸಬಹುದು. ಆದರೆ ಅದು ಎನ್‌ಜಿಓಗಳಿಗೆ ಸಹಕಾರಿಯಾಗಲಿಕ್ಕಿಲ್ಲ. ಅವರು ಆರು ತಿಂಗಳೋ ಒಂದೋ ಅಥವಾ ಎರಡು ವರುಷ ಕಾಯಲು ಸಾಧ್ಯವಾಗದು. ಏರುತ್ತಿರುವ ಬೆಲೆಗಳಿಂದಾಗಿ ಇಂದು ಅವರು ಪರಿಹಾರವನ್ನು ಬಯಸುತ್ತಿದ್ದಾರೆ. ತಕ್ಷಣ ನಾವು ಅವರಿಗೆ ಪರಿಹಾರವನ್ನು ಕೊಡದೆ, ನೇಮಿಸಬೇಕೆಂದಿದ್ದ

ವೇತನ ಆಯೋಗದ ವರದಿಯವರೆಗೂ ತಡೆಯಿರಿ ಎಂದರೆ, ಬಹುಶಃ ಅವರಿಗೆ ನಿರಾಶೆಯಾಗುತ್ತದೆ. ಆಯೋಗವನ್ನು ನೇಮಿಸಿದರೆ, ಅವರು ಶಾಸ್ತ್ರೀಯ ಆಧಾರಗಳನ್ನು ಕೊಡಲು ಸಮರ್ಥರಾಗಬಹುದು. ಆದರೆ ಅಲ್ಲಿಯವರೆಗೂ ಎನ್‌ಜಿಓಗಳು ಕಾಯಬಲ್ಲರೆ ಎಂಬ ಅಂಶವನ್ನು ಪರ್ಯಾಲೋಚಿಸಬೇಕು. ಆ ಅಂಶವನ್ನು ಗಮನದಲ್ಲಿಟ್ಟುಕೊಂಡು ದಕ್ಷಿಣದಲ್ಲಿ ಅನುಸರಿಸಿದ್ದನ್ನೆ ನಾವು ಕೂಡ ಒಪ್ಪುವುದು ಉಚಿತವೆಂದು ಯೋಚಿಸಿದೆವು. ಮತ್ತು ಅದರಂತೆ ಈ ಎಲ್ಲ ರಾಜ್ಯ ಸರಕಾರಗಳು ನೀಡಿದ ಸವಲತ್ತುಗಳನ್ನು ಗಮನಿಸಿ ನಮ್ಮ ಸರಕಾರ ಸಾಧ್ಯವಿದ್ದುದ್ದನ್ನು ಕೊಡಲು ಯೋಚಿಸಿತು. ನಾವು ಸರಕಾರೀ ಆದೇಶವನ್ನು ನೀಡುವ ಮೊದಲು ಈ ಎಲ್ಲ ಅಂಶಗಳನ್ನು ಕೂಲಂಕುಷವಾಗಿ ಪರೀಕ್ಷಿಸುತ್ತೇವೆ. ಅದುವೆ ನಿಜವಾಗಿ ಪರ್ಯಾಲೋಚಿಸಬೇಕಾದ ವಿಷಯ ಮತ್ತು ಅದು ಶಾಸ್ತ್ರೀಯ ತಳಹದಿಯದ್ದೂ ಕೂಡ ಆಗಿದೆ. ಮದ್ರಾಸ್ ಸರಕಾರದ ನೌಕರರ ವೇತನದೊಂದಿಗೆ ನಮ್ಮ ಸಂಬಳ ಶ್ರೇಣಿಯನ್ನು ತುಲನೆ ಮಾಡಿದಾಗ, ಕೆಲವಂಶಗಳಲ್ಲಿ ನಮ್ಮ ಶ್ರೇಣಿ ಚೆನ್ನಾಗಿದೆ ಎನಿಸುತ್ತದೆ. ಇನ್ನು ಕೆಲವು ವರ್ಗಗಳಲ್ಲಿ ಚೆನ್ನಾಗಿಲ್ಲ. ಅವರ ಪರಿಸ್ಥಿತಿ ಕೆಟ್ಟದ್ದಾಗಿದೆ. ಎಲ್ಲೆಲ್ಲಿ ಮದ್ರಾಸ್ ಸರಕಾರದ ನೌಕರರ ಸಂಬಳಕ್ಕೆ ಸಮನಾಗಿಲ್ಲವೋ ಅಲ್ಲಿ ನಾವು ಪರಿಸ್ಥಿತಿಯನ್ನು ಸುಧಾರಿಸ ಬಯಸಿದ್ದೇವೆ. ಎಲ್ಲೆಲ್ಲಿ ನಮ್ಮ ಸರಕಾರೀ ನೌಕರರು ಒಳ್ಳೆಯ ವೇತನ ಶ್ರೇಣಿಯನ್ನು ಪಡೆದಿದ್ದಾರೋ ಅಲ್ಲಿ ನಾವು ಕಡಿತಗೊಳಿಸ ಬಯಸುವುದಿಲ್ಲ. ನಾವು ಅದನ್ನೇ ಮುಂದುವರೆಸುತ್ತೇವೆ.

ಸಾಯಂಕಾಲ 5.45 ಗಂಟೆ

ತುಟ್ಟಿಭತ್ಯೆಗೆ ಸಂಬಂಧಿಸಿದಂತೆ, ನಾವು ಬೇರೆ ಏನನ್ನಾದರೂ ವಿಧಾನಗಳನ್ನು ಯೋಚಿಸಬೇಕು. ಅಡ್‌ಹಾಕ್ ತಳಹದಿಯ ಮೇಲೆ ತುಟ್ಟಿ ಭತ್ಯೆಯನ್ನು ಕೊಡುವಂತೆ ನಾವು ಯೋಚಿಸಲಾರೆವು ಅದು ಮಧ್ಯಂತರ ಪರಿಹಾರ ಆಗಲಾರದು ಆದರೆ ಅದು ಬೇರೆಯದೇ ಆಗಿರುತ್ತದೆ. ಸರಕಾರ ತನ್ನ ಸಾಂಪತ್ತಿಕ ಸ್ಥಿತಿಯನ್ನು ಗಮನಿಸಿ ಕೊಡಬೇಕೆಂದು ನಿರ್ಧರಿಸಿದೆ. ನಾಲ್ಕನೆಯ ವರ್ಗದ ನೌಕರನಿಗೆ ಗರಿಷ್ಠತಮ ಫಲ ದೊರೆಯಬೇಕೆಂದು ಹೇಳುವುದು ಅತ್ಯಂತ ಸುಲಭದ ಸಲಹೆಯಾಗಿದೆ. ಸರಕಾರಕ್ಕೆ ಕೂಡ ನಾಲ್ಕನೆಯ ವರ್ಗದ ನೌಕರನ ಕುರಿತು ಅನುಕಂಪ ಇದೆ. ನನ್ನ ಹತ್ತಿರ ಚರ್ಚೆಗೆ ಬಂದ ಕೆಲವು ಜನರು, ಬಹುತೇಕ ಎನ್‌ಜಿಓಗಳು ನಾಲ್ಕನೆಯ ವರ್ಗದ ನೌಕರರಾಗಿದ್ದಾರೆ ಎಂದು ಹೇಳಿದರು. ಅದ್ಹೇಗೆ ಅವರು ಅಧಿಕ ಲಾಭವನ್ನು ಪಡೆಯಬಲ್ಲರು? 'ನಿಜವಾಗಿಯೂ ನಿಮಗೆ ಅವರಲ್ಲಿ ಅನುಕಂಪ ಇದ್ದರೆ ಸರಕಾರ ನಿಮಗೆಲ್ಲ ಕೊಡುತ್ತಿರುವ ತುಟ್ಟಿ ಭತ್ಯೆ ಮತ್ತು ಇತರ ಭತ್ಯೆಗಳನ್ನು ಸರಿಸಮಾನವಾಗಿ ಹಂಚಲು ಸಿದ್ಧರಿರುವಿರಾ? ಎಂದು ನಾನು ನೇರವಾಗಿ ಅವರನ್ನು ಕೇಳಿದೆ. ಅದಕ್ಕೆ ಅವರು ಸಿದ್ಧರಿರಲಿಲ್ಲ. ಆ ಮೇಲೆ ಏನು ಉಪಯೋಗ? ಬಡವರಿಗಾಗಿ ಕಿಂಚಿತ್ ತ್ಯಾಗ ಮಾಡಲೂ ಸಾಧ್ಯವಿಲ್ಲವೆ? ಕೇವಲ 'ತುಟಿ ಅನುಕಂಪ' ನಮಗೆ ಸಹಾಯ ಮಾಡದು. ಇನ್ನೂ ಹೇಳಬೇಕೆಂದರೆ ಸರಕಾರವನ್ನು ನಡೆಸುವ ನಾವು ಅಲ್ಲಿಯ ವಿವಿಧ ವರ್ಗಗಳ ಸರಕಾರೀ ನೌಕರರನ್ನೂ ಮೊದಲ ವರ್ಗ, ಎರಡನೆಯ ವರ್ಗ ಮೂರನೆಯ ವರ್ಗ ಮತ್ತು ನಾಲ್ಕನೆಯ

ವರ್ಗ ಅಲ್ಲದೆ ಆಯ್‌ಎಎಸ್, ಆಯ್‌ಪಿಎಸ್ ಎಲ್ಲರನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಬೇರೆ ಬೇರೆ ವರ್ಗದ ನೌಕರರಿಗೆಲ್ಲ ಒಂದೇ ಮಾದರಿಯ ವೇತನ ಶ್ರೇಣಿಯನ್ನು ಕೊಡುವುದು ಸಾಧ್ಯವೆ? ಕನಿಷ್ಟ ಶ್ರೇಣಿಯ ಸಂಬಳದ 30 ಪಟ್ಟು ಗರಿಷ್ಟತಮ ವೇತನ ಶ್ರೇಣಿ ಇರಬೇಕೆಂದು ಸನ್ಮಾನ್ಯ ಸದಸ್ಯರಾದ ಶ್ರೀ ಶಾಸ್ತ್ರಿ ಅವರು ಸೂಚಿಸಿದರು. ಅದು ಈ ಮೊದಲಿನ ಒಂದು ವೇತನ ಪರಿಷ್ಕರಣ ಆಯೋಗದ ವರದಿಯಲ್ಲಿ ಹೇಳಲಾಗಿದೆ. ಒಂದು ವೇಳೆ ಅದನ್ನು ಗಣನೆಗೆ ತೆಗೆದುಕೊಂಡರೆ, ನಾವು ಆ ಮಟ್ಟಕ್ಕೆ ಮುಟ್ಟಬಲ್ಲೆವೆ ಅಥವಾ ಇಲ್ಲವೆ ಎಂಬುದನ್ನು ಪರೀಕ್ಷಿಸಬೇಕಾಗುತ್ತದೆ. ಅಥವಾ ಕನಿಷ್ಟ ಅದರ ಸಮೀಪವಾದರೂ ಮುಟ್ಟುತ್ತೇವೆಯೇ ಎಂದು ನೋಡಬೇಕು. ನಮ್ಮ ರಾಜ್ಯದಲ್ಲಿಯ ನಾಲ್ಕನೆಯ ವರ್ಗದ ನೌಕರನು ಎಲ್ಲ ಭತ್ಯೆಗಳನ್ನು ಸೇರಿಸಿ ಬೆಂಗಳೂರಿನಲ್ಲಿ ರೂ 93 ನ್ನು ಪಡೆಯುತ್ತಿದ್ದರೆ, ಒಂದು ಲಕ್ಷ ಅಥವಾ ಅದಕ್ಕಿಂತ ಅಧಿಕ ಜನಸಂಖ್ಯೆಯ ನಗರಗಳಲ್ಲಿ ರೂ 90/- ನ್ನು ಪಡೆಯುತ್ತಾನೆ. ಇದರ 30 ಪಟ್ಟು ಎಂದರೆ, ಸುಮಾರು ರೂ 2700/- ಎಂಬುದಾಗಿ ನೀವು ಲೆಕ್ಕ ಹಾಕಬಹುದು. ಅದುವೆ ನಮ್ಮ ಮುಂದಿನ ಮಾದರಿಯಾಗಿದೆ. ಈ ದೃಷ್ಟಿಯಿಂದ ಇಂದು ನಾವು ಆ ಹಂತವನ್ನು ಮುಟ್ಟಿದ್ದೇವೆಯೆ? ನಮ್ಮ ರಾಜ್ಯದಲ್ಲಿಯ ಸರಕಾರಿ ನೌಕರರಲ್ಲಿ ಗರಿಷ್ಟತಮ ರೂ 2250/- ಆಗಿದೆ. ಸೂಪರ ಟೈಮ ಶ್ರೇಣಿ ಮತ್ತು ಸರಕಾರದ ಮುಖ್ಯ ಕಾರ್ಯದರ್ಶಿ ಮಾತ್ರ ರೂ. 2750 ನ್ನು ಪಡೆಯಲು ಅರ್ಹರಾಗಿದ್ದಾರೆ. ಮುಖ್ಯ ಕಾರ್ಯದರ್ಶಿಗಳ ಹೊರತಾಗಿ ಉಳಿದ ಸೂಪರ ಟೈಮ ಸ್ಕೇಲ ಶ್ರೇಣಿ ಈ ರಾಜ್ಯದಲ್ಲಿ ರೂ 2250/- ಆಗಿದೆ ಒಂದು ವೇಳೆ ರೂ 93 ನ್ನು 30 ರಿಂದ ಗುಣಿಸಿದರೆ ಯಾವ ಸಂಖ್ಯೆ ಬರುತ್ತದೆ, ದಯವಿಟ್ಟು ನೀವೇ ಯೋಚಿಸಿರಿ ಮತ್ತು ನಾವು ಆ ಮಾದರಿಯನ್ನು ಮುಟ್ಟಲು ಸಾಧ್ಯವಾಗಿದೆಯೇ ಎಂಬುದರ ಇತ್ಯರ್ಥಕ್ಕೆ ಬನ್ನಿರಿ ಈ ಎಲ್ಲ ಕಾರಣಗಳಿಂದಾಗಿ ನಾವು ಅದನ್ನು ಯೋಚಿಸಿದ್ದೇವೆ. ಮತ್ತು ಇಂದು ವೇತನ ಆಯೋಗವನ್ನು ನೇಮಿಸುವುದಕ್ಕೆ ಒಪ್ಪದಂಥ ಪರಿಸ್ಥಿತಿಯಲ್ಲಿ ನಾನಿದ್ದೇನೆ.

ಕೆಲವು ದಿನಗಳ ಅನಂತರ ಏನಾಗಬಹುದು ಎಂಬುದು ನನಗೆ ಗೊತ್ತಿಲ್ಲ. ಇಂದಿನ ಪರಿಸ್ಥಿತಿಯಲ್ಲಿ ನಾವು ವಿಷಯವನ್ನು ಚೆನ್ನಾಗಿ ಅರ್ಥ ಮಾಡಿಕೊಂಡು ಮತ್ತು ರಾಜ್ಯದ ಸಾಂಪತ್ತಿಕ ಸ್ಥಿತಿಯನ್ನು ಗಮನಿಸಿ ಎನ್‌ಜಿಓಗಳಿಗೆ ಸಹಾಯವಾಗುವಂತೆ ನಾವು ನಿರ್ಧರಿಸಿ ನಮ್ಮ ಹೇಳಿಕೆಯನ್ನು ಇಲ್ಲಿ ಮತ್ತು ಕೆಳ ಮನೆಯಲ್ಲಿ ಪ್ರಕಟಿಸಿದ್ದೇವೆ.

ಆದ್ದರಿಂದ ಶ್ರೀ ನರಸಿಂಹನ್ ಅವರು ಮಂಡಿಸಿದ ಗೊತ್ತುವಳಿಯನ್ನು ಅಥವಾ ಶ್ರೀ ಮಲ್ಲಾರಾಧ್ಯರು ಮಂಡಿಸಿದ ತಿದ್ದುಪಡಿಯನ್ನು ನಾನು ಒಪ್ಪುವ ಸ್ಥಿತಿಯಲ್ಲಿ ಇಲ್ಲ.

## ಆಹಾರ ಮಂತ್ರಿಗಳಾಗಿ ಶ್ರೀ ಬಿ.ಡಿ. ಜತ್ತಿ

1965 ರಲ್ಲಿ ಭಾರತ ದೇಶದಲ್ಲೆಲ್ಲ ಆಹಾರದ ತುಟಾಗ್ರತೆ ಆಯಿತು. ಆಹಾರದ ಅಭಾವ ತೀಕ್ಷ್ಣವಾದಾಗ ಬೆಂಗಳೂರಿನಲ್ಲಿ ದೊಂಬಿ ಎದ್ದಿತು. ದಿನಾಂಕ 7-6-1965 ರಿಂದ ಶ್ರೀ ಬಿ.ಡಿ. ಜತ್ತಿಯವರು ಆಹಾರ ಇಲಾಖಾ ಮಂತ್ರಿಗಳಾಗಿ ಕಾರ್ಯ ಪ್ರಾರಂಭಿಸಿದರು. ಅವರು ರಾಜ್ಯದಲ್ಲಿಯ ಅಭಾವ ಪರಿಸ್ಥಿತಿಯನ್ನು ನಿಯಂತ್ರಿಸಿದ ರೀತಿ ಮುಂದೆ ಎನ್.ಡಿ.ಸಿ. ಸಭೆಯಲ್ಲಿ ಚರ್ಚೆಗೆ ಬಂದು ಅಂದಿನ ಪ್ರಧಾನ ಮಂತ್ರಿಗಳಾದ ಶ್ರೀ ನೆಹರೂರವರು 'ಕರ್ನಾಟಕ ಸರಕಾರದ ಆಹಾರ ಮಂತ್ರಿಯ ಯೋಜನೆಯನ್ನು ಎಲ್ಲ ಕಡೆಗೆ ಏತಕ್ಕೆ ಅನುಸರಿಸಬಾರದು'? ಎಂದು ಕೇಳಿದರು.

ಕರ್ನಾಟಕದಲ್ಲಿ ಆಹಾರ ಹಂಚುವಿಕೆಯನ್ನು ಈ ರೀತಿ ಮಾಡಲಾಗಿತ್ತು.

ಸಗಟು ಆಹಾರಧಾನ್ಯ ವರ್ತಕರ ಸಭೆಯನ್ನು ಕರೆಯಿಸಿ ಅವರ ಕೂಡ ದೀರ್ಘ ಕಾಲ ಚರ್ಚೆ ಮಾಡಿ ಅವರ ಪರವಾಗಿ ಅವರದೇ ಒಂದು ಕಮೀಟಿಯನ್ನು ನೇಮಿಸಲಾಯಿತು. ಸಗಟು ವರ್ತಕರು ಆಹಾರ ಧಾನ್ಯವನ್ನು ಕೊಂಡುಕೊಂಡ ಬೆಲೆ ಮೇಲೆ ಶೇಕಡ ಒಂದೂವರೆಯಂತೆ ಲಾಭ ತೆಗೆದುಕೊಳ್ಳಬೇಕೆಂದು ಗೊತ್ತು ಮಾಡಲಾಯಿತು. ಇದೇ ರೀತಿ ಸಣ್ಣ ವರ್ತಕರು ಎಲ್ಲ ಖರ್ಚನ್ನು ಸೇರಿಸಿ ಆದ ಒಟ್ಟು ಬೆಲೆಯ ಶೇಕಡ ಮೂರರಷ್ಟು ಲಾಭ ತೆಗೆದುಕೊಂಡು ಮಾರಾಟ ಮಾಡಬೇಕೆಂದು ನಿರ್ಣಯಿಸಲಾಯಿತು. ಅವರ ಪರವಾಗಿಯೂ ಅವರದೇ ಒಂದು ಕಮೀಟಿಯನ್ನು ನೇಮಿಸಲಾಯಿತು. ಈ ತೀರ್ಮಾನದಂತೆ ಯಾರಾದರೂ ನಡೆಯಲು ತಪ್ಪಿದರೆ, ಉಗ್ರಕ್ರಮ ತೆಗೆದುಕೊಳ್ಳಲಾಗುವುದೆಂದು ನಿರ್ಣಯಿಸಲಾಯಿತು. ಈ ರೀತಿ ಎಲ್ಲ ಹಂಚಿಕೆ ಮಾಡುವ ವಸ್ತುಗಳನ್ನು ಸರಕಾರದ ಅಂಗಡಿಗಳ ಮತ್ತು ಖಾಸಗಿ ವರ್ತಕರ ಮುಖಾಂತರ ಹಂಚಲು ವ್ಯವಸ್ಥೆ ಮಾಡಲಾಯಿತು. ಈ ತರಹದ ವ್ಯವಸ್ಥೆಯಿಂದ ಆಹಾರ ಧಾನ್ಯ ಹಂಚಿಕೆ ಸುಗಮವಾಯಿತು.

## ದಿನಾಂಕ - 3-2-1966

### ವಿಧಾನ ಪರಿಷತ್ತಿನಲ್ಲಿ ರಾಜ್ಯ ಆಹಾರ ಪರಿಸ್ಥಿತಿ ಕುರಿತು ಮಾಡಿದ ಭಾಷಣ

ಶ್ರೀ ಬಿ.ಡಿ. ಜತ್ತಿ (ಆಹಾರ ಶಾಖೆಯ ಮಂತ್ರಿಗಳು):- ಮಾನ್ಯ ಸಭಾಪತಿಗಳೇ ಈ ಮೇಲ್ಮನೆಯಲ್ಲಿ ಆಹಾರದ ವಿಷಯವಾಗಿ ಸಾಕಷ್ಟು ಚರ್ಚೆ ಮಾಡಿದ್ದಾರೆ. ನಾನು ಕೆಲವು ಮಾತುಗಳನ್ನು ಸ್ಥೂಲವಾಗಿ ಹೇಳುವುದಕ್ಕೆ ಪ್ರಯತ್ನ ಮಾಡುತ್ತೇನೆ. ನಮ್ಮ ಮೈಸೂರು ರಾಜ್ಯದಲ್ಲಿ ಒಟ್ಟಿಗೆ ನಮಗೆ ಒಂದು ವರ್ಷಕ್ಕೆ ಬೇಕಾಗುವ ಆಹಾರ ಧಾನ್ಯ ಸುಮಾರು 48 ರಿಂದ 49 ಲಕ್ಷ ಟನ್, ಮಳೆ ಬೆಳೆಗಳು ಚೆನ್ನಾಗಿ ಆದ ವರ್ಷ ನಮ್ಮ ರಾಜ್ಯದಲ್ಲಿ 45 ಲಕ್ಷ ಟನ್ ಆಹಾರವನ್ನು ಬೆಳೆಯುತ್ತಾರೆ. ಸರ್ವೇ ಸಾಮಾನ್ಯವಾಗಿ 3-4 ಲಕ್ಷ ಟನ್ ಆಹಾರ ನಮ್ಮಲ್ಲಿ ಕೊರತೆ ಆಗುತ್ತಿತ್ತು. ಆದರೆ ಈ ವರ್ಷ ದುರ್ದೈವದಿಂದ ನಮ್ಮ ರಾಜ್ಯದಲ್ಲಿ ಮಳೆ ಚೆನ್ನಾಗಿ ಆಗಲಿಲ್ಲ. ಬೆಳೆ ಚೆನ್ನಾಗಿ ಬರಲಿಲ್ಲ. ಇದರ ಪರಿಣಾಮವಾಗಿ ಮುಂಗಾರು ಬೆಳೆಯಲ್ಲಿ 14 ರಿಂದ 15 ಲಕ್ಷ ಟನ್, ಹಿಂಗಾರು ಬೆಳೆಯಲ್ಲಿ 5 ಲಕ್ಷ ಟನ್ ಆಹಾರ ಧಾನ್ಯ ಕೊರತೆ ಬೀಳಬಹುದೆಂದು ಅಂದಾಜು ಮಾಡಲಾಯಿತು. ಆದರೆ ಕೊನೆಯ ಬೆಳೆಗೆ ಕೊನೆಯಲ್ಲಿ ತಡವಾಗಿ ಬಂದ ಮಳೆಯ ಪರಿಣಾಮವಾಗಿ ಬೆಲೆಯು ಸುಧಾರಿಸಿ 5 ಲಕ್ಷ ಟನ್ ಆಹಾರ ಧಾನ್ಯ ಕಡಿಮೆ ಆಗುವುದಿಲ್ಲ. ಸ್ವಲ್ಪ ಸುಧಾರಣೆ ಆಗಬಹುದು ಎಂದು ಅಂದಾಜು ಮಾಡಲಾಯಿತು. ಒಟ್ಟಿನಲ್ಲಿ ಈಗ 18 ಲಕ್ಷ ಟನ್ ಆಹಾರಧಾನ್ಯ ಕಡಿಮೆ ಬೀಳುತ್ತದೆ. ಎಂದು ಅಂದಾಜು ಮಾಡಿದ್ದಾರೆ. ಇದನ್ನು ನಾವು ಹೇಗೆ ಸರಿದೂಗಿಸಬೇಕು. ಎನ್ನುವ ಪ್ರಶ್ನೆ ಬರುತ್ತದೆ. ಕೇಂದ್ರ ಸರ್ಕಾರದವರನ್ನು 10 ಲಕ್ಷ ಟನ್ ಆಹಾರಧಾನ್ಯ ಕೊಡಬೇಕೆಂದು ನಾವು ಕೇಳಿಕೊಂಡಿದ್ದೇವೆ. ನಂತರ ಬೇಸಿಗೆಯಲ್ಲಿ ಎರಡನೆ ಬೆಳೆ ಬೆಳೆಯುವುದಕ್ಕೆ ಎಲ್ಲಾ ಕಡೆಯಲ್ಲಿಯೂ ಸಾಕಷ್ಟು ಪ್ರಯತ್ನ ಮಾಡುತ್ತಿದ್ದೇವೆ. ಎಲ್ಲಿ ನೀರಾವರಿ ಸೌಲಭ್ಯವನ್ನು ಒದಗಿಸುವುದಕ್ಕೆ ಸಾಧ್ಯವಿದೆ ಅಲ್ಲಿ ಎಲೆಕ್ಟ್ರಿಸಿಟಿ ಪಂಪುಸೆಟ್ಟು ಮತ್ತು ಡೀಜೆಲ್ ಪಂಪು ಸೆಟ್ಟುಗಳಿಂದ ನೀರು ಎತ್ತಿ ಹೆಚ್ಚು ಬೆಳೆಯನ್ನು ಬೆಳೆಯುವುದಕ್ಕೆ ಪ್ರಯತ್ನ ಮಾಡುತ್ತೇವೆ. ಹೇಗಾದರೂ ಮಾಡಿ ಈ ವರ್ಷ ಆಹಾರ ಧಾನ್ಯವನ್ನು ಪೂರೈಸುವುದಕ್ಕೆ ಪ್ರಯತ್ನ ಮಾಡುತ್ತೇವೆಂದು ನಾವು ಒಪ್ಪಿಕೊಂಡಿದ್ದೇವೆ. ನಮ್ಮ ಮೈಸೂರು ರಾಜ್ಯದಲ್ಲಿ ಹೋದ ವರ್ಷ ರೈತರ ಕಡೆಯಿಂದ ಲೇವಿಯನ್ನು ವಸೂಲು ಮಾಡಿದ್ದಕ್ಕೂ ಈ ವರ್ಷ ಲೆವಿಯನ್ನು ವಸೂಲು ಮಾಡುತ್ತಿರುವುದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಹೋದ ವರ್ಷ ಲೆವಿ ವಸೂಲು ಮಾಡುವುದರಲ್ಲಿ ಒಂದು ಎಕರೆಗೆ ಇಂತಿಷ್ಟು ಎಂದು ಲೆಕ್ಕ ಹಾಕಿ ಅದರಂತೆ ವಸೂಲು ಮಾಡುತ್ತಿದ್ದರು. ಇಲ್ಲದೆ ಹೋದರೆ ಮಿಲ್ ಪಾಯಿಂಟ್ ಇಷ್ಟು ಎಂದು ಲೆಕ್ಕ ಹಾಕಿ ಅದರಂತೆ ರೈತರ ಕಡೆಯಿಂದ ಆಹಾರ ಧಾನ್ಯವನ್ನು ವಸೂಲು ಮಾಡುತ್ತಿದ್ದರು. ಇದರಲ್ಲಿ ಅಲ್ಲಲ್ಲೇ ಸ್ವಲ್ಪ ಗಲಾಟೆ ಆಗಿ ಎಷ್ಟು ಆಹಾರ ಧಾನ್ಯವನ್ನು ಶೇಖರಿಸಬೇಕಾಗಿತ್ತೋ ಅಷ್ಟು ಆಹಾರ ಧಾನ್ಯವನ್ನು ಶೇಖರಣೆ ಮಾಡುವುದಕ್ಕೆ ಆಗಲಿಲ್ಲ.

ಈ ಸಲ ಆಹಾರದ ಬಗ್ಗೆ ಒಂದು ನಿರ್ದಿಷ್ಟವಾದ ನೀತಿಯನ್ನು ಮಾಡಲಾಗಿದೆ. ಮೊದಲು ಎಕರೆವಾರಾಗಿ ತೆಗೆದುಕೊಳ್ಳಬೇಕೆಂದು ಇತ್ತು. ಆಮೇಲೆ ಅದನ್ನು ಬದಲಾವಣೆ ಮಾಡಬೇಕೆಂದು ಸರಕಾರದವರೂ ವಿಚಾರ ಮಾಡಿ ಒಂದೇ ಸಾರಿ ನಿಯಮಗಳನ್ನು ಸರಿಯಾಗಿ ಮಾಡಬೇಕೆಂದು ಮತ್ತು ಮುಂದೆ ಅದನ್ನು ಬದಲಾಯಿಸಲು ಅವಕಾಶ ಇರಕೂಡದು ಎಂದು ಈ ಸಾರಿ ಸರಿಯಾಗಿ ಆಹಾರದ ನಿಮಯಗಳನ್ನು ಮಾಡಲಾಗಿದೆ ಮತ್ತು ಮುಂದೆ ಯಾವ ತರಹದ ಬದಲಾವಣೆಯನ್ನೂ ಮಾಡಕೂಡದು ಎಂದು ನಿರ್ಧಾರ ತೆಗೆದುಕೊಂಡು ಇದ್ದೇವೆ. ಅದರಂತೆ ಈ ಸಾರಿ ಬತ್ತ, ಜೋಳ ಹಾಗೂ ಗೋಧಿ ಇವುಗಳ ಬಗ್ಗೆ ಲೆವಿ ಯಾವ ರೀತಿಯಾಗಿರಬೇಕು ಮತ್ತು ಹೇಗೆ ತೆಗೆದುಕೊಳ್ಳಬೇಕು ಎನ್ನುವುದನ್ನು ಯೋಚನೆ ಮಾಡಿ ಅದಕ್ಕೆ ತಕ್ಕಂತೆ ಈಗಾಗಲೇ ನೋಟಿಫಿಕೇಷನ್ನುಗಳನ್ನು ಹೊರಡಿಸಲಾಗಿದೆ. ವೃತ್ತಪತ್ರಿಕೆಗಳ ಮೂಲಕ ಪ್ರಕಟಪಡಿಸಲಾಗಿದೆ. ಇದರಿಂದ ಲೆವಿ ಹೇಗೆ ಮಾಡುತ್ತಾರೆ ಎನ್ನುವುದು ಜನಗಳಿಗೆ ಚೆನ್ನಾಗಿ ತಿಳಿದಿರಬಹುದು. ಈ ಲೆವಿ ಪ್ರಕಾರ ಇಲ್ಲಿಯವರೆಗೆ ಯಾವ್ಯಾವ ಕಡೆಗಳಲ್ಲಿ ಎಷ್ಟೆಷ್ಟು ಕೆಲಸಗಳು ನಡೆದಿವೆ ಎನ್ನುವ ವಿವರಗಳನ್ನು ಇಲ್ಲಿ ಹೇಳುತ್ತೇನೆ. 1964-65 ರಲ್ಲಿ ಎಂದರೆ ಹೋದ ವರ್ಷದಲ್ಲಿ, ಬತ್ತ 1,23,527 ಟನ್ನುಗಳಷ್ಟು ಜೋಳ 29,170 ಟನ್ನುಗಳಷ್ಟು ಅಕ್ಕಿ 11,4928 ಟನ್ನುಗಳಷ್ಟು ವಸೂಲಾಗಿತ್ತು. ಈ ವರ್ಷ ತಾರೀಖು 1-2- 1966ರವರೆಗೆ ಲೆವಿಯ ಮೂಲಕ ವಸೂಲಾಗಿರುವುದು, ಬತ್ತ 55,805 ಟನ್ನುಗಳಷ್ಟು ಜೋಳ 11,877 ಟನ್ನುಗಳಷ್ಟು ಅದರಲ್ಲಿ ಮುಂಗಾರಿ ಜೋಳ ನಮ್ಮ ಬೆಳಗಾಂ ಭಾಗದಿಂದ ಸುಮಾರು 1,20,000 ಟನ್ನುಗಳಷ್ಟು ಇಲ್ಲಿಯವರೆಗೆ ವಸೂಲಾಗಿರುವುದು ಲೆವಿಯ ಮೂಲಕದಿಂದ ನಮಗೆ ಇನ್ನೂ ಎರೆಡು ತಿಂಗಳಷ್ಟು ಕಾಲಾವಕಾಶ ಉಳಿದಿರುವುದರಿಂದ ನಾವು ಏನು ಗುರಿ ಮುಟ್ಟಬೇಕೆಂದು ಮಾಡಿಕೊಂಡಿದ್ದೇವೋ ಅದರಂತೆ ಇನ್ನು ವಸೂಲಿ ಮಾಡಲು ಸಾಧ್ಯವಿದೆ. ಅಲ್ಲದೆ ಯಾವ ಕಡೆಯಿಂದಲೂ ನಾವು ಲೆವಿ ಪದ್ಧತಿಯನ್ನು ಜಾರಿಗೆ ತಂದಿರುವುದರಿಂದ ಯಾರಿಗೂ ತೊಂದರೆಯಾಗಿಲ್ಲ. ಹಳ್ಳಿಗಳಲ್ಲಿರುವ ಜನರು ಆಯಾ ಪಂಚಾಯಿತಿ ಅಧ್ಯಕ್ಷರುಗಳ ಬಳಿಗೆ ದವಸವನ್ನು ತರಬೇಕು. ಅಲ್ಲಿ ಯಾರು ನಮ್ಮ ಕಡೆ ಏಜೆಂಟರು ಎಂದು ನೇಮಕ ಮಾಡಿದ್ದೇವೋ ಅವರಿಗೆ ಅಲ್ಲೇ ಕೊಟ್ಟು ಅದರ ಬಾಬತ್ತಿನ ಹಣ ಕೂಡಲೇ ಕೊಡುವಂತೆ ಅದರಿಂದ ರಸೀದಿ ಬರಿಸಿಕೊಂಡು ಕೊಡುವ ಏರ್ಪಾಡು ಮಾಡಲಾಗಿದೆ. ಇದರಿಂದ ಯಾರಿಗೂ ಯಾವ ತರಹದ ತೊಂದರೆಗಳೂ ಆಗಬಾರದೆಂದು ಹೀಗೆ ಮಾಡಲಾಗಿದೆ. ಹಾಗೂ ಯಾವುದಾದರೂ ತಕರಾರುಗಳು ಬಂದರೆ ಅದನ್ನು ಅಲ್ಲೇ ಇರುವ ಪಂಚಾಯಿತಿ ಚೇರ್ಮನ್ನರು, ಹಾಗೂ ಸರ್ವಿಸ್ ಕೋ-ಆಪರೇಟೀವ್ಸ್‌ನ ಅಧಿಕಾರಿಗಳು ಮತ್ತು ಆ ಊರಿನಲ್ಲಿರುವ ಕೆಲವು ಗಣ್ಯ ವ್ಯಕ್ತಿಗಳ ಸಹಾಯವನ್ನು ಪಡೆದುಕೊಂಡು ಆ ಗಣ್ಯ ವ್ಯಕ್ತಿಗಳು ಯಾವ ರೀತಿಯಾದ ನಿರ್ಣಯ ಕೊಡುತ್ತಾರೋ ಅದನ್ನೇ ಸರಕಾರದವರೂ ಒಪ್ಪಬೇಕೆಂದು ಮಾಡಲಾಗಿದೆ. ಇದರಿಂದ ಇಲ್ಲಿಯವರೆಗೆ ಯಾವ ತರಹದ ತೊಡಕು ನಾವು ಲೆವಿ ಮೂಲಕ ವಸೂಲು ಮಾಡುವುದರಲ್ಲಿ ಕಂಡು ಬಂದಿಲ್ಲ ನಮಗೆ ಈಗ ವಸೂಲಾಗುತ್ತಿರುವ ದವಸಗಳು

ಸಾಲದೇ ಹೋದರೆ ನಾವು ಹೊರಗಿನಿಂದಲೂ ತರಿಸಬೇಕಾಗುತ್ತದೆ. ಕೆಲವು ಪ್ರಾಂತ್ಯದವರ ಮೂಲಕ ತರಿಸಲು ಕೇಂದ್ರ ಸರಕಾರದವರ ಸಹಾಯ ಪಡೆದು ಒದಗಿಸಿಕೊಳ್ಳಬೇಕಾಗಿ ಬರುತ್ತದೆ. ಅಲ್ಲದೆ ಕೇಂದ್ರ ಸರಕಾರದವರು ಸಾಕಷ್ಟು ಪ್ರಯತ್ನಪಟ್ಟು ಗೋಧಿಯನ್ನು ತರಿಸಿಕೊಡಲು ಸಹಾಯ ಮಾಡಿದ್ದಾರೆ. ಅದರಿಂದಾಗಿ ನಾರು ಈಗ ಗೋಧಿಯನ್ನು ಹೆಚ್ಚಾಗಿ ಕೊಡಲು ಅವಕಾಶವಾಗಿದೆ. ಈ ವರ್ಷದೊಳಗೆ ಮೊದಲಿಗೆ ನಮಗೆ 43,000 ಟನ್ನುಗಳಷ್ಟು ಗೋಧಿಯನ್ನು ಕೊಟ್ಟಿದ್ದಾರೆ, ಇನ್ನೂ 7,000 ಟನ್ನುಗಳಷ್ಟು ಗೋಧಿಯನ್ನು ಪುನಃ ಕೊಟ್ಟಿದ್ದಾರೆ. ಹೀಗೆ ನಾವು ಗೋಧಿಯನ್ನು ಪಡೆದ ನಂತರದಲ್ಲಿ ನಮಗೆ ಎಲ್ಲೆಲ್ಲಿ ಅಭಾವ ಪ್ರದೇಶಗಳು ಮಳೆಯಾಗದೆ ಇದ್ದ ಭಾಗಗಳಲ್ಲಿ ಗೋಧಿಯನ್ನು ಕೊಡಬೇಕೆಂದು ಮಾಡಲಾಗಿದೆ, ಮತ್ತೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಕೆಲಸಗಾರರು ಹೆಚ್ಚಾಗಿ ಕೆಲಸ ಮಾಡುತ್ತಾರೆ, ಅವರಿಗೆಲ್ಲಾ ನಾವು ಆಹಾರಧಾನ್ಯವನ್ನು ಒದಗಿಸಿಕೊಡಬೇಕಾಗುತ್ತದೆ. ಅದರಿಂದ ನಾವು ಈಗ ಮೊದಲಾಗಿ ಬೆಂಗಳೂರು ಹಾಗೂ ಕೆ.ಜಿ.ಎಫ್‌ನಲ್ಲಿ ಇನ್‌ಫಾರ್ಮಲ್ ರೇಷನಿಂಗು ಇರುವುದನ್ನು ತೆಗೆದುಹಾಕಬೇಕೆಂದು ಇದೆ. 1-12-65 ರಿಂದ ಮಂಗಳೂರಿನಲ್ಲಿ ಇನ್‌ಫಾರ್ಮಲ್ ರೇಷನಿಂಗ್ ಜಾರಿಗೆ ತರಲಾಗಿರುವುದನ್ನು ಈಗ ನಿಲ್ಲಿಸಲಾಗಿದೆ. ಹಾಗೆ ಈಗ ಮೈಸೂರಿನಲ್ಲಿ ಇನ್‌ಫಾರ್ಮಲ್ ರೇಷನಿಂಗ್ ಎಂದು ಇರುವುದನ್ನು 1-1-1966 ರಿಂದ ನಿಲ್ಲಿಸಿದ್ದೇವೆ ಹೀಗೆ ಮಾಡಿರುವುದರಿಂದ ಎಲ್ಲ ಕಡೆಗೂ ತೊಂದರೆಯಾಗಬಹುದು ಎಂದು ತಿಳಿದುಕೊಂಡು ಈಗ ಕೊಡುವ ಆಹಾರಧಾನ್ಯದ ಜೊತೆಗೆ ಪುನಃ ತಲೆಯೊಂದಕ್ಕೆ ಮೂರು ಕೆ.ಜಿ.ಯಷ್ಟು ಗೋಧಿಯನ್ನು ವಯಸ್ಕರಿಗೆ ಕೊಡಬೇಕೆಂದು ನಿರ್ಣಯ ಮಾಡಿದ್ದಾಗಿದೆ. ಇದರ ಪ್ರಕಾರ ಮೊದಲು ಮೂರು ಕೆ.ಜಿ. ಯಷ್ಟು ಗೋಧಿಯನ್ನು ಪ್ರತಿಯೊಬ್ಬ ಪಾಂಟೇಷನ್ನು ಲೇಬರರುಗಳಿಗಾಗಿ ದೊಡ್ಡ ದೊಡ್ಡ ಕೈಗಾರಿಕೆಗಳಲ್ಲಿ ಕೆಲಸ ಮಾಡುವವರಿಗಾಗಿ ಹೆಚ್ಚಾಗಿ ಎಲ್ಲಿ ಕೆಲಸಗಾರರು ಇದ್ದಾರೋ ಅಲ್ಲಿ ಕೊಡಬೇಕೆಂದು ಮಾಡಿದೆ. ಅಲ್ಲದೆ ಮೈಸೂರು, ಮಂಗಳೂರು, ಹುಬ್ಬಳ್ಳಿ, ಧಾರವಾಡ, ಬೆಳಗಾಂ ಈ ಪಟ್ಟಣಗಳಲ್ಲಿ 1-2-1966 ರಿಂದ ಮೂರು ಕೆ.ಜಿ. ಗೋಧಿ ಕೊಡತಕ್ಕದ್ದು ಎಂದು, ಅದೇ ರೀತಿಯಾಗಿ 1-3-1966 ರಿಂದ ದಾವಣಗೆರೆ, ಹರಿಹರ, ಧಾಂಡೇಲಿ, ಗುಲ್ಬರ್ಗಾ, ಬೆಳಗಾಂ, ಭದ್ರಾವತಿ, ಶರಾವತಿ ಈ ಭಾಗಗಳಲ್ಲಿಯೂ ಗೋಧಿ ಕೊಡಬೇಕೆಂದು ಮಾಡಲಾಗಿದೆ. ಅನಂತರ 1-4-66 ರಿಂದ ನಿಪ್ಪಾಣಿ , ಬಿಡಾಪುರ, ಹೊಸಪೇಟೆ, ಬಾಗಲ್‌ಕೋಟೆ, ಹಡಗಲಿ, ಬೀದರ್, ಹುಮ್ನಬಾದ್ ಹಾಗೂ ಗದಗ್ ಇವೆಲ್ಲಾ ಕಡೆಗಳಲ್ಲಿಯೂ ಗೋಧಿಯನ್ನು ಕೊಡಬೇಕೆಂದು ಇದೆ. 1-4-66 ರಲ್ಲಿ ನಮಗೆ ಗೋಧಿ ಸಾಕಷ್ಟು ಬಾರದೇ ಹೋದರೆ 1-3-66 ರಿಂದಲೇ ಕಡಿಮೆ ಮಾಡಲೂ ಅವಕಾಶವಿದೆ ಆದುದರಿಂದ ಸರಕಾರ ಬಹಳ ಎಚ್ಚರಿಕೆಯಿಂದ ಇದನ್ನು ಹಂಚುವಾಗ ಸರಿಯಾಗಿ ನೋಡಿ ಮಾಡಬೇಕೆನ್ನುವ ನಿರ್ಬಂಧವೂ ಇದೆ. ಈಗ ಎಲ್ಲ ಕಡೆಗಳಲ್ಲಿಯೂ ಗೋಧಿ ಕೊಡಬೇಕೆಂದು ಗೊತ್ತು ಮಾಡಿದ್ದೇವೆ. ಬೆಲ್ಟ್ ಏರಿಯಾದಲ್ಲಿಯೂ ಇರುವ ಜನಕ್ಕಾಗಿ ಅದರ ಪ್ರಮಾಣವನ್ನು ಪ್ರತಿಯೊಬ್ಬರಿಗೂ ಮೂರು ಕೆ.ಜಿ. ಗೋಧಿ ಕೊಡಬೇಕೆಂದು ಮಾಡಲಾಗಿದೆ ಇನ್ನೂ ಹಾಸ್ಟಲುಗಳಿಗೆ ಹಾಗೂ ಹಾಸ್ಪಿಟಲ್ಸ್‌ಗಳಿಗಾಗಿ ಯಾವ ಪ್ರಮಾಣದಲ್ಲಿ

ಆಹಾರಧಾನ್ಯವನ್ನು ಕೊಡಬೇಕೆಂಬ ಸಮಸ್ಯೆ ಇದೆ ಇದರ ಪ್ರಮಾಣವನ್ನೂ ಗೊತ್ತುಮಾಡಿದ್ದೇವೆ ಇದರಿಂದ ಯಾವ ತರಹದ ತೊಂದರೆಯೂ ಆಗಲಿಕ್ಕಿಲ್ಲ ಎಂದು ನನ್ನ ಭಾವನೆ.

ಎರಡನೇ ಮಾತು, ಸ್ಟಾಟ್ಯುಟರಿ ರೇಷನಿಂಗ್, ಇದರ ಬಗ್ಗೆ ಇಲ್ಲಿ ಒಬ್ಬರು ಸ್ನೇಹಿತರು ಮಾತನಾಡುತ್ತಾ ಸರಕಾರ ಇದನ್ನು ಕಾರ್ಯಗತ ಮಾಡುತ್ತಾರೋ ಇಲ್ಲವೊ ಎನ್ನುವ ಸಂಶಯದಿಂದ ಮಾತನಾಡಿದರು, ನಾನು ಅವರ ಬಗ್ಗೆ ಇಲ್ಲಿ ಏನನ್ನೂ ಹೇಳಲಿಕ್ಕೆ ಇಷ್ಟ ಪಡುವುದಿಲ್ಲ. ಮೈಸೂರು ಸರಕಾರದ ಬಗ್ಗೆ ಹೇಳಬೇಕಾದರೆ ನಾವು ಎಲ್ಲ ಸಿದ್ಧತೆಗಳನ್ನು ಕೂಡ ಮಾಡಿ ಮುಗಿಸಿದ್ದೇವೆ ಮತ್ತು ಇದನ್ನು ಜಾರಿಗೆ ತರುವ ಸ್ಥಿತಿಯಲ್ಲಿದ್ದೇವೆ ರೇಷನ್ನಿಂಗ್‌ನ್ನು ಯಾವಾಗ ತರಬೇಕು ಎಂದರೆ ಆಗ ತರಲಿಕ್ಕೆ ಸಾಧ್ಯವಿದೆ. ಇದರಲ್ಲಿ ಸ್ವಲ್ಪ ತೊಡಕಾಗಿರುವುದು ನಾವು ಕೇಂದ್ರ ಸರಕಾರದವರೊಡನೆ ಪತ್ರವ್ಯವಹಾರ ನಡೆಸುತ್ತಿರುವುದರಿಂದ ಇದರ ಕಡೆಗೆ ಒಂದು ರೀತಿಯಾದ ಅನಿಶ್ಚಿತತೆಯಲ್ಲಿದೆ. ನಾವು ರೇಷನಿಂಗ್‌ನ್ನು ಜಾರಿಗೆ ತರುವುದಕ್ಕೆ ಮೊದಲು ನಾವು ಮೊದಲಿಗೆ ಮೂರು ತಿಂಗಳ ದಾಸ್ತಾನನ್ನಾದರೂ ಸಿದ್ಧಪಡಿಸಿಟ್ಟು ಕೊಂಡಿರಬೇಕು, ಹಾಗೆ ಮಾಡದೇ ಹೋದರೆ ಮೊದಲು ಜಾರಿಗೆ ತಂದು ಆಮೇಲೆ ನಿಲ್ಲಿಸಬೇಕೆಂದರೆ ಇಲ್ಲದ ಕಷ್ಟಗಳಿಗೆ ಗುರಿಯಾಗಬೇಕಾಗುತ್ತದೆ. ಅದಕ್ಕಾಗಿ ಕೇಂದ್ರದವರನ್ನು ಮೂರು ನಾಲ್ಕು ತಿಂಗಳಿಗಾಗುವಷ್ಟು ದವಸವನ್ನು ಸಹಾಯ ಮಾಡಬೇಕೆಂದು ಕೇಳಲಾಗಿದೆ, ಅವರೂ ಕೂಡ ಒಪ್ಪಿ ಕೊಡಬಹುದು ಎಂದು ಕಾಣುತ್ತೆ. ಅವರಿಂದ ದಾಸ್ತಾನು ಬಂದ ಕೂಡಲೇ ನಾವು ಮೂರು ನಾಲ್ಕು ದಿನಗಳಲ್ಲೇ ಅದಕ್ಕೆ ಬೇಕಾಗುವ ಸಿದ್ಧತೆಗಳನ್ನು ಮಾಡಿ ಸ್ಟಾಟ್ಯುಟರಿ ರೇಷನ್ನಿಂಗ್‌ನ್ನು ಜಾರಿಗೆ ತರುವುದಕ್ಕೆ ಯಾವ ತೊಂದರೆಯೂ ಇಲ್ಲ. ಮೊದಲಿಗೆ ಬೆಂಗಳೂರು ಸಿಟಿ ಹಾಗೂ ಕೆ.ಜಿ.ಎಫ್. ನಲ್ಲಿ ತಂದು ಅನಂತರದಲ್ಲಿ ಮೈಸೂರು ಮಂಗಳೂರು ಹುಬ್ಬಳ್ಳಿ ಇಲ್ಲಿ ತರಲು ಪ್ರಾರಂಭ ಮಾಡುತ್ತೇವೆ. ಇದೇ ರೀತಿ ಇನ್ನಿತರ ಭಾಗಗಳಲ್ಲಿ ಎಂದರೆ, ಒಂದು ಲಕ್ಷ ಜನಸಂಖ್ಯೆ ಇರುವ ಪಟ್ಟಣಗಳಲ್ಲಿ ಸ್ಟಾಟ್ಯುಟರಿ ರೇಷನಿಂಗ್‌ನ್ನು ತರಬೇಕೆಂದು ಸರಕಾರದ ನೀತಿ ಇದೆ. ಕೇಂದ್ರ ಸರಕಾರದ ನಿರ್ಣಯವೂ ಇದೇ ಪ್ರಕಾರ ಇದೆ. ಅದರ ಉತ್ತರವೂ ಬರುವುದರಲ್ಲಿದೆ, ಅದು ಬಂದ ಮೇಲೆ ನಾವು ಎಲ್ಲ ಕಡೆಗೂ ರೇಷನ್ನಿಂಗನ್ನು ಜಾರಿಗೆ ತರುತ್ತೇವೆ. ಇದೂ ಅಲ್ಲದೆ ನಮ್ಮ ಸರ್ಕಾರದವರು ಮನಾಪಲಿ ಪ್ರೊಕ್ಯೂರುಮೆಂಟನ್ನು ಈ ವರ್ಷ ಎಂದರೆ ಒಂದನೇ ತಾರೀಖು ಸೆಪ್ಟೆಂಬರ್ 1966 ರಿಂದ ಜಾರಿಗೆ ತರುವ ಉದ್ದೇಶವಿದೆ. ಎಂದು ಹಿಂದೆ ಇದೇ ಸಭೆಯಲ್ಲಿ ಪ್ರಶ್ನೆಗೆ ಉತ್ತರವಾಗಿ ತಿಳಿಸಿದ್ದೇನೆ. ಇದರ ಬಗ್ಗೆ ಜನರು ಆಗಲೇ ವಿಚಾರ ಮಾಡುತ್ತಿದ್ದಾರೆ. ಅವರೂ ವಿಚಾರ ಮಾಡಲಿ ವರ್ತಕರುಗಳೂ ವಿಚಾರ ಮಾಡಲಿ, ಎಲ್ಲರೂ ಅದರ ಬಗ್ಗೆ ವಿಚಾರ ಮಾಡಲಿ, ರೈತರೂ ಕೂಡ ವಿಚಾರ ಮಾಡಲಿ ಎಂದು ಈಗಲೇ ಸರಕಾರದವರು ಇದಕ್ಕೆ ಏನೇನು ಸಿದ್ಧತೆಗಳನ್ನು ಮಾಡಬೇಕೋ ಅದನ್ನೆಲ್ಲಾ ಮಾಡಿಕೊಳ್ಳಬೇಕು. ಮನಾಪಲಿ ಪ್ರೊಕ್ಯೂರ್‌ಮೆಂಟು ಹಾಗೂ ಸ್ಟೇಟು ಟ್ರೇಡಿಂಗ್ ಮಾಡಬೇಕಾದರೆ ಅದಕ್ಕೆ ಬೇಕಾಗುವ ಅಧಿಕಾರಿಗಳನ್ನು ನೇಮಕ ಮಾಡಬೇಕಾಗುತ್ತದೆ. ಪ್ರತಿಯೊಬ್ಬ ರೈತನ ಕುಟುಂಬದಲ್ಲಿಯೂ ಎಷ್ಟು ಜನರಿರುತ್ತಾರೆ ಅವರಿಗೆಲ್ಲಾ ವರ್ಷಕ್ಕೆ

ಎಷ್ಟು ಆಹಾರಧಾನ್ಯಗಳು ಬೇಕಾಗುತ್ತದೆ. ಎನ್ನುವುದನ್ನೆಲ್ಲಾ ತಿಳಿದುಕೊಂಡು ಅವರಿಗೆ ಬೇಕಾಗುವಷ್ಟನ್ನು ಕೊಟ್ಟು ಸರ್‌ಪ್ಲಸ್ ಆಗಿರುವ ದವಸವನ್ನು ಮಾತ್ರ ಅವರಿಂದ ಕೊಂಡುಕೊಳ್ಳಬೇಕಾಗುತ್ತದೆ. ಇದನ್ನೆಲ್ಲಾ ಮಾಡಲು ಬೇಕಾಗುವ ಅಂಕೆ ಸಂಖ್ಯೆಗಳನ್ನು ಪಡೆಯಲು ತೊಂದರೆ ಏನಿಲ್ಲ ಅದಕ್ಕೆ ಬೇಕಾದ ಸೆನ್ಸಸ್‌ವಿವರಗಳೆಲ್ಲಾ ನಮಗೆ ಸಿಕ್ಕಿದೆ. ಇದಕ್ಕೆ ಹಣ ಎಷ್ಟು ಬೇಕಾಗುತ್ತದೆ ಎನ್ನುವುದನ್ನೂ ಸರಕಾರ ವಿಚಾರ ಮಾಡಿಕೊಂಡು ಇಷ್ಟು ಹಣ ಒದಗಿಸಬೇಕೆಂದು ನಿರ್ಣಯ ಮಾಡಿದ್ದಾರೆ. ಇದು ಈ ವರ್ಷದ ಫಸಲಿಗಲ್ಲ. ಮುಂದಿನ ವರ್ಷದಲ್ಲಿ ಬರುವ ಫಸಲಿಗೆ ಮಾಡುವುದರ ಸಲುವಾಗಿಯೇ ಈಗಿನಿಂದಲೇ ಸಿದ್ಧತೆಗಳನ್ನು ಮಾಡಬೇಕು ಎಂದು ನಾವು ಸೆಪ್ಟೆಂಬರು ತಿಂಗಳು ಎಂದು ಹೇಳಿರುವುದು ಅದರಂತೆ ನಾವು ಮಾಡಲಿಕ್ಕೆ ಸಾಧ್ಯವಿದೆ ಹಣದ ವ್ಯವಸ್ಥೆ ಮಾಡಲಾಗಿದೆ. ಹಣದ ವ್ಯವಸ್ಥೆಯಾಗದೇ ಇದ್ದರೆ ಮನಾಪಲಿ ಪ್ರೊಕ್ಯೂರುಮೆಂಟು ಮಾಡುವುದಕ್ಕಾಗುವುದಿಲ್ಲ ಇದು ಸತ್ಯಾವಾದ ವಿಚಾರ ಆದುದರಿಂದ ಒಂದನೇ ತಾರೀಖು ಸೆಪ್ಟೆಂಬರ್ 1966 ರಿಂದ ಮನಾಪಲಿ ಪ್ರೊಕ್ಯೂರ್‌ಮೆಂಟು ಮಾಡಬೇಕು ಎನ್ನುವುದು ನಿಶ್ಚಿತವಾದ ವಿಚಾರ ಮತ್ತು ಆ ರೀತಿ ಮಾಡಬೇಕೆಂದು ನಿರ್ಣಯವಿದೆ. ಇನ್ನು ನಮ್ಮ ಮುಂದಿರುವ ಪ್ರಶ್ನೆ ಇದಕ್ಕೆಲ್ಲಾ ಸುಮಾರು ನೂರು ಕೋಟಿಯಷ್ಟು ಹಣ ಬೇಕಾಗುತ್ತದೆ. ಇದಕ್ಕೆ ತಕ್ಕ ಎಸ್ಟಾಬ್ಲಿಷ್‌ಮೆಂಟು ಬೇಕು. ಅದನ್ನೆಲ್ಲಾ ಮಾಡಲು ಯಾವ ತೊಂದರೆಯೂ ಆಗಲಿಲ್ಲ. ಇವನ್ನೆಲ್ಲಾ ಮಾಡಿಕೊಂಡು ಮುಂದಿನ ಸಾಲಿನಲ್ಲಿ ಮನಾಪಲಿ ಪ್ರೊಕ್ಯೂರ್‌ಮೆಂಟು ಹಾಗೂ ಸ್ಟೇಟು ಟ್ರೇಡಿಂಗ್‌ನ್ನು ಜಾರಿಗೆ ತರಲು ಯಾವ ಅಭ್ಯಂತರವೂ ಇಲ್ಲ ಎಂದು ನನ್ನ ಭಾವನೆ. ಇನ್ನೊಂದು ಮಾರ್ಗ ಇದೆ. ಅದು ಫ್ರೀ ಟ್ರೇಡಿಂಗ್ ಬಗ್ಗೆ ಇದನ್ನು ಮಾಡಲು ಯಾವ ರೀತಿಯಾಗಿ ಅವಕಾಶ ಕೊಡಬೇಕು ಎನ್ನುವುದರ ಬಗ್ಗೆ ಇನ್ನೂ ಯಾವ ವಿಧವಾದ ನಿರ್ಣಯವೂ ಆಗಿಲ್ಲ. ಇದನ್ನು ಆದಷ್ಟೂ ಸುಧಾರಿಸಿ ತರಬೇಕೆಂದು ಇದೆ, ಆ ರೀತಿ ಸುಧಾರಣೆ ಮಾಡಿ ತರುವುದು ಕಷ್ಟವೇನಿಲ್ಲ. ಒಂದೇ ಒಂದು ಮಾರ್ಗ ಫ್ರೀಟ್ರೇಡ್ ಅನುಕೂಲ ಆಗದಿದ್ದರೆ ಇನ್ನೊಂದು ಮಾರ್ಗ ಮನೋಪಲಿ ಟ್ರೇಡ್. ಆದ್ದರಿಂದ ಮೊನೊಪಲಿ ಟ್ರೇಡಿಂಗ್ ಮನೋಪಲಿ ಪ್ರೊಕ್ಯೂರ್‌ಮೆಂಟು ಮಾಡುವ ನಿರ್ಧಾರ ಮಾಡಿದ್ದೇವೆ. ಇದನ್ನು 1966 ಸಪ್ಟೆಂಬರ್ ಒಂದನೇ ತಾರೀಖಿನಿಂದ ಏರ್ಪಾಡು ಮಾಡುತ್ತೇವೆ. ಇದಲ್ಲದೆ ಹೋಟಲಿನವರಿಗೆ ಅಕ್ಕಿಯ ಇಡ್ಲಿ ದೋಸೆ ಮಾಡಬಾರದು ಎಂದು ಹೇಳಿದಾಗ, ಅವರಿಗೆ ಅಕ್ಕಿಯ ಬದಲು ಇನ್ನೊಂದು ತರದ ತಿಂಡಿಗೆ ಆಹಾರಧಾನ್ಯ ಸಿಗುವುದು ಕಷ್ಟವೆಂದು ಹೇಳಿದರು. ಅವರಿಗೆ ಬೇಕಾದಷ್ಟು ಹೆಚ್ಚಿಗೆ ಗೋಧಿ, ಸೋಜಿ, ಮೈದಾ ಇತ್ಯಾದಿಗಳನ್ನು ಒದಗಿಸುವ ಏರ್ಪಾಡು ಮಾಡುತ್ತೇವೆ. ಹೆಚ್ಚಿಗೆ ಗೋಧಿ ಕೇಂದ್ರ ಸರ್ಕಾರದ ಸಹಾಯದಿಂದ ಸಿಕ್ಕುತ್ತದೆ ದೊಡ್ಡ ದೊಡ್ಡ ಫ್ಲೋರ್‌ಮಿಲ್ಲುಗಳಿಗೆ ಗೋಧಿ ಹೆಚ್ಚಿಗೆ ಕೊಡುತ್ತಾರೆ. ಅವರಿಗೆ ಕೊಡುವ ಕೋಟಾ ಬೇರೆ. ನಮಗೆ ಕೊಡುವ ಕೋಟಾ ಬೇರೆ. ಹೀಗೆ ಕೊಡುವುದರಿಂದ ದನಗಳಿಗೆ ಬೇಕಾಗುವ ಬೂಸಾ ಕೂಡ ಸಿಗುತ್ತದೆ. ನಮ್ಮ ಸ್ಟೇಟಿಗೆ ಇದು ಹೆಚ್ಚಿನ ಪ್ರಮಾಣದಲ್ಲಿ ಬೇಕಾಗುತ್ತದೆ. ಮದ್ರಾಸಿನವರೂ ಇದನ್ನು ಜಾಸ್ತಿ ಉಪಯೋಗಿಸಿದ ಕಾರಣ, ಅದರಲ್ಲಿರುವ ವೀಟ್ ಬ್ರಾಣ ನಾವು ತೆಗೆದುಕೊಳ್ಳುತ್ತೇವೆ. ಇದರಿಂದ ನಮ್ಮಲ್ಲಿದ್ದಂತಹ ದನಗಳ ಆಹಾರದ

ಸಮಸ್ಯೆ ಬಿಡಿಸಲು ಕಾರಣವಾಗುತ್ತದೆ. ಬೆಂಗಳೂರು ನಗರದಲ್ಲಿ ಕ್ರಾಸ್ ಬ್ರೀಡ್ ವಿಶೇಷವಾಗಿರುವುದರಿಂದ ಇವಕ್ಕೆ ಆಹಾರವು ಹೆಚ್ಚು ಹೆಚ್ಚು ಬೇಕಾಗುತ್ತದೆ. ಎ.ಎಲ್. 480ರ ಪ್ರಕಾರವೂ ದನಗಳ ಆಹಾರವನ್ನು ಕೊಡಲು ಒಪ್ಪಿದ್ದಾರೆ. ಅದರಲ್ಲೂ ಹೆಚ್ಚಿಗೆ ಕೊಡಬೇಕೆಂದು ಕೇಂದ್ರ ಸರ್ಕಾರದವರಲ್ಲಿ ಕೇಳಿದ್ದೇವೆ. ಈ ಬಗ್ಗೆ ಬೇಗನೇ ನಮಗೆ ಸಾಕಷ್ಟು ಕೋಟಾ ಸಿಕ್ಕಿದ ನಂತರ ಬೆಂಗಳೂರು ಮತ್ತು ಮೈಸೂರು ಎಲ್ಲಾ ಕಡೆಗಳಲ್ಲೂ ದನಗಳ ಆಹಾರ ದೊರೆಯುತ್ತದೆ ಮತ್ತು ಅದನ್ನು ಎಲ್ಲಾ ಕಡೆಗೂ ಹಂಚಲು ಅನುಕೂಲವಾಗುತ್ತದೆ.

ಮತ್ತೊಂದು ವಿಷಯವೇನೆಂದರೆ, ಇದು ಆದಮೇಲೆ ಈ ಮನೆಯಲ್ಲಿ ಹೆಚ್ಚಿಗೆ ಯಾರೂ ಉಳಿದ ಪ್ರಶ್ನೆಗಳನ್ನು ಎತ್ತಿಲ್ಲ. ಕೆಲವು ಸಣ್ಣ ಸಣ್ಣ ಮಾತುಗಳನ್ನು ಹೇಳಿದ್ದಾರೆ. ಅದು ಏನೆಂದರೆ ಮಂಗಳೂರಿನ ಬಗ್ಗೆ ಒಂದು ಸಮಸ್ಯೆ ಇದೆ. ಅಲ್ಲಿ ಈಗ ತೆಗೆದು ಕೊಂಡಂತಹ ಬತ್ತವನ್ನು, ತಕ್ಷಣ ಕುದಿಸಿ, ಒಣಗಿಸಿ, ಅಕ್ಕಿ ಮಾಡಿ, ನಂತರ ಅಲ್ಲಿಯೇ ಇಡಿ ಎಂದು ಹೇಳುತ್ತಾರೆ. ಹಾಗೆ ಅದನ್ನು ಇಡಲಿಕ್ಕೆ ತೊಂದರೆ ಇಲ್ಲ. ಆದರೆ ಒಂದು ಭಾವನೆ ಸರ್ಕಾರಕ್ಕೆ ಇದೆ. ಎಲ್ಲಾ ಬತ್ತವನ್ನು ಕುದಿಸಿ ಕುದುಪಲು ಅಕ್ಕಿ ಮಾಡಿದ ಮೇಲೆ ಅದನ್ನು ಮಂಗಳೂರು ಪಟ್ಟಣ ಬಿಟ್ಟು ಹೊರಗಡೆ ತೆಗೆದುಕೊಂಡು ಹೋದರೆ ಯಾರೂ ಅದನ್ನು ಉಪಯೋಗ ಮಾಡುವುದಿಲ್ಲ. ಮತ್ತು ಅದು ಮಾರಾಟವಾಗುತ್ತಾ ಇಲ್ಲ.

ಶ್ರೀಮತಿ ಎಂ.ಆರ್. ಲಕ್ಷ್ಮಮ್ಮ (ಪದವೀಧರರ ಕ್ಷೇತ್ರ):- ಬೆಂಗಳೂರಿನವರೂ ಅದನ್ನು ಸ್ವಲ್ಪ ಸ್ವಲ್ಪ ತಿನ್ನುತ್ತಾ ಇದ್ದಾರೆ.

ಶ್ರೀ ಕೆ. ಕಾಂತಪ್ಪಶೆಟ್ಟಿ:- ಅಲ್ಲಿಗೆ ಹೊರಗಡೆಯಿಂದ ಬರಬೇಕಾಗಿರುವುದರಿಂದ ಅಲ್ಲಿಂದ ಹೊರಗಡೆ ಕಳಿಸುವುದು ಯಾತಕ್ಕೆ?

ಶ್ರೀ ಬಿ.ಡಿ. ಜತ್ತಿ:- ಈ ವಿಷಯದ ಬಗ್ಗೆ ವಾದ ಮಾಡುವುದು ಬಿಟ್ಟು ಒಂದು ವಿಚಾರ ಮಾಡಿದ್ದೇವೆ. ಇದುವರೆಗೂ ನಾವು ಏನು ಬತ್ತ ಶೇಖರಣೆ ಮಾಡಿದ್ದೇವೆಯೋ ಅದರೊಳಗೆ ಸುಮಾರು ಅರ್ಧದಷ್ಟು ಅವರು ಹೇಳಿದಂತೆ ಮಾಡಿ ಉಳಿದ ಬತ್ತವನ್ನು ಯಾವಾಗ ಬೇಕಾದರೂ ಉಪಯೋಗ ಮಾಡಬಹುದು. ಬೇರೆ ಕಡೆಯಿಂದ ಕೂಡಾ ತರಬಹುದು. ಎನ್ನುವ ಒಂದು ವ್ಯವಸ್ಥೆ ಮಾಡಿದ್ದೇವೆ. ಇದರ ಒಂದು ಉದ್ದೇಶವೇನೆಂದರೆ ಯಾವ ಯಾವ ಜಿಲ್ಲೆಯೊಳಗೆ ಬೆಳೆದಿದ್ದಾರೆಯೋ ಅದನ್ನು ತೆಗೆದುಕೊಂಡು ಮತ್ತೊಂದು ಜಿಲ್ಲೆಗೆ ತಂದು ತೊಂದರೆಪಡಿಸುವ ಉದ್ದೇಶವಲ್ಲ. ಪ್ರಸಂಗ ಬಂದರೆ, ಸಾಧ್ಯವಾದಷ್ಟು ಅಲ್ಲಿಂದ ಬದಲು ಮಾಡಬಹುದೇ ಹೊರತು ಬೇರೆ ಏನೂ ಅಲ್ಲ.

ಶ್ರೀ ಎಂ. ಗೋವರ್ಧನರಾವ್ (ನಾಮನಿರ್ದೇಶನ ಹೊಂದಿದವರು):- ನಮಗೆ ಎಷ್ಟು ಬೇಕೋ ಅದಕ್ಕಿಂತ ಹೆಚ್ಚಿಗೆ ಅಲ್ಲಿ ಉತ್ಪತ್ತಿಯಾಗುತ್ತಿದೆ. ಆದರೆ ವಿತರಣೆಯಲ್ಲಿ ದೋಷವಿದೆ ಎಂದು ಹೇಳುತ್ತಾರೆ, ಅದಕ್ಕೆ ಏನು ಹೇಳುತ್ತೀರಿ?

ಶ್ರೀ ಬಿ.ಡಿ. ಜತ್ತಿ:- ಇನ್ನೊಂದು ಮಾತು ಹೇಳಬೇಕು. ಮಂಗಳೂರಿನಲ್ಲಾಗಲೀ, ಹಳೆಯ ಮೈಸೂರಿನಲ್ಲಾಗಲೀ, ಎಲ್ಲಾ ಕಡೆಗಳಲ್ಲಿಯೂ ಜಾಸ್ತಿ ಜನರು ಅಕ್ಕಿಯನ್ನೇ ಉಪಯೋಗಿಸುವುದರಿಂದ ಅಕ್ಕಿಯ ಅಭಾವ ಬಂದಿದೆ. ಈಗ ಎಷ್ಟು ಬೇಕೋ ಅಷ್ಟು ಸಿಗುತ್ತಾ ಇಲ್ಲ. ಆದ್ದರಿಂದ ನಾನು ಎಲ್ಲರಲ್ಲೂ ವಿನಂತಿ ಮಾಡಿಕೊಳ್ಳುವುದೇನೆಂದರೆ, ಯಾರ್‍ಯಾರು ಕೇವಲ ಅಕ್ಕಿಯನ್ನೇ ಜಾಸ್ತಿ ಉಪಯೋಗ ಮಾಡುತ್ತಾರೋ, ಅಂಥವರು ಸ್ವಲ್ಪ ಬದಲಾವಣೆ ಮಾಡಿ, ಗೋಧಿ ಅಥವಾ ಜೋಳವನ್ನು ಆಹಾರವಾಗಿ ಉಪಯೋಗಿಸುವುದಕ್ಕೆ ಪ್ರಯತ್ನ ಮಾಡಬೇಕು. ಚಪಾತಿಯಾಗಲೀ ಪೂರಿಯಾಗಲೀ, ಅಥವಾ ಜೋಳದ ಮುದ್ದೆಯನ್ನು ತಿನ್ನುವುದಕ್ಕೆ ಪ್ರಾರಂಭ ಮಾಡಿದರೆ ಈ ವರ್ಷದ ತೊಂದರೆ ಏನಿದೆ ಅದರಿಂದ ಪಾರಾಗುವುದರಲ್ಲಿ ಏನು ಹೆದರಿಕೆಯೂ ನಮಗೆ ಕಾಣುವುದಿಲ್ಲ. ಅಷ್ಟು ಮಾತ್ರ ಅವರು ಮಾಡಬೇಕು. ಜೋಳ, ಗೋಧಿ ಹೆಚ್ಚಿಗೆ ಊಟ ಮಾಡುವುದಕ್ಕೆ ಪ್ರಾರಂಭ ಮಾಡಿದರೆ ಈ ಅಕ್ಕಿಯ ಅಭಾವ ಕಡಿಮೆಯಾಗುತ್ತದೆ.

ಶ್ರೀ ಎಂ. ಗೋವರ್ಧನರಾವ್:- ಶ್ರೀಮಾನ್ ಶಾಸ್ತ್ರಿಯವರು ಅಂಕಿ ಅಂಶಗಳನ್ನು ಇಲ್ಲಿ ಹೇಳಿ, ಭಾರತ ದೇಶದಲ್ಲಿ ರಿಸರ್ವ್ ಬ್ಯಾಂಕ್ ಫಿಗರ್ಸ್ ಆಲ್ ಇಂಡಿಯಾ ಕೌನ್ಸಿಲ್ ಆಫ್ ಅಗ್ರಿಕಲ್ಚರ್, ಅದರ ಪ್ರಕಾರ ಬೇಕಾದಷ್ಟು ಆಹಾರಧಾನ್ಯ ನಮ್ಮಲ್ಲಿ ಬೆಳೆಯುತ್ತದೆ. ಎಷ್ಟು ಅವಶ್ಯ ಇದೆಯೋ, ಅದಕ್ಕಿಂತ ಹೆಚ್ಚು ಬೆಳೆಯುತ್ತಿದ್ದೇವೆ. ಆದರೆ ವಿತರಣೆಯಲ್ಲಿ ಮಾತ್ರ ದೋಷ ಹೊರತು ಮತ್ತೇನೂ ಇಲ್ಲ ಎಂದು ಹೇಳಿದರು. ಹಾಗಾದರೆ ಅಷ್ಟೊಂದು ಪ್ರೊಕ್ಯೂರ್‌ಮೆಂಟ್ ಏತಕ್ಕೆ?

ಶ್ರೀ ಬಿ.ಡಿ. ಜತ್ತಿ:- ಒಟ್ಟು ನಾವು ಆಹಾರದ ಬಗ್ಗೆ ದೇಶ ಒಂದು ಎಂದು ವಿಚಾರ ಮಾಡಿದರೆ ಸಮಸ್ಯೆ ಬಿಡಿಸುವುದಕ್ಕೆ ಆಗುತ್ತದೆ, ಇಲ್ಲದಿದ್ದರೆ ಆಗುವುದಿಲ್ಲ. ಒಂದೊಂದು ಸ್ಟೇಟಿಗೆ ಒಂದೊಂದು ಜೋನು ಮಾಡುವುದರಿಂದ ನಮ್ಮ ಸಮಸ್ಯೆಯನ್ನು ಬಿಡಿಸುವುದಕ್ಕಾಗುವುದಿಲ್ಲ. ಎಲ್ಲಾ ಸಂಸ್ಥಾನಗಳ ಪ್ರತಿನಿಧಿಗಳು ಸೇರಿ ಕೇಂದ್ರ ನಿರ್ಣಯ ಮಾಡದ ಹೊರತು ಏನೂ ಆಗುವುದಿಲ್ಲ. ಇಡೀ ದೇಶದಲ್ಲೇ ಆಹಾರದ ಜೋನು ಮಾಡಲಿಕ್ಕೆ ಒಪ್ಪದೆ ಇದ್ದರೆ ಕೊನೆಯ ಪಕ್ಷ ದಕ್ಷಿಣ ವಲಯಕ್ಕಾದರೂ ಒಪ್ಪುವಂತಾದರೆ ಆಗ ಪರಿಸ್ಥಿತಿ ಚೆನ್ನಾಗಿ ಆಗುತ್ತದೆಂದು ತಿಳಿದು ಇದನ್ನು ಎಲ್ಲರ ಮುಂದೆ ಇಟ್ಟಿದ್ದೇನೆ. ಮುಂದಿನ ತಿಂಗಳು 8-10 ದಿನಗಳೊಳಗಾಗಿ ದೆಹಲಿಗೆ ಹೋದಾಗ ಮುಖ್ಯ ಮಂತ್ರಿಗಳು ಆಹಾರ ಮಂತ್ರಿಗಳು ಎಲ್ಲಾ ಸೇರಿ ಈ ಮಾತು ಎತ್ತಬೇಕು. ಸಾಧ್ಯವಾದಷ್ಟು ಒತ್ತಾಯ ಪಡಿಸಿದರೆ ಉಳಿದವರು ಒಪ್ಪಲು ಅನುಕೂಲವಾಗುತ್ತದೆ. ಯಾವ ರಾಜ್ಯದಲ್ಲಿ ಹೆಚ್ಚಿಗೆ ಉತ್ಪತ್ತಿಯಾಗುತ್ತಿದೆಯೋ ಆ ಸಂಸ್ಥಾನದವರು ಒಪ್ಪದಿರುವುದು ಸ್ವಾಭಾವಿಕ. ಇದನ್ನು ಸರಿಪಡಿಸಬೇಕು. ಒಂದು ವೇಳೆ ಅವರು ಒಪ್ಪದೆ ಹೋದರೂ ಕೂಡಾ ನಮ್ಮ ಏರ್ಪಾಡು ನಾವು ಮಾಡಬೇಕು.

ಈಗ ವಿತರಣೆ ಪ್ರಶ್ನೆ ಕಠಿಣವಾಗಿದೆ. ಅದು ಅಷ್ಟು ಹಗುರವಾಗಿಲ್ಲ. ಎಷ್ಟು ಒಳ್ಳೆಯ ರೀತಿಯಿಂದ ವಿತರಣೆ ಮಾಡುವುದು ಸಾಧ್ಯ ಅದನ್ನು ಮಾಡುವುದಕ್ಕೆ ಇಲಾಖೆಯವರು ಪ್ರಯತ್ನ ಮಾಡಿದ್ದಾರೆ. ನೂರಕ್ಕೆ ನೂರು ಪಾಲು ಸುಧಾರಣೆಯಾಗಿದೆ ಎಂದು ಹೇಳುವುದಕ್ಕೆ ಆಗುವುದಿಲ್ಲ. ಎಷ್ಟು ಸುಧಾರಣೆಯಾಗುತ್ತದೆಯೋ ಅಷ್ಟು ಮಾಡಿದ್ದಾರೆ. ಆದರೆ ವಿಷಯ ನಾನೇನೂ ಹೆಚ್ಚಿಗೆ ಹೇಳಲಿಕ್ಕೆ ಹೋಗುವುದಿಲ್ಲ. ಬೆಂಗಳೂರು ವಿಷಯ ಹೇಳುವುದಾದರೆ ಇಲ್ಲಿ ಜನಸಂಖ್ಯೆ ಸುಮಾರು 17 ಲಕ್ಷ 95 ಸಾವಿರ ಆಗಬಹುದು. ಅವರಿಗೆ ಪೂರೈಕೆ ಮಾಡುವುದು ಅಷ್ಟು ಹಗುರವಾದ ಕೆಲಸವಲ್ಲ. ಒಟ್ಟಿಗೆ ಕ್ಲಿಯರಿಂಗ್ ಪಾಯಿಂಟ್ ಎಷ್ಟು ಬೇಕು, ಹೋಲ್‌ಸೇಲ್ ಪಾಯಿಂಟ್ ಎಷ್ಟು ಬೇಕು, ರಿಟೈಲ್ ಪಾಯಿಂಟ್ ಎಷ್ಟು ಬೇಕು ಎಂಬುದನ್ನು ಲೆಕ್ಕ ಹಾಕಿ ಲೆಕ್ಕ ವಿಚಾರ ಮಾಡಿ, ಸರ್ವರಿಗೂ ಅನುಕೂಲವಾಗುವ ಒಂದು ದೃಷ್ಟಿಯನ್ನು ಇಟ್ಟುಕೊಂಡು ಏರ್ಪಾಡು ಮಾಡಿದ್ದೇವೆ. ಈಗ ಒಂದು ಚಿಲ್ಲರೆ ಅಂಗಡಿಯವನು ಆಹಾರಧಾನ್ಯ ವಿತರಣೆ ಮಾಡಬೇಕಾದರೆ ಒಂದು ನಿಯಮ ಇಟ್ಟಿದ್ದೇವೆ. ಒಬ್ಬ ಅಂಗಡಿಯವನಿಗೆ 30ಕ್ಕಿಂತ ಕಡಿಮೆ ಕಾರ್ಡು ಇರಕೂಡದು ಎಂದು ಮಾಡಿದ್ದೇವೆ. 100-150 ಕಾರ್ಡುಗಳಿದ್ದರೆ ಅವನ ಅಂಗಡಿ ನಡೆಯಲು ಕಷ್ಟವಾಗುತ್ತದೆ ಅಂಗಡಿ ಖರ್ಚು ಬರುವುದಿಲ್ಲ. ಆಗ ಅವನು ನಾನಾ ತರಹದ ವ್ಯವಸ್ಥೆ ಮಾಡಿಕೊಂಡು ಹೆಚ್ಚು ಹೆಚ್ಚಿನ ಸಂಪಾದನೆ ಮಾಡಲು ಪ್ರಯತ್ನ ಮಾಡುತ್ತಾನೆ. ಆದ್ದರಿಂದ 300ಕ್ಕಿಂತ ಕಡಿಮೆ ಕಾರ್ಡುಗಳು ಇರಕೂಡದು ಎಂದು ನಿರ್ಧಾರ ಮಾಡಿದ್ದೇವೆ. ಇದರಿಂದ ಅಂಗಡಿಯವನಿಗೆ ಅಂಗಡಿಯ ಲೈಟು ಚಾರ್ಜು, ಗುಮಾಸ್ತರ ಖರ್ಚು ಹಾಗೂ ಇನ್ನುಳಿದ ಖರ್ಚು ಇರುವುದರಿಂದ ಒಟ್ಟಿಗೆ ಜೀವನ ನಡೆಸುವುದಕ್ಕೆ ಅನುಕೂಲವಾಗುತ್ತದೆ. ಆದ್ದರಿಂದ 300ಕ್ಕಿಂತ ಕಡಿಮೆ ಮತ್ತು 500ಕ್ಕಿಂತ ಜಾಸ್ತಿ ಇರಕೂಡದು ಎಂದು ಮಾಡಿದ್ದೇವೆ. 500ಕ್ಕಿಂತ ಹೆಚ್ಚಿಗೆ ಆದರೆ ಅದಕ್ಕೆ ಕ್ಯೂ ಜಾಸ್ತಿಯಾಗಿ ಜನರು ಕಾಯಬೇಕಾಗುವ ಸಂದರ್ಭ ಬರುತ್ತದೆ. ಅದನ್ನು ತಪ್ಪಿಸುವುದಕ್ಕೋಸ್ಕರ ಒಂದು ನಿರ್ಧಾರ ಮಾಡಿದ ಅಂಗಡಿಗೆ ತೆಗೆದುಕೊಂಡು ಹೋದ ಧಾನ್ಯಗಳನ್ನು ಇಡಲು ಗೋಡೌನ್ ಇರಬೇಕು. 15 ದಿವಸದ ಆಹಾರವನ್ನು ಕೊಂಡುಕೊಳ್ಳಲು ಅವನಿಗೆ ಬಂಡವಾಳವಿರಬೇಕು. ಇಲ್ಲದೆ ಹೋದರೆ ಬೇರೆ ಕಡೆಯಿಂದ ಹಣ ತಂದು ಲಾಭ ಸಂಪಾದಿಸಲು ನೋಡುತ್ತಾರೆ. ಇದನ್ನು ತಪ್ಪಿಸುವ ಸಲುವಾಗಿ ಈ ರೀತಿ ಮಾಡಿದ್ದೇವೆ.

ಬೆಂಗಳೂರು ಪಟ್ಟಣದಲ್ಲಿ ಅನೇಕ ಫುಡ್ ಇನ್ಸ್‌ಪೆಕ್ಟರರು ಇದ್ದಾರೆ. ಕೆಲವು ಜನರಿಂದ ಅವರ ಬಗ್ಗೆ ಕಂಪ್ಲೇಂಟ್ ಬಂದ ನಂತರ ಅದನ್ನು ಪರಿಶೀಲನೆ ಮಾಡಿ, ಅದು ಸರಿಯೋ ತಪ್ಪೋ ಎಂದು ವಿಚಾರಿಸಿ, ಅವರಿಗೆ ಆಹಾರದ ಇಲಾಖೆ ಕೊಟ್ಟರೆ ತೊಂದರೆಯಾಗುತ್ತದೆ ಎಂಬ ದೃಷ್ಟಿಯಿಂದ ಒಟ್ಟು ಎಂಟು ಜನ ಫುಡ್ ಇನ್ಸ್‌ಪೆಕ್ಟರನ್ನು, ನಾವು ಕರೆದು, ನೀವು ಒಳ್ಳೆಯ ಕೆಲಸ ಮಾಡಿದ್ದೀರಿ. ಇನ್ನು ನಿಮ್ಮ ಇಲಾಖೆಗೆ ಹೋಗಿ ಬರಬಹುದು ಎಂದು ಹೇಳಿ ಕಳಿಸಿಕೊಟ್ಟೆವು. ಅವರು ಹೊರಟು ಹೋದ ನಂತರ ಯಾರಿಗೆ ಕಾರ್ಡು ಸಿಕ್ಕಬೇಕು ಎಂದು ಅವರು ಕಾಗದ ಪತ್ರಗಳನ್ನು ರಚಿಸಿದ್ದಾರೋ, ಅದನ್ನು ಮೂರು ಜನ ಜಾಯಿಂಟ್

ಡೈರೆಕ್ಟರುಗಳು ಮತ್ತು ಡೈರೆಕ್ಟರು ಖುದ್ದು ಪರಿಶೀಲನೆ ಮಾಡಿ ಅದು ಸರಿಯೇ, ಮತ್ತು ಅವರು ಯೋಗ್ಯರೇ, ಪ್ರಾಮಾಣಿಕರೇ ಎಂದು ತಿಳಿದುಕೊಂಡು ಅವರಿಗೆ ಕಾರ್ಡುಗಳನ್ನು ಕೊಡುವುದಕ್ಕೋಸ್ಕರ ಏರ್ಪಾಡು ಮಾಡಿದ್ದೇವೆ. ಇದರಿಂದಾಗಿ ಫೆಬ್ರವರಿ ಒಂದನೇ ತಾರೀಕಿನಿಂದ ಮಾರ್ಚ್ ಒಂದನೇ ತಾರೀಕಿಗೆ ಸ್ಟ್ಯಾಚ್ಯುಟರಿ ರೇಷನಿಂಗನ್ನು ಮುಂದುವರಿಸಲಾಯಿತು. ಯಾರೂ ಏನಾದರೂ ಹೆಚ್ಚು ಕಡಿಮೆ ಮಾಡಿದರೆ ಅದರಿಂದ ಅವರಿಗೆ ಅನುಕೂಲವಾಗುವುದಿಲ್ಲ. ಸರ್ಕಾರ ಸರಿಯಾದ ಕ್ರಮ ತೆಗೆದುಕೊಳ್ಳುತ್ತದೆ ಎನ್ನುವ ಮಾತು ಈಗ ಗೊತ್ತಾಗಿದೆ.

ಆ ರೀತಿ ಆಹಾರ ಧಾನ್ಯ ಎಲ್ಲಾ ಕಡೆಯೂ ಹಂಚಿಕೆ ಮಾಡುತ್ತೇವೆ. ಎಲ್ಲಕ್ಕಿಂತಲೂ ಕಟುತರವಾದ ಕೆಲಸ ಎಂದರೆ ಬೆಂಗಳೂರು ಪಟ್ಟಣದಲ್ಲಿ ಇಲ್ಲಿ ಯಶಸ್ಸು ಸಿಕ್ಕಿದರೆ ಮೈಸೂರು, ಹುಬ್ಬಳ್ಳಿ, ಮಂಗಳೂರು ಮತ್ತು ಬೇರೆ ಕಡೆಗಳಲ್ಲಿ ಆಹಾರ ಧಾನ್ಯವನ್ನು ಕೊಟ್ಟು ಇದೇ ರೀತಿ ಅಲ್ಲಿಯೂ ಮಾಡಲಿಕ್ಕೆ ಪ್ರಯತ್ನ ಮಾಡುತ್ತೇವೆ. ಇದು ಆದಮೇಲೆ, ಅನೇಕ ಗ್ರಾಮಾಂತರ ಪ್ರದೇಶದಲ್ಲಿ ಬೆಳೆ ಚೆನ್ನಾಗಿಲ್ಲ, ಅಲ್ಲಿ ಮಳೆಯಾಗಿಲ್ಲ. ಗ್ರಾಮಾಂತರದವರಿಗೆ ಸಾಕಷ್ಟು ಬೆಳೆಯುತ್ತಾರೆ. ಎಂದು ತಿಳಿದುಕೊಂಡಿದ್ದೆವು. ಕೆಲವು ಪ್ರದೇಶದಲ್ಲಿ ತೊಂದರೆ ಇದೆ. ಎಲ್ಲೆಲ್ಲಿ ತೊಂದರೆ ಇದೆಯೋ ಅಲ್ಲಿ ಕೂಡ ಆಹಾರ ಧಾನ್ಯವನ್ನು ಕೂಡ ನಿಜವಾಗಿಯೂ ಪಟ್ಟಣದಲ್ಲಿ ಹೆಚ್ಚಿಗೆ ತೊಂದರೆ ಇದೆ. ಎಲ್ಲೆಲ್ಲಿ ತೊಂದರೆ ಇದೆಯೋ ಅಲ್ಲಿ ಕೂಡ ಆಹಾರ ಧಾನ್ಯವನ್ನು ಕೊಡಬೇಕು ಎಂದು ಈಗ ಗೊತ್ತು ಮಾಡಿದ್ದೇವೆ. ಈ ಸಲ ಯಾವ ತರಹ ತೊಂದರೆಯೂ ಆಗಲಿಕ್ಕಿಲ್ಲ ಎಂದು ನನ್ನ ಭಾವನೆ. ಇನ್ನು ಗಡಿ ಪ್ರಶ್ನೆ ಇದೆ. ಗಡಿ ಪ್ರಶ್ನೆಯಲ್ಲಿಯೂ ಕೂಡ, 4-6 ತಿಂಗಳಿನಿಂದ ಹೆಚ್ಚಿಗೆ ಭದ್ರತೆ ಮಾಡಿದ್ದೇವೆ. ಅಂಕಿ ಸಂಖ್ಯೆಗಳಿಂದ ಹೇಳುವುದಿಲ್ಲ. 100ಕ್ಕೆ 85 ಪರ್ಸೆಂಟ್ ಈ ಪ್ರಾಂತ್ಯದಿಂದ ಹೊರಗಡೆಗೆ ಆಹಾರ ಧಾನ್ಯ ಹೋಗುವುದು ನಿಂತಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಇನ್ನೂ ಸ್ವಲ್ಪ ಹೆಚ್ಚಿಗೆ ಸುಧಾರಣೆ ಆಗಬಹುದು. ನಿಜವಾಗಿ ಎಷ್ಟೋ ಸುಧಾರಣೆ ಆಗಿದೆ. ಗಡಿ ಕಡೆ ನಮ್ಮ ಸರ್ಕಾರದ ಅಧಿಕಾರಿಗಳು ಗಮನಕೊಟ್ಟರೆ, ನಮ್ಮ ಸ್ಟೇಟ್‌ನೊಳಗೆ ಆಹಾರ ಧಾನ್ಯ ಏನು ಇದೆ, ಹೊರಗಡೆಯಿಂದ ಏನು ತೆಗೆದುಕೊಂಡಿದ್ದೇವೆ. ಎಲ್ಲಿಂದ ಬೇಕೋ ಅಲ್ಲಿಗೆ ಹೋಗಲಿಕ್ಕೆ ಅನುಕೂಲವಾಗುತ್ತದೆ ಮತ್ತು ಬೆಲೆ ಕೂಡ ಹೆಚ್ಚಿಗೆ ಹೋಗಲಿಕ್ಕಿಲ್ಲ ಎಂದು ನನ್ನ ಭಾವನೆ.

ಒಬ್ಬ ಮಾನ್ಯ ಸದಸ್ಯರು:- ಹೊರಗಿನಿಂದ ಬರುವುದಕ್ಕೆ ಏನು ಮಾಡುತ್ತೀರಿ?

ಶ್ರೀ ಬಿ.ಡಿ. ಜತ್ತಿ:- ಅದು ನನಗೆ ಸಂಬಂಧಪಟ್ಟ ವಿಷಯವಲ್ಲ. ನಮ್ಮವರು ಹೊರಗೆ ತೆಗೆದುಕೊಂಡು ಹೋಗಬಾರದು. ಹೊರಗಿನಿಂದ ಬರುವುದನ್ನು ಅವರು ವಿಚಾರ ಮಾಡಬೇಕು ಅದನ್ನು ಏನೂ ಮಾಡುವುದಕ್ಕಾಗುವುದಿಲ್ಲ. ಈ ರೀತಿ ಎಲ್ಲಾ ಕಡೆ ಏರ್ಪಾಡು ಮಾಡುವುದರಿಂದ ಮುಂದಿನ ಮಳೆ ಬೆಳೆ ಆಗುವುದರೊಳಗಾಗಿ ಆಹಾರದ ಸಮಸ್ಯೆ ಕಟುತರವಾಗಿ ಆಗಲಿಕ್ಕಿಲ್ಲ ಎಂದು ನನ್ನ ಭಾವನೆ. ಆ ಪ್ರಕಾರ ನಾನು ಎರಡು ಮಾತುಗಳನ್ನು ಹೇಳಿದ್ದೇನೆ.

ಶ್ರೀ ವಿ.ಆರ್. ನಾಯ್ಡು(ಉಪಾಧ್ಯಾಯರ ಕ್ಷೇತ್ರ):- ನಾವು ಮಾತನಾಡುವವರು ಕೆಲವು ಆಹಾರದ ಸಮಸ್ಯೆ ಮೇಲೆ ಸಲಹೆ ಕೊಡಬೇಕಾಗಿತ್ತು. ತಾವು ಕೊಟ್ಟ ವರದಿ ನೋಡಿದರೆ, ಬಹಳ ಸಂತೋಷವಾಗಿದೆ ಮತ್ತು ತಾವು ಚೆನ್ನಾಗಿ ಕೆಲಸ ಮಾಡಿದ್ದೀರಿ ಎಂದು ಶ್ರೀ ನರಸಿಂಹನ್ ಅವರು ಮತ್ತು ಶ್ರೀ ಅಂಜನಪ್ಪನವರು ಒಪ್ಪಿಕೊಳ್ಳುತ್ತಾರೆ. ದೇವರ ದಯೆಯಿಂದ ತೊಂದರೆ ಇಲ್ಲದೆ ಕೆಲಸ ನಿರ್ವಹಣೆ ಮಾಡುತ್ತೀರೆಂದು ಸಂತೋಷ ಪಡಲಿ. ಆಹಾರದ ವಿಚಾರದಲ್ಲಿ ಕೊರತೆ ತೊಂದರೆ ಬರುವುದಿಲ್ಲ ಎಂದು ಭರವಸೆಯುಳ್ಳವನಾಗಿದ್ದೇನೆ.

ಶ್ರೀ ಬಿ.ಡಿ. ಜತ್ತಿ:- ನನ್ನ ಸ್ನೇಹಿತರಾದ ಶ್ರೀ ನರಸಿಂಹನ್ ಅವರು ಹೇಳಿದರು, ಗೌರ್ನರ್ ಭಾಷಣದ ಒಳಗೆ ಆಹಾರದ ಸಮಸ್ಯೆ ಬಗ್ಗೆ ಎಷ್ಟು ಮಹತ್ವ ಕೊಡಬೇಕೋ ಅಷ್ಟು ಕೊಟ್ಟಿಲ್ಲ ಎಂದು ಅನೇಕ ಸದಸ್ಯರು ಮಾತನಾಡಿದ್ದು ಕೇಳಿದ್ದೇನೆ. ಗೌರ್ನರ್ ಭಾಷಣ ಅಡ್ಮಿನಿಸ್ಟ್ರೇಷನ್ ರಿಪೋರ್ಟ್ ಆಗಬಾರದು, ಪಾಲಿಸಿ ಮಾತನ್ನು ಹೇಳಬೇಕು ಎಂದು ಅದೂ ಹೇಳುತ್ತಾರೆ. ಆಹಾರದ ಸಮಸ್ಯೆ ಬಗ್ಗೆ ಎರಡು ಮಾತು ಹೇಳಿದ್ದೀರಿ. ಸ್ವಲ್ಪ ಕೊಟ್ಟಿದ್ದೀರಿ. ಆದರೆ ವಿದ್ಯಾ ಇಲಾಖೆ ವಿಚಾರವಾಗಿ 3-4 ಪುಟ ಕೊಟ್ಟಿದ್ದಾರೆ ಎಂದು ಹೇಳುತ್ತಾರೆ. ಅದನ್ನು ಒಪ್ಪಬೇಕೋ, ಇದನ್ನು ಒಪ್ಪಬೇಕೋ ಒಂದೂ ಗೊತ್ತಾಗುತ್ತಿಲ್ಲ. ನಾನು ಹೇಳುವುದು ಇಷ್ಟೆ. ಸ್ಟಾಚ್ಯೂಟರಿ ರೇಷನಿಂಗ್ ಇಂಟ್ರಡ್ಯೂಸ್ ಮಾಡುವ ವ್ಯವಸ್ಥೆ ಮಾಡಿದ್ದೇವೆ. ತೊಂದರೆ ಇರಲಿಕ್ಕಿಲ್ಲ. ಇರುವ ತೊಂದರೆಯನ್ನು ಕಡಿಮೆ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

ಕೊನೆಯ ಮಾತು 'ಫುಡ್ ಸೆಲ್' ಮಾಡಿದ್ದೇವೆ. ಅದು ಹೋಮ್ ಡಿಪಾರ್ಟ್‌ಮೆಂಟಿನ ಒಂದು ಭಾಗ, ಅದು ಸೊಗಸಾಗಿ ಕೆಲಸ ಮಾಡುತ್ತಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಫುಡ್ ಸೆಲ್ ನಿರ್ಮಾಣ ಮಾಡಿದ ನಂತರ ಜನರು ಆಹಾರ ಇಲಾಖೆಯಲ್ಲಿ ನೇರವಾಗಿ ಎಲ್ಲೆಲ್ಲಿ ಏನು ಏನು ದೋಷ ಇದೆ, ಹೇಗೆ ಕಳ್ಳ ಮಾರಾಟ ಮಾಡುತ್ತಿದ್ದಾರೆ, ಆಹಾರ ಮುಚ್ಚಿ ಇಟ್ಟಿದ್ದಾರೆ. ಡಿಕ್ಲರೇಷನ್ ಫಾರಂ ಕೊಟ್ಟಿಲ್ಲ ಎಂದು ಮಾಹಿತಿ ಕೊಡುವುದರಿಂದ, ಹೆಚ್ಚಿಗೆ ಇನ್‌ವೆಸ್ಟಿಗೇಷನ್ ಮಾಡುವ ಸಮಸ್ಯೆ ಇಲ್ಲ. ಕೆಲವು ಕಡೆ ಮನೆ ಯಾವ ಕಡೆ ಇದೆ. ಮನೆಯ ಯಾವ ಭಾಗದಲ್ಲಿ ಇಟ್ಟಿದ್ದಾರೆ. ಎನ್ನುವ ಸಂಪೂರ್ಣ ವಿವರ ಕೊಡುತ್ತಾರೆ. ನಾನು ಒಂದು ಭರವಸೆ ಕೊಡುತ್ತೇನೆ. ಯಾರು ಈ ತರಹ ತಕರಾರು ಕಳುಹಿಸಿಕೊಡುತ್ತಾರೋ ಅಂತಹವರು ಯಾರೇ ಆಗಲಿ ಅವರ ಹೆಸರು ಹೇಳುವುದಿಲ್ಲ. ನನ್ನ ಕಡೆ ಪತ್ರ ಬರಲಿ, ಅರ್ಜಿಯೇ ಬರಲಿ, ಇರತಕ್ಕ ಸಬ್‌ಸ್ಟೆನ್ಸ್ ಏನು ಇದೆ, ಅದನ್ನು ಡಿಕ್ಟೇಟ್ ಮಾಡಿ, ಒಂದು ಕಾಪಿ ಮಿನಿಸ್ಟರಿಗೆ, ಒಂದು ಆಹಾರ ಸೆಕ್ರೆಟರಿ, ಒಂದು ಡೈರಕ್ಟರಿಗೆ ಮತ್ತು ಒಂದು ಫುಡ್ ಸೆಲ್‌ಗೆ ಹೀಗೆ ಇಟ್ಟುಕೊಂಡಿರುತ್ತೇವೆ. ಹೀಗೆ ಬಂದ 100 ಅರ್ಜಿಗಳಲ್ಲಿ 75ಕ್ಕಿಂತ ಹೆಚ್ಚಿಗೆ ಸತ್ಯವಿರುತ್ತದೆ. ಇನ್ನು 25ರಲ್ಲಿ ಸರಿಯಾಗಿ ಮಾಹಿತಿ ಕೊಟ್ಟಿರುವುದಿಲ್ಲ. ಅವನ್ನು ಹುಡುಕಲು ಆಗುವುದಿಲ್ಲ. ಒಟ್ಟಿಗೆ 100ಕ್ಕೆ 75ರಷ್ಟು ಸರಿಯಾಗಿ ಬರುತ್ತದೆ ಅರ್ಜಿ ತಕರಾರು ಬಂದಿದ್ದು

2 ದಿವಸವೂ ಕೂಡ ಇಡುವುದಿಲ್ಲ. ಸುಟ್ಟು ಹಾಕುತ್ತೇವೆ ಯಾರಿಗೂ ಹೇಳುವ ಪ್ರಶ್ನೆ ಬರಬಾರದು ಎಂದು ಇದರಿಂದ ಸಾಕಷ್ಟು ಅನುಕೂಲವಾಗಿದೆ. ಯಾವ ತರಹ ಇನ್‌ಫರ್ಮೇಷನ್ ಕೂಡ ಹೊರಗೆ ಹೋಗುವುದಿಲ್ಲ. ಫೋನ್ ಮೂಲಕ ಹೇಳಿದರೂ ನೋಟ್‌ಮಾಡಿಕೊಳ್ಳುತ್ತೇವೆ ವೈಯಕ್ತಿಕವಾಗಿ ಹೇಳಿದರೂ ನೋಟ್ ಮಾಡಿಕೊಂಡು ಸರಿಯಾದ ಕ್ರಮ ಹೇಳುವುದಕ್ಕೆ ಪ್ರಯತ್ನ ಪಡುತ್ತೇನೆ. ಇಷ್ಟು ಆಹಾರ ಧಾನ್ಯದ ವಿಚಾರ ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಪಾಂಡಿಚೇರಿ ಹಾಗೂ ಓರಿಸ್ಸಾಗಳ ರಾಜ್ಯಪಾಲ

ದಿನಾಂಕ 14.10.1968 ರಂದು ಶ್ರೀ ಬಿ.ಡಿ. ಜತ್ತಿ ಅವರು ಪಾಂಡಿಚೇರಿಯ ರಾಜ್ಯಪಾಲರಾಗಿ ಅಧಿಕಾರ ಸ್ವೀಕರಿಸಿದರು. ಆಗ ಅಲ್ಲಿ ರಾಷ್ಟ್ರಾಧ್ಯಕ್ಷರ ಆಳ್ವಿಕೆ ಜಾರಿಯಲ್ಲಿತ್ತು. ಅಲ್ಲಿಯ ಆಡಳಿತವನ್ನು ವಹಿಸಿಕೊಂಡ ಆರು ತಿಂಗಳುಗಳಲ್ಲಿ ನಗರ ಸಭೆ ಮತ್ತು ವಿಧಾನ ಸಭೆಗಳ ಚುನಾವಣೆಯನ್ನು ನಡೆಸುವಂತೆ ಏರ್ಪಾಡು ಮಾಡಿದರು. ಫಲಿತಾಂಶದಲ್ಲಿ ಯಾವ ಒಂದು ಪಕ್ಷಕ್ಕೂ ಬಹುಮತ ದೊರಕಿರಲಿಲ್ಲ. ಸಮ್ಮಿಶ್ರ ಸರಕಾರ ಸ್ಥಾಪಿಸಿ ಡಿ.ಎಂ.ಕೆ. ಪಕ್ಷದ ಶ್ರೀ ಫರೂಕ ಮರಿಕಾರರು ಮುಖ್ಯ ಮಂತ್ರಿಗಳಾದರು.

ಶ್ರೀ ಜತ್ತಿ ಅವರ ರಾಜ್ಯಪಾಲ ಅವಧಿಯಲ್ಲೆ ದಿನಾಂಕ 15-8-1972 ರಂದು ಶ್ರೀ ಅರವಿಂದ ಶತಮಾನೋತ್ಸವ ಕುರಿತು ಮಾತಾಜಿ ಅವರ ಸಲಹೆ ಮೇರೆಗೆ ಯೋಜನೆಯನ್ನು ಮಾಡಲಾಯಿತು. ಅದರ ನೆನಪಿಗಾಗಿ ಶ್ರೀ ಅರವಿಂದರ ಹೆಸರಿನಲ್ಲಿ ಒಂದು ವಿಶ್ವ ವಿದ್ಯಾಲಯ ಸ್ಥಾಪನೆಯನ್ನು ಮಾಡುವಲ್ಲಿ, ಕೇಂದ್ರ ಸರಕಾರ ಆ ಯೋಜನೆಯನ್ನು ಒಪ್ಪಿಕೊಳ್ಳುವಲ್ಲಿ ಸಕ್ರಿಯ ಕಾರ್ಯ ಮಾಡಿದರು.

ಈ ಅವಧಿಯಲ್ಲೆ ಕೇಂದ್ರಾಡಳಿತ ಪಾಂಡಿಚೇರಿಯಲ್ಲಿ ಬರುತ್ತಿದ್ದ ಒಂದಕ್ಕೊಂದು ಹೊಂದಿಕೊಂಡಿರದ ಭಿನ್ನ ಭಾಷೆಗಳ ಪಾಂಡಿಚೇರಿ ಕಾರಿಯಕಲ್ ಮಾಹೆ, ಯಾನಮ್ ಪ್ರದೇಶಗಳಲ್ಲಿ ಮಾಲೆಯಾಳ ಭಾಷೆಯ ಮಾಹೆಯನ್ನು ಕೇರಳಕ್ಕೆ, ತೆಲಗು ಭಾಷೆಯ ಯಾನಮ ಅನ್ನು ಆಂಧ್ರಪ್ರದೇಶಕ್ಕೆ, ಪಾಂಡಿಚೇರಿ ಕ್ಷೇತ್ರದಲ್ಲಿ ಬರುವ ತಮಿಳು ಪ್ರದೇಶಗಳನ್ನು ತಮಿಳುನಾಡಿಗೆ ಸೇರಿಸಿ ಪಾಂಡಿಚೇರಿ ಮತ್ತು ಕಾರೆಯಕಲ್ ಪ್ರದೇಶಗಳನ್ನು ಸೇರಿಸಿ ಇನ್ನಿತರ ರಾಜ್ಯಗಳಂತೆ ಒಂದು ರಾಜ್ಯವನ್ನು ಮಾಡಬೇಕೆಂದು ಸೂಚಿಸಿದರು. ನಾಲ್ಕು ವರುಷಗಳ ನಂತರ ದಿನಾಂಕ 8-11-1972 ರಂದು ಶ್ರೀ ಜತ್ತಿ ಅವರು ಓರಿಸ್ಸಾದ ರಾಜ್ಯಪಾಲರಾಗಿ ಅಧಿಕಾರ ಸ್ವೀಕರಿಸಿದರು. ಅವರು ಅಧಿಕಾರ ವಹಿಸಿದ 4 ತಿಂಗಳಲ್ಲಿ ಅಲ್ಲಿದ್ದ ಶ್ರೀಮತಿ ನಂದಿನಿ ಸತ್ಪತಿ ಅವರ ಮಂತ್ರಿ ಮಂಡಲ ಉರುಳಿ ರಾಷ್ಟ್ರಾಧ್ಯಕ್ಷರ ಆಳ್ವಿಕೆಗೆ ಕಾರಣವಾಯಿತು.

ರಾಷ್ಟ್ರಾಧ್ಯಕ್ಷರ ಆಳ್ವಿಕೆಯಲ್ಲಿ ಅವರು ಮಾಡಿದ ಕಾರ್ಯ ಕುರಿತು ಅಂದಿನ ಓರಿಸ್ಸಾ ಉಚ್ಚನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ತಮ್ಮ ಒಂದು ಪತ್ರದಲ್ಲಿ ಹೀಗೆ ಕಾಣಿಸಿದ್ದಾರೆ.

ನನ್ನ ಪ್ರಿಯ ರಾಜ್ಯಪಾಲರೆ, ಮಾರ್ಚ 7, 1974

ರಾಜ್ಯದಲ್ಲಿ ರಾಷ್ಟ್ರಪತಿ ಆಳ್ವಿಕೆ ಜಾರಿಯಲ್ಲಿರುವಾಗ ನೀವು ರಾಜ್ಯ ಆಡಳಿತದ ಮುಖ್ಯ ಕಾರ್ಯ ನಿರ್ವಾಹಕರಾಗಿ ನ್ಯಾಯಾಂಗದ ಹಲವು ಮೂಲಭೂತ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ತೋರಿದ ತೀವ್ರ ಹಾಗೂ ಪ್ರಾಮಾಣಿಕ ಆಸಕ್ತಿಗಾಗಿ ಹಾಗೂ ನ್ಯಾಯಾಂಗದ ಒಟ್ಟಾರೆ ಸುಧಾರಣೆಗೆ ಸಂಬಂಧಿಸಿದ ಅನೇಕ ಶಿಫಾರಸುಗಳನ್ನು ಒಪ್ಪಿಕೊಂಡಿದ್ದಕ್ಕಾಗಿ ನಾನು ವೈಯಕ್ತಿಕವಾಗಿ ಹಾಗೂ ನನ್ನ ಸಹೋದ್ಯೋಗಿಗಳ ಪರವಾಗಿ ಅತ್ಯಂತ ನೆನಕೆಗಳನ್ನು ಸಲ್ಲಿಸಬಯಸುತ್ತೇನೆ.

ಗೌರವಾದರಗಳೊಡನೆ, ತಮ್ಮ ವಿಶ್ವಾಸಿ,

ಜಿ.ಕೆ. ಮಿಶ್ರಾ,

ಮುಖ್ಯ ನ್ಯಾಯಾಧೀಶ, ಓರಿಸ್ಸಾ.

## ಉಪರಾಷ್ಟ್ರಪತಿ ಮತ್ತು ಹಂಗಾಮಿ ರಾಷ್ಟ್ರಪತಿಗಳು

ದಿನಾಂಕ 31-8-1974 ರಂದು ಶ್ರೀ ಬಿ.ಡಿ. ಜತ್ತಿ ಅವರು ಭಾರತದ ಉಪರಾಷ್ಟ್ರಪತಿಯಾಗಿ ಅಧಿಕಾರ ವಹಿಸಿಕೊಂಡರು. ಈ ಅಧಿಕಾರದ ಅವಧಿಯಲ್ಲಿ ಅವರು ಜಾಂಬಿಯಾ, ತಾಂಜಾನಿಯಾ ದೇಶಗಳಿಗೆ ಭೇಟಿಕೊಟ್ಟರು. ನೇಪಾಳ ರಾಜ್ಯದ ಅರಸರ ಪಟ್ಟಾಭಿಷೇಕ ಸಮಾರಂಭಕ್ಕೆ ಕೇಂದ್ರ ಸರಕಾರದ ಪರವಾಗಿ ಹೋಗಿದ್ದರು.

ದಿನಾಂಕ 11-2-1977 ರಂದು ಅಂದಿನ ರಾಷ್ಟ್ರಪತಿ ಶ್ರೀ ಫಕ್ರುದ್ದೀನ ಅಲಿ ಅಹಮದ್ ಅವರು ನಿಧನರಾದರು. ಶ್ರೀ ಬಿ.ಡಿ. ಜತ್ತಿ ಅವರು ಹಂಗಾಮಿ ರಾಷ್ಟ್ರಪತಿ ಎಂದು ಅಧಿಕಾರ ಸ್ವೀಕರಿಸಿದರು. ಅವರ ಈ ಅಧಿಕಾರದ ಅವಧಿಯಲ್ಲಿ ರಾಷ್ಟ್ರದಲ್ಲಿ ತುರ್ತು ಪರಿಸ್ಥಿತಿ ಇತ್ತು. ಆಗ ನಡೆದ ಚುನಾವಣೆಯಲ್ಲಿ ರಾಷ್ಟ್ರದಲ್ಲಿ ಪ್ರಥಮ ಕಾಂಗ್ರೇಸ್ಸೇತರ ಸರಕಾರ ರಚಿತವಾಯಿತು.

ಸಂವಿಧಾನದ 352 ನೆ ನಿಬಂಧನೆಯ ನಿಯಮ 2ನೇ ಕಲಮಿನ ಉಪಕಲಮಿನ (ಎ) ಮೇರೆಗೆ ರಾಷ್ಟ್ರಪತಿಗಳಿಗೆ ಪ್ರಾಪ್ತವಾಗಿರುವ ಅಧಿಕಾರದ ಮೇರೆಗೆ ಹಂಗಾಮಿ ರಾಷ್ಟ್ರಪತಿಗಳಾದ ಶ್ರೀ ಬಿ.ಡಿ. ಜತ್ತಿ ಅವರು ದಿನಾಂಕ 25.6.1975 ರಂದು ಘೋಷಿಸಿದ ಮತ್ತು ಭಾರತ ಸರಕಾರ ಪ್ರಕಟಿಸಿದ ತುರ್ತು ಪರಿಸ್ಥಿತಿಯನ್ನು ದಿನಾಂಕ 20-3-1977 ರಂದು ರದ್ದುಪಡಿಸಿದರು. ದಿನಾಂಕ 24-3-1977 ರಂದು ಜನತಾ ಪಕ್ಷದ ಶ್ರೀ ಮುರಾರ್ಜಿ ದೇಸಾಯಿಯವರಿಗೆ ಪ್ರಧಾನ ಮಂತ್ರಿ ಪ್ರಮಾಣ ವಚನವನ್ನು ಬೋಧಿಸಿದರು.

ಮರುದಿನ ದಿನಾಂಕ 25-3-1977 ರಂದು ಹತ್ತೊಂಬತ್ತು ಸದಸ್ಯರ ಸಚಿವ ಸಂಪುಟ ರಚಿತವಾಯಿತು. ಗೃಹ ಮಂತ್ರಿ ಚರಣಸಿಂಗರು ದಿನಾಂಕ 18-4-1977 ರಂದು ರಾಷ್ಟ್ರದ 9 ರಾಜ್ಯಗಳ ವಿಧಾನ ಸಭೆಗಳನ್ನು ವಿಸರ್ಜಿಸಲು ಸೂಚಿಸಿದಾಗ - ಪ್ರಥಮ ಸಲ ಮರು ವಿಚಾರಣೆಗೆ ಹಿಂತಿರುಗಿಸಿದರು. ಅನಂತರ ಮತ್ತೊಮ್ಮೆ ಮಂತ್ರಿಮಂಡಲ ಅನುಮೋದನೆ ಪಡೆದು ಕಳಿಸಿದಾಗ ದಿನಾಂಕ 30-4-1977 ರಂದು ವಿಧಾನ ಸಭೆಗಳನ್ನು ವಿಸರ್ಜಿಸಲು ಒಪ್ಪಿಗೆಯನ್ನು ಕೊಟ್ಟರು.

ಹೊಸ ಮಂತ್ರಿಮಂಡಳ ರಚನೆಯಾದ ನಂತರ ಶ್ರೀ ಸಂಜೀವ ರೆಡ್ಡಿಯವರು ರಾಷ್ಟ್ರಪತಿಗಳೆಂದು ಚುನಾಯಿತರಾದಾಗ ಶ್ರೀ ಬಿ.ಡಿ. ಜತ್ತಿ ಅವರು ಉಪರಾಷ್ಟ್ರಪತಿಗಳಾಗಿ ಮುಂದುವರೆದರು. ಈ ಮಧ್ಯ ರಾಷ್ಟ್ರಪತಿ ಶ್ರೀ ನೀಲಂ ಸಂಜೀವ ರೆಡ್ಡಿ ಅವರು ಚಿಕಿತ್ಸೆಗಾಗಿ ಅಮೇರಿಕಾಕ್ಕೆ ಹೋದಾಗ ಮರಳಿ ಬರುವವರೆಗೆ ಮತ್ತೆ ಹಂಗಾಮಿ ರಾಷ್ಟ್ರಪತಿಗಳಾದರು.

ದಿನಾಂಕ 22-8-1979 ರಂದು ಅವರು ಉಪರಾಷ್ಟ್ರಪತಿ ಅಧಿಕಾರದಿಂದ ನಿವೃತ್ತಿಯಾಗಿ ಬೆಂಗಳೂರಿಗೆ ಬಂದರು.

## ಅನುಬಂಧ 1

## ಕರ್ನಾಟಕ ಮತ್ತು ಮಹಾರಾಷ್ಟ್ರ ಗಡಿ ಸಮಸ್ಯೆ

### ಶ್ರೀ ಬಿ.ಡಿ. ಜತ್ತಿ ಅವರು ತಮ್ಮ ಆತ್ಮಚರಿತ್ರೆ 'ನನಗೆ ನಾನೇ ಮಾದರಿ' ಯಲ್ಲಿ ಹೇಳಿಕೊಂಡಂತೆ (ಪುಟ 118 ರಿಂದ 121)

ನಾನು ಮುಖ್ಯಮಂತ್ರಿಯಾಗಿದ್ದಾಗ ಒಮ್ಮೆ ಕೇಂದ್ರ ಸರಕಾರದ ಗೃಹಮಂತ್ರಿ ಶ್ರೀ ಗೋವಿಂದ ವಲ್ಲಭ ಪಂತ್ ಅವರು ನನ್ನನ್ನು ಎ.ಐ.ಸಿ.ಸಿ. ವೇದಿಕೆಯ ಮೇಲೆ ಕರೆಯಿಸಿಕೊಂಡು ಗಡಿ ಸಮಸ್ಯೆ ಬಗ್ಗೆ ನೀವು ಮತ್ತು ಮಹಾರಾಷ್ಟ್ರದ ಮುಖ್ಯಮಂತ್ರಿಗಳಾದ ಶ್ರೀ ಯಶವಂತರಾವ ಚವ್ಹಾಣ್ ಅವರು ಕೂಡಿಕೊಂಡು ಚರ್ಚಿಸಿ ಒಂದು ನಿರ್ಣಯಕ್ಕೆ ಬರಬೇಕು ಎಂದು ಹೇಳಿದರು. ಅದಕ್ಕೆ ನಾನು ಗಡಿ ನಿರ್ಣಯ ಒಮ್ಮೆ ಮುಗಿದ ನಂತರ ಪುನಃ ಅದರ ಬಗ್ಗೆ ಚರ್ಚೆ ಮಾಡುವುದು ವಿಹಿತವಲ್ಲ ಎಂದು ಹೇಳಿದೆನು. ಅವರು ನೀವಿಬ್ಬರೂ ಚರ್ಚಿಸಿದರೆ ನಿಮಗೆ ಆಗುವ ಹಾನಿ ಏನು? "ನೀವಿಬ್ಬರೂ ಒಂದು ದಿನ ನಿಗದಿಮಾಡಿಕೊಂಡು ಚರ್ಚೆಮಾಡಿ. ನಿಮ್ಮ ಚರ್ಚೆಯ ಫಲಿತಾಂಶವನ್ನು ನನಗೆ ತಿಳಿಸಿರಿ" ಎಂದು ಹೇಳಿದರು. ಗೊತ್ತು ಮಾಡಿದ ದಿನದಂದು ನಾನು ಮುಂಬೈಗೆ ಹೋದೆನು. ನನ್ನ ಕೂಡ ಯಾರನ್ನೂ ಕರೆದುಕೊಂಡು ಹೋಗಿರಲಿಲ್ಲ. ಅಲ್ಲಿಗೆ ಹೋದ ನಂತರ ಮಹಾರಾಷ್ಟ್ರದ ಚೀಫ್ ಸೆಕ್ರೆಟರಿಯವರಾದ ಶ್ರೀ ಕೆ.ಎಲ್. ಪಂಜಾಬಿ ಬರಮಾಡಿಕೊಂಡರು. ನನ್ನ ಕೂಡ ಕರ್ನಾಟಕದ ಚೀಫ್ ಸೆಕ್ರೆಟರಿ ಅಥವಾ ಉಳಿದ ಅಧಿಕಾರಿಗಳು ಬಂದಿಲ್ಲವೆ? ಎಂದು ಕೇಳಿದರು. ನಾನು "ಯಾರನ್ನೂ ಕರೆದುಕೊಂಡು ಬಂದಿಲ್ಲ. ನಾನು ಮತ್ತು ನಿಮ್ಮ ಮುಖ್ಯಮಂತ್ರಿಗಳು ಚರ್ಚಿಸಿ ಒಂದು ನಿರ್ಣಯಕ್ಕೆ ಬಂದಾಗ, ಚೀಫ್ ಸೆಕ್ರೆಟರಿಗಳ ಕೆಲಸ ಪ್ರಾರಂಭವಾಗುವುದು" ಎಂದು ಹೇಳಿದೆ. ಅಷ್ಟರಲ್ಲಿ ಶ್ರೀ ಯಶವಂತರಾವ್ ಚವ್ಹಾಣರು ಬಂದರು. ನಾನು ಮತ್ತು ಅವರು ಒಂದು ಕೋಣೆಯಲ್ಲಿ ಕುಳಿತು ಚರ್ಚೆಯನ್ನು ಹೇಗೆ ಪ್ರಾರಂಭ ಮಾಡೋಣ ಎಂದು ಯೋಚಿಸಿ, ನಮ್ಮಿಬ್ಬರ ವಿಚಾರಗಳನ್ನು ಒಂದೊಂದಾಗಿ ಚರ್ಚಿಸಿದೆವು. ಆ ಚರ್ಚೆಯಲ್ಲಿ ನಮ್ಮಿಬ್ಬರಲ್ಲಿ ಯಾವ ವಿಷಯವಾಗಿಯೂ ಒಮ್ಮತ ಆಗಲಿಲ್ಲ. ಶ್ರೀ ಚವ್ಹಾಣರು "ಹೊರಗೆ ಪತ್ರಕರ್ತರು ಕಾಯುತ್ತಿದ್ದಾರೆ. ಅವರಿಗೆ ನಾನು ಏನು ಹೇಳುವುದು?" ಎಂದು ಕೇಳಿದರು. ಅದಕ್ಕೆ ನಾನು "We discussed threadbare all the issues and finally agreed to disagree ಎಂದು ಹೇಳಬೇಕು." ಎಂದು ಅವರಿಗೆ ಹೇಳಿದೆ ಅದಕ್ಕೆ ಅವರು "ಅದನ್ನು ನೀವೇ ಹೇಳಿರಿ" ಎಂದು ಹೇಳಿದರು. ಅದಕ್ಕೆ ನಾನು "ಆಗಲಿ" ಎಂದು ಹೇಳಿದೆ. ನಾವಿಬ್ಬರೂ ಹೊರಗೆ ಬಂದೆವು. ನಮ್ಮನ್ನು ಪತ್ರಕರ್ತರು ಸುತ್ತುಗಟ್ಟಿದರು. ಶ್ರೀ ಚವ್ಹಾಣರು ನನ್ನ ಕಡೆಗೆ ಬೆರಳು ಮಾಡಿತೋರಿಸಿದರು. ನಾನು ಮೇಲೆ ಹೇಳಿದಂತೆ ಅವರಿಗೆ ಹೇಳಿದೆ. ವೃತ್ತಪತ್ರಿಕೆಗಳಲ್ಲಿ ನಾವು ಹೇಳಿದುದನ್ನು ಪ್ರಕಟಿಸಿದರು.

ಇನ್ನೊಮ್ಮೆ ಎ.ಐ.ಸಿ.ಸಿ. ಸಭೆಯಲ್ಲಿ ನಾನು ಅಲ್ಲಿನ ಸದಸ್ಯರೊಡನೆ ಕುಳಿತಾಗ ಶ್ರೀ ಗೋವಿಂದ ವಲ್ಲಭ ಪಂತ್ (ಗೃಹಮಂತ್ರಿಯವರು) ನನ್ನನ್ನು ವೇದಿಕೆಯ ಮೇಲೆ ಬರಲು ಕರೆ ಕಳುಹಿಸಿದರು. ನನಗೆ ಏತಕ್ಕೆ ಕರೆ ಕಳುಹಿಸಿದರು ಎಂಬುದು ಗೊತ್ತಾಗಲಿಲ್ಲ. ನಾನು ಶ್ರೀ ಮುರಾರ್ಜಿಯವರ ಬಳಿ ಕುಳಿತುಕೊಂಡೆ. ಅವರು ನನಗೆ "ಶ್ರೀನಿವಾಸ ಮಲ್ಯರವರು ಗೃಹಮಂತ್ರಿಗಳಿಗೆ ಮತ್ತು ಪ್ರಧಾನ ಮಂತ್ರಿಯವರಿಗೆ ಗಡಿ ಸಮಸ್ಯೆಯ ಒಡಬಂಡಿಕೆಯಾಗಿದೆ ಎಂದು ತಿಳಿಸಿದ್ದಾರೆ. ಅದರ ಸಲುವಾಗಿ ನೀವು ಏನು ಹೇಳುವುದಿದೆ ಎಂಬುದನ್ನು ಎಚ್ಚರದಿಂದ ಗೃಹಮಂತ್ರಿಗಳಿಗೆ ಹೇಳಿರಿ" ಎಂದು ಹೇಳಿದರು. ಗೃಹಮಂತ್ರಿಯವರು ನನ್ನನ್ನು ತಮ್ಮ ಪಕ್ಕದಲ್ಲಿ ಕರೆದು ಕೂಡ್ರಿಸಿಕೊಂಡು "ಗಡಿ ಸಮಸ್ಯೆಯನ್ನು ಬಗೆಹರಿಸಿಕೊಳ್ಳಿ, ಶ್ರೀನಿವಾಸ ಮಲ್ಯರವರು ಗಡಿ ಸಮಸ್ಯೆಯ ಹೊಂದಾಣಿಕೆಯಾಗುವಂತಿದೆ ಎಂದು ಹೇಳಿದ್ದಾರೆ ಎಂದರು. ನನಗೆ ಈ ಮಾತನ್ನು ಕೇಳಿ ಅಚ್ಚರಿಯಾಯಿತು. ನಾನು "ತಕ್ಷಣ ನಾನು ಒಬ್ಬನೆ ನಿರ್ಣಯ ತೆಗೆದುಕೊಳ್ಳುವುದು ಆಗುವುದಿಲ್ಲ. ನಾನು ಬೆಂಗಳೂರಿಗೆ ವಾಪಾಸ್ ಹೋಗಿ ಮಂತ್ರಿ ಮಂಡಲದಲ್ಲಿ ಚರ್ಚೆಮಾಡಿ ನಮ್ಮ ನಿಲುವನ್ನು ತಿಳಿಸುವೆನು" ಎಂದು ಹೇಳಿದೆ. ಅವರು "ನೀವು ಹೇಳಿದ ಮಾತಿಗೆ ನಿಮ್ಮ ಮಂತ್ರಿಮಂಡಲದಲ್ಲಿ ಯಾವ ಮಂತ್ರಿಯೂ ವಿರೋಧಿಸುವುದಿಲ್ಲ ಎಂದು ಮಲ್ಯರು ನನಗೆ ತಿಳಿಸಿದ್ದಾರೆ ಎಂದು ಹೇಳಿದರು. ಆಗ ನನಗೆ ಇವರ ಕೈಯೊಳಗಿನಿಂದ ಜಾರಬೇಕಾಗಿತ್ತು. ಅದಕ್ಕಾಗಿ ನಾನು "ನಾಳೆ ಎ.ಐ.ಸಿ.ಸಿ. ಅಧಿವೇಶನ ಮುಗಿದ ನಂತರ ಬೆಂಗಳೂರಿಗೆ ಹೋಗಿ ಕ್ಯಾಬಿನೆಟ್ ಮೀಟಿಂಗ್ ಕರೆದು ಗಡಿ ಸಮಸ್ಯೆ ಬಗ್ಗೆ ಚರ್ಚಿಸಿ ನಮ್ಮ ನಿಲುವನ್ನು ತಿಳಿಸುವೆನು" ಎಂದು ಹೇಳಿದೆ. ಅವರು "ಅಧಿವೇಶನ ಮುಗಿದ ಕೂಡಲೇ ತ್ರಿವೆಂಡಮ್‌ಗೆ ಹೋಗಿ ಬೆಂಗಳೂರಿಗೆ ಬರುವೆನು, ಆಗ ನಿಮ್ಮ ನಿರ್ಣಯವನ್ನು ನನಗೆ ತಿಳಿಸಬೇಕು. ನಿಮ್ಮ ನಿರ್ಣಯ ಗಡಿ ಸಮಸ್ಯೆಯನ್ನು ಬಗೆಹರಿಸಲು ಅನುಕೂಲವಾಗುವುದೆಂದು ನಾನು ನಂಬಿರುವೆ" ಎಂದು ಹೇಳಿದರು.

ಬೆಂಗಳೂರಿಗೆ ಬಂದು ಮಂತ್ರಿಮಂಡಲದ ಸಭೆಯನ್ನು ಕರೆದು ನನ್ನ ಮತ್ತು ಕೇಂದ್ರದ ಗೃಹಮಂತ್ರಿಗಳ ನಡುವೆ ಆದ ಮಾತುಕತೆಗಳನ್ನು ತಿಳಿಸಿ ಹೇಳಿದೆ. ಕೆಲವು ಸಮಯ ಚರ್ಚೆಮಾಡಿ ಒಮ್ಮೆ ಪಾರ್ಲಿಮೆಂಟಿನಲ್ಲಿ ಚರ್ಚೆಯಾಗಿ ಕೊನೆಯ ನಿರ್ಣಯ ತೆಗೆದುಕೊಂಡ ನಂತರ ಪುನಃ ಪರಿಶೀಲನೆ ಮಾಡುವುದು ಅನಗತ್ಯವೆಂದು ತೀರ್ಮಾನಿಸಲಾಯಿತು. ಮರುದಿವಸ ಕೇಂದ್ರದ ಗೃಹಮಂತ್ರಿಯವರು ಬೆಂಗಳೂರಿಗೆ ಬಂದು ನನ್ನನ್ನು ಕರೆಯಿಸಿಕೊಂಡರು. "ಎರಡು ರಾಜ್ಯಗಳಲ್ಲಿ ನೆನೆಗುದಿಗೆ ಬಿದ್ದಿರುವ ಸಮಸ್ಯೆಯನ್ನು ಬಗೆಹರಿಸುವ ನಿರ್ಣಯವನ್ನು ಮಾಡಿದ್ದೀರಾ?" ಎಂದು ಕೇಳಿದರು. ನಾನು "ನಿರ್ಣಯವಾದ ವಿಷಯವನ್ನು ಪುನಃ ಪರಿಶೀಲನೆ ಮಾಡುವುದು ಸರಿಯಲ್ಲ ಎಂದು ಎಲ್ಲಾ ಮಂತ್ರಿಗಳು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದುದರಿಂದ ಈ ವಿಷಯದಲ್ಲಿ ನನಗೆ ಏನೂ ಮಾಡಲು ಸಾಧ್ಯವಿಲ್ಲ" ಎಂದು ಹೇಳಿದೆ. ಗೃಹಮಂತ್ರಿಯವರು "ಗಡಿಸಮಸ್ಯೆಯು ಬಗೆಹರಿಯಬಹುದೆಂದು ನಾನು ಊಹಿಸಿದ್ದೆ. ಆದರೆ, ನೀವು ನನಗೆ ಅಸಮಾಧಾನ ಮಾಡಿದಿರಿ" ಎಂದು ಹೇಳಿದರು.

ಕೆಲವು ದಿನಗಳ ನಂತರ ನನ್ನನ್ನು ಗೃಹಮಂತ್ರಿಗಳು ದಿಲ್ಲಿಗೆ ಬರಮಾಡಿಕೊಂಡರು. ಸಾಯಂಕಾಲ 6 ಗಂಟೆಗೆ ಅವರ ವಾಸಸ್ಥಳಕ್ಕೆ ನನಗೆ ಬರಲು ಹೇಳಿದರು. ಅಲ್ಲಿ ಪ್ರಧಾನ ಮಂತ್ರಿ ಶ್ರೀ ನೆಹರೂರವರು, ಮಹಾರಾಷ್ಟ್ರದ ಮುಖ್ಯಮಂತ್ರಿ ಶ್ರೀ ಯಶವಂತರಾವ್ ಚವ್ಹಾಣರು ಮತ್ತು ಶ್ರೀನಿವಾಸ ಮಲ್ಯರು ಹಾಜರಿದ್ದರು. ಆ ದಿವಸ ಚರ್ಚೆ ನಡೆಯಿತು. ಆದರೆ ಯಾವುದೇ ಒಂದು ನಿರ್ಣಯಕ್ಕೆ ಬರಲಾಗಲಿಲ್ಲ. ಮರುದಿವಸ ಪುನಃ ಅದೇ ಸ್ಥಳದಲ್ಲಿ ನಾವೆಲ್ಲರೂ ಸೇರಿದೆವು. ಸುಮಾರು ಒಂದು ಗಂಟೆ ಕಾಲ ಚರ್ಚೆ ನಡೆಯಿತು. ಆಗ ಪ್ರಧಾನಮಂತ್ರಿ ಶ್ರೀ ನೆಹರೂರವರು ತಮ್ಮ ಕೈಗಡಿಯಾರವನ್ನು ನೋಡುತ್ತಿದ್ದರು. ಅದನ್ನು ಕಂಡು ಶ್ರೀ ಪಂತ್‌ರವರು ಪ್ರಧಾನಮಂತ್ರಿಯವರಿಗೆ " ನಿಮಗೆ ಎಲ್ಲಿಯಾದರೂ ಎಂಗೇಜ್‌ಮೆಂಟ್ ಇದೆಯೇ? ಇಲ್ಲಿ ಗಡಿಸಮಸ್ಯೆಯನ್ನು ಎರಡು ದಿವಸಗಳಿಂದ ಚರ್ಚೆ ಮಾಡುತ್ತಿದ್ದೇವೆ. ಯಾವ ತೀರ್ಮಾನವನ್ನು ಮಾಡುವುದಾಗಿಲ್ಲ" ಎಂದು ಸ್ವಲ್ಪ ಬಿರುಸಾಗಿ ಮಾತನಾಡಿದರು. ಪ್ರಧಾನಮಂತ್ರಿಯವರು "ನನಗೆ ಎಲ್ಲೂ ಹೋಗಬೇಕಾಗಿಲ್ಲ. ಚರ್ಚೆ ಮುಂದುವರಿಸಿರಿ" ಎಂದು ಹೇಳಿದರು. ಗೃಹಮಂತ್ರಿಯವರಿಗೆ ಕೋಪ ಬಂದಿತು. ಅವರ ಕೋಪ ನನ್ನ ಮೇಲೆ ಹೊರಳಿತು. ಜತ್ತಿಯವರೆ, ಈ ಸಮಸ್ಯೆಯನ್ನು 2 ದಿವಸಗಳಿಂದ ಚರ್ಚೆ ಮಾಡುತ್ತಿದ್ದೇವೆ. ಇವತ್ತು ಏನಾದರೂ ಕೊನೆಯ ನಿರ್ಣಯ ಮಾಡಲೇಬೇಕು ಎಂದು ಕೆಳಗಿನಂತೆ ನನ್ನನ್ನು ಪ್ರಶ್ನಿಸಿದರು.

1. ಈರ್ವರ ಹೆಸರನ್ನು ನೀವು ಹೇಳಿರಿ. ಇನ್ನೀರ್ವರ ಹೆಸರನ್ನು ಚವ್ಹಾಣರು ಹೇಳಲಿ, ಕೇಂದ್ರ ಸರಕಾರದ ಪರವಾಗಿ ಒಬ್ಬರ ಹೆಸರನ್ನು ಹೇಳುವೆವು. ಈ 5 ಜನರು ಕೂಡಿಕೊಂಡು ಕೊಟ್ಟ ತೀರ್ಪಿಗೆ ನೀವು ಒಪ್ಪುವಿರಾ?

ಅಥವಾ 2. ಕರ್ನಾಟಕ ಹೈಕೋರ್ಟ್ ಜಡ್ಜ್ ಒಬ್ಬರು, ಮಹಾರಾಷ್ಟ್ರ ಹೈಕೋರ್ಟ್ ಜಡ್ಜ್ ಒಬ್ಬರು ಮತ್ತು ಸುಪ್ರೀಂ ಕೋರ್ಟ್ ಜಡ್ಜ್ ಒಬ್ಬರು ಮೂವರು ಕೂಡಿಕೊಂಡು ಕೊಟ್ಟ ತೀರ್ಪಿಗೆ ನೀವು ಒಪ್ಪುವಿರಾ?

ನಾನು ಗೃಹಮಂತ್ರಿಯವರಿಗೆ "ನೀವು ರಾಷ್ಟ್ರದ ಹಿರಿಯ ನಾಯಕರಲ್ಲೊಬ್ಬರು. ನಾನು ಆಕಸ್ಮಿಕವಾಗಿ ಕರ್ನಾಟಕ ರಾಜ್ಯದ ಮುಖ್ಯ ಮಂತ್ರಿಯಾದವನು. ನೀವು ಸಿಟ್ಟಿಗೆ ಎದ್ದಿದ್ದೀರಿ' ಆದರೆ ದಯವಿಟ್ಟು ನಾನು ಹೇಳುವುದನ್ನು ಕೇಳಿರಿ. ಒಂದು ಸಾರ್ವಜನಿಕ ಸಭೆಯಲ್ಲಿ ನಾನು ಮುಖ್ಯಮಂತ್ರಿಯಾದ ನಂತರ ನಾನು ಮುಖ್ಯಮಂತ್ರಿಯಾಗಿ ಅಧಿಕಾರದಲ್ಲಿರುವವರೆಗೆ ಕರ್ನಾಟಕ ರಾಜ್ಯದ ಒಂದು ಅಂಗುಲ ಭೂಮಿಯನ್ನೂ ಬಿಟ್ಟುಕೊಡುವುದಿಲ್ಲ ಎಂದು ಸಾರಿದ್ದೇನೆ. ಆದುದರಿಂದ ನನಗೆ ಒಮ್ಮೆ ನಿರ್ಣಯವಾದ ಗಡಿ ನಿರ್ಣಯವನ್ನು ಬದಲಾಯಿಸಲಾಗುವುದಿಲ್ಲ. ನಾನು ರಾಜೀನಾಮೆಯನ್ನು ಕೊಡುವೆನು. ನೀವು ಅದನ್ನು ಸ್ವೀಕರಿಸಿ ನಿಮಗೆ ಅನುಕೂಲವಿದ್ದ ಮುಖ್ಯಮಂತ್ರಿಯವರನ್ನು ಆರಿಸಿಕೊಳ್ಳಿರಿ ಎಂದು ಹೇಳಿದೆನು. ಇದನ್ನು ಕೇಳಿ ಪ್ರಧಾನಮಂತ್ರಿ ನೆಹರೂರವರು ಒಮ್ಮೆಲೇ ಸಿಟ್ಟಿಗೆದ್ದು ನೀವು

ರಾಜೀನಾಮೆ ಪ್ರಶ್ನೆಯನ್ನು ಎತ್ತಬೇಡಿ. ಕರ್ನಾಟಕದ ರಾಜ್ಯಭಾರ ಸುಲಲಿತವಾಗಿ ಸಾಗಿದೆ. ಈ ಸಭೆಯನ್ನು ವಿಸರ್ಜಿಸೋಣ ಎಂದು ಸಭೆಯಿಂದ ಹೊರಟರು, ಗಡಿಸಮಸ್ಯೆ ಮೊದಲಿದ್ದಂತೆ ಉಳಿಯಿತು.

1964 ರಲ್ಲಿ ಮುಂಬೈಯಲ್ಲಿ ಎ.ಐ.ಸಿ.ಸಿ. ಅಧಿವೇಶನ ನಡೆಯಿತು. ಆ ಅಧಿವೇಶನಕ್ಕೆ ನಾನು ಹೋಗಿದ್ದೆ. ಅಧಿವೇಶನಕ್ಕೆ ಪ್ರಧಾನಮಂತ್ರಿ ಶ್ರೀ ನೆಹರೂರವರು ಬಂದಿದ್ದರು. ಆಗ ಅವರ ಆರೋಗ್ಯ ಸ್ವಲ್ಪ ಕುಸಿದಿತ್ತು. ಅಧಿವೇಶನ ಸಮಯದಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರಿಗೆ ಕರ್ನಾಟಕ ಮತ್ತು ಮಹಾರಾಷ್ಟ್ರ ಗಡಿಸಮಸ್ಯೆ ಬಗ್ಗೆ ಸಾಧ್ಯವಾದ ವಿವರಗಳನ್ನು ಕೊಡಲು ನನಗೆ ಆಗಿನ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಹೇಳಿದರು. ನಾನು ಎಲ್ಲ ವಿವರಗಳನ್ನು ಶ್ರೀಮತಿ ಇಂದಿರಾ ಗಾಂಧಿಯವರಿಗೆ ತಿಳಿಸಿ ಹೇಳಿದೆ.ಇದಲ್ಲದೆ ನಾನು ಮುಖ್ಯಮಂತ್ರಿಯಾಗಿರುವಾಗ ನಡೆದ ಹಲವಾರು ಸಭೆಗಳ ಬಗ್ಗೆ ತಿಳಿಸಿದೆ. ಒಮ್ಮೆ ಪಾರ್ಲಿಮೆಂಟಿನಲ್ಲಿ ನಿರ್ಣಯವಾಗಿರುವುದರಿಂದ ಪುನಃ ಈ ಪ್ರಶ್ನೆಯನ್ನು ಎತ್ತುವುದು ಸರಿಕಾಣುವುದಿಲ್ಲ ಎಂದು ಹೇಳಿದೆ. ಕಾಂಗ್ರೆಸ್ ಅಧಿವೇಶನ ಮುಗಿದ ನಂತರ ಸಾಯಂಕಾಲ ವರ್ಕಿಂಗ್ ಕಮಿಟಿ ಕೂಡುವುದಿತ್ತು. ಈ ಕಮಿಟಿಗೆ ನಿಜಲಿಂಗಪ್ಪನವರು ಸದಸ್ಯರಿರುವುದರಿಂದ ಆ ಸಭೆಗೆ ಅವರು ಹಾಜರಾಗುತ್ತಿದ್ದರು. ಅವರಿಗೆ ಕರ್ನಾಟಕದ ಪ್ರಮುಖ ಕಾಂಗ್ರೆಸ್ಸಿಗರು ಕಮಿಟಿಯಲ್ಲಿ ಒಮ್ಮೆ ಮುಗಿದ ಗಡಿ ಸಮಸ್ಯೆಯನ್ನು ಪುನಃ ತೆರೆಯಲು ಒಪ್ಪಬೇಡಿರಿ ಎಂದು ಹೇಳಿದರು. ಆದರೆ ಆ ಕಮಿಟಿಯಲ್ಲಿ ಶ್ರೀ ನಿಜಲಿಂಗಪ್ಪನವರು ಏಕಸದಸ್ಯ ಕಮಿಟಿಯ ನೇಮಕ ಮಾಡಲು ಒಪ್ಪಿದರು. ಈ ಕಮಿಟಿ ನೇಮಕ ಮಾಡಿದ ನಂತರ ಕರ್ನಾಟಕದಲ್ಲಿ ಕೆಲವೆಡೆಯಲ್ಲಿ ಗಲಭೆ ಗದ್ದಲಗಳಾದವು. ಕೊನೆಗೆ ಮಹಾಜನ್ ಕಮಿಷನ್ ಒಂದು ವರದಿಯನ್ನು ಒಪ್ಪಿಸಿತು. ಈ ವರದಿಯನ್ನು ಇದ್ದಕ್ಕಿದ್ದಂತೆ ಒಪ್ಪುವೆವೆಂದು ಮಹಾರಾಷ್ಟ್ರ ಸರಕಾರದವರು ಒಪ್ಪಿದ್ದರು. ಆದರೆ ಅವರು ಒಪ್ಪಿದಂತೆ ನಡೆದುಕೊಳ್ಳಲಿಲ್ಲ. ಗಡಿಸಮಸ್ಯೆ ಮೊದಲಿದ್ದಂತೆ ಉಳಿಯಿತು.

ಇತ್ತೀಚೆಗೆ ಗಡಿ ಸಮಸ್ಯೆಯನ್ನು ಮಹಾರಾಷ್ಟ್ರದವರು ಹಲವಾರು ಬಾರಿ ಎತ್ತಿದ್ದಾರೆ. ಕೇಂದ್ರ ಸರಕಾರದವರು ಪುನಃ ಪುನಃ ಮಹಾರಾಷ್ಟ್ರ ಸರಕಾರದ ಮುಖ್ಯಮಂತ್ರಿ ಮತ್ತು ಕರ್ನಾಟಕ ಸರಕಾರದ ಮುಖ್ಯಮಂತ್ರಿ ಈ ವಿಷಯವಾಗಿ ಚರ್ಚೆ ಮಾಡಬೇಕೆಂದು ಹೇಳುತ್ತಾ ಬಂದಿದ್ದಾರೆ. ಕರ್ನಾಟಕ ವಿಧಾನಸಭೆಯಲ್ಲಿ ಎರಡು ಸಲ ಈ ವಿಷಯದ ಬಗ್ಗೆ ಸಾಕಷ್ಟು ಚರ್ಚೆಯಾಗಿ ಕೆಳಗಿನ ನಿರ್ಣಯವನ್ನು ತೆಗೆದುಕೊಳ್ಳಲಾಗಿದೆ.

ನಿರ್ಣಯ: ಮಹಾಜನ್ ವರದಿಯನ್ನು ಸಂಪೂರ್ಣವಾಗಿ ಇದ್ದಕ್ಕಿದ್ದಂತೆಯೇ ಜಾರಿಯಲ್ಲಿ ತರಬೇಕು ಅಥವಾ ಒಮ್ಮೆ ಪಾರ್ಲಿಮೆಂಟಿನಲ್ಲಿ ನಿರ್ಣಯವಾದುದನ್ನು ಬದಲು ಮಾಡಬಾರದು.

## ಅನುಬಂಧ-2

ದಿನಾಂಕ 22-8-1979 ರಂದು ಶ್ರೀ ಬಿ.ಡಿ. ಜತ್ತಿ ಅವರು ಉಪರಾಷ್ಟ್ರಪತಿ ಹುದ್ದೆಯಿಂದ ನಿವೃತ್ತರಾದಾಗ ಅವರನ್ನು ಬೀಳ್ಕೊಡುವ ಸಂದರ್ಭದಲ್ಲಿ ಸಂಸತ್ ಸದಸ್ಯರು ಅರ್ಪಿಸಿದ ಅಭಿನಂದನಾ ಪತ್ರ. ('ನನಗೆ ನಾನೇ ಮಾದರಿ' ಪುಟ 113 ರಿಂದ 115)

ಗೌರವಾನ್ವಿತ ಉಪರಾಷ್ಟ್ರಪತಿಯವರೇ,

ಭಾರತದ ಶ್ರೇಷ್ಠ ಹಾಗೂ ಸುವಿಖ್ಯಾತ ಪುತ್ರನೋರ್ವನಿಗೆ ನಮ್ಮ ಅತ್ಯಂತ ಗೌರವ ಹಾಗೂ ಅಭಿಮಾನವನ್ನು ತೋರಿಸಲು ಸಂಸತ್ತಿನ ಎರಡೂ ಸದನಗಳ ಸದಸ್ಯರಾದ ನಾವು ಈ ಸಂಜೆ ಇಲ್ಲಿ ಸೇರಿದ್ದೇವೆ.

ಸಾರ್ವಜನಿಕ ಸೇವೆಯಲ್ಲಿರುವ ವ್ಯಕ್ತಿಯೊಬ್ಬರು ಉಚ್ಚ ಅಧಿಕಾರ ಸ್ಥಾನಕ್ಕೆ ನೇಮಕಗೊಂಡಾಗ ಅವರ ಗುಣ ವಿಶೇಷಗಳು ಹಾಗೂ ಸೇವೆಯನ್ನು ಹೊಗಳುವುದು ಸಂಪ್ರದಾಯ. ಆದರೆ ಅವರು ಅಧಿಕಾರದಿಂದ ವಿರಮಿಸುವ ಸಂದರ್ಭದಲ್ಲಿ ಈ ರೀತಿ ಮಾಡುವುದೇ ಅತ್ಯಂತ ಸೂಕ್ತವೆನಿಸುತ್ತದೆ.

ಮಾನ್ಯರೆ, ತಮ್ಮದು ಜನಸೇವೆಗೆ ಮುಡುಪಾಗಿಟ್ಟ ವಿಶಿಷ್ಟ ಜೀವನ, ಪಂಚಾಯತ್ ಸರಪಂಚನ ಹುದ್ದೆಯಿಂದ ಪ್ರಾರಂಭಿಸಿ ಮುಖ್ಯಮಂತ್ರಿ, ರಾಜ್ಯಪಾಲ ಹಾಗೂ ಭಾರತದ ಉಪರಾಷ್ಟ್ರಪತಿಯ ಹುದ್ದೆಯವರೆಗೆ ಅಷ್ಟೊಂದು ವಿಭಿನ್ನವಾದ ಸಾರ್ವಜನಿಕ ಹುದ್ದೆಗಳನ್ನು ಅಲಂಕರಿಸಿದ ವ್ಯಕ್ತಿ. ತಮ್ಮನ್ನು ಬಿಟ್ಟು ಬೇರೆ ಯಾರೂ ಇದ್ದಿರಲಿಕ್ಕಿಲ್ಲ.

ಮಾನ್ಯರೆ, ಇಂದಿನದು ಒಂದು ವಿಶೇಷ ಸಂದರ್ಭ ಹೃದಯಸ್ಪರ್ಶಿ ಎನಿಸುತ್ತದೆ. ತಮ್ಮನ್ನು ಅಗಲುತ್ತೇವೆಂಬುದನ್ನು ಹಾಗೂ ನಮ್ಮ ಮಧ್ಯದಲ್ಲಿ ತಮ್ಮ ಪ್ರಸನ್ನ ಉಪಸ್ಥಿತಿ ಇನ್ನು ಇರುವುದಿಲ್ಲವೆಂಬುದನ್ನು ಯೋಚಿಸಿದಾಗ, ನಮಗೆ ಖೇದವಾಗುತ್ತದೆ.

ಕಳೆದ ಐದು ವರ್ಷಗಳಿಂದ ತಾವು ಅತ್ಯಂತ ಪ್ರತಿಭೆಯಿಂದ ಅಲಂಕರಿಸಿದ ಭಾರತದ ಉಪರಾಷ್ಟ್ರಪತಿಯ ಉಚ್ಚಸ್ಥಾನದಿಂದ ತಾವು ಇನ್ನು ಕೆಲವೇ ದಿನಗಳಲ್ಲಿ ವಿರಮಿಸಲಿದ್ದೀರಿ ನಮ್ಮ ಗೌರವಾನ್ವಿತ ಉಪರಾಷ್ಟ್ರಪತಿಯಾಗಿ, ಅದಕ್ಕೂ ಹೆಚ್ಚೆಂದರೆ ರಾಜ್ಯ ಸಭೆಯ ಸನ್ಮಾನ್ಯ ಸಭಾಪತಿಯಾಗಿ ತಾವು ಹಲವು ವಿಧದಲ್ಲಿ ನಮ್ಮೊಂದಿಗೆ ನಿಕಟ ಸಂಬಂಧ ಹೊಂದಿ ನಮ್ಮವರೇ ಆಗಿದ್ದುದರಿಂದ, ಇನ್ನು ತಾವು ನಮ್ಮೊಡನೆ ಇರುವುದಿಲ್ಲವೆಂಬ ವಿಚಾರಕ್ಕೆ ಹೊಂದಿಕೊಳ್ಳಲು ಸಹ ನಮಗೆ ಕಠಿಣವಾಗುತ್ತಿದೆ. ತಮ್ಮ ಸಾಮರ್ಥ್ಯ, ಪಾಂಡಿತ್ಯ, ಗಾಢ ಪ್ರಜ್ಞೆ, ವಿನಮ್ರತೆ ಹಾಗೂ ಸ್ನೇಹಪರತೆಗಳಿಂದಾಗಿ ತಾವು ನಮ್ಮಲ್ಲಿ ಪ್ರತಿಯೊಬ್ಬರಿಗೂ ಪ್ರೀತಿಪಾತ್ರ ವ್ಯಕ್ತಿಯಾಗಿದ್ದೀರಿ. ತಮ್ಮ ಸಹವರ್ತಿಗಳ ಹೃದಯದಲ್ಲಿ ಸ್ಥಾಯಿಗಳಾಗಿ ನಿಲ್ಲುವ ಕೆಲವರು ಈ ಜಗತ್ತಿನಲ್ಲಿ ಇದ್ದಾರೆ. ಈ ವಿಶಿಷ್ಟ ವೃಂದಕ್ಕೆ ತಾವು ಸೇರುತ್ತೀರಿ.

ಭಾರತಮಾತೆ ಸತ್ಪುತ್ರ ಹಾಗೂ ಸತ್ಪುತ್ರಿಯರಿಗೆ ಜನ್ಮನೀಡಿ ಸುದೈವಿ ಎನಿಸಿದ್ದಾಳೆ, ಅವರಲ್ಲಿ ಅನೇಕ ಪ್ರತಿಭಾವಂತರು ರಾಷ್ಟ್ರದ ಸೇವೆಗೆ ವಿಭಿನ್ನ ರೀತಿಯ ಕಾಣಿಕೆ ಸಲ್ಲಿಸಿದ್ದಾರೆ. ಆದರೆ ತಾವು ಎಲ್ಲರಿಗೂ ಅಗತ್ಯವಾದ ಸದ್ಗುಣಗಳೆನಿಸಿದ ವಿನಮ್ರತೆ, ಪ್ರಾಮಾಣಿಕತೆ, ಕರ್ತವ್ಯನಿಷ್ಠೆ ಹಾಗೂ ದೈವನಿಷ್ಠೆಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವುದು ಎಷ್ಟೊಂದು ಉಚಿತ ಎಂಬುದನ್ನು ತಮ್ಮ ಜೀವನ ವಿಧಾನದ ಮೂಲಕ ನಮ್ಮ ಸ್ಮರಣೆಗೆ ತಂದುಕೊಟ್ಟಿದ್ದೀರಿ.

ಮಾನ್ಯರೇ, ತಮ್ಮ ಜೀವನದ ಪ್ರತಿಯೊಂದು ಹಂತದಲ್ಲಿಯೂ ತಾವು ದಕ್ಷತೆಯಿಂದ ಕರ್ತವ್ಯ ನಿರ್ವಹಿಸಿದ ಫಲವಾಗಿ, ಹೆಚ್ಚೆಚ್ಚು ವಿಶಾಲವಾದ ಕಾರ್ಯಕ್ಷೇತ್ರಗಳಲ್ಲಿ ಕಾಲಿಡುವಂತಾಯಿತು. ಹುಟ್ಟೂರಾದ ಸಾವಳಗಿಯಲ್ಲಿ ಸಾರ್ವಜನಿಕ ಜೀವನವನ್ನು ಪ್ರಾರಂಭಿಸಿದ ತಾವು ಜಮಖಂಡಿ ಸಂಸ್ಥಾನದ ಆಗುಹೋಗುಗಳಲ್ಲಿ ಪ್ರಮುಖ ಪಾತ್ರವಹಿಸತೊಡಗಿದಿರಿ. ಆಗಿನ ತಮ್ಮ ಸಾರ್ವಜನಿಕ ಜೀವನದ ಪ್ರಾರಂಭದ ದಿನಗಳಲ್ಲಿಯೂ ತಾವು ವಿಧಾಯಕ ಸಮಾಜ ಕಲ್ಯಾಣ ಹಾಗೂ ಅಭಿವೃದ್ಧಿ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರಿ. ಜಮಖಂಡಿ ಸಂಸ್ಥಾನದ ಮುಖ್ಯಮಂತ್ರಿಯಾಗಿದ್ದಾಗ ತಾವು ತಮ್ಮ ಪ್ರಗತಿಪರ ವಿಚಾರಧಾರೆ ಹಾಗೂ ರಾಷ್ಟ್ರಪ್ರೇಮದಿಂದ ಪ್ರೇರಿತರಾಗಿ ಸ್ಥಿತ್ಯಂತರ ಹಾಗೂ ಪ್ರಗತಿಗಾಗಿ ಹಂಬಲಿಸುತ್ತಿದ್ದ ಶಕ್ತಿಗಳೊಡನೆ ಮಿಳಿತರಾಗಿ, ಆ ಸಂಸ್ಥಾನವು ಪ್ರಥಮವಾಗಿ ಭಾರತ ಒಕ್ಕೂಟದಲ್ಲಿ ವಿಲೀನವಾಗುವಂತೆ ಮಾಡುವಲ್ಲಿ ಸಕ್ರಿಯ ಪಾತ್ರ ನಿರ್ವಹಿಸಿದ್ದನ್ನು ಯಾರೂ ಮರೆಯುವಂತಿಲ್ಲ. ಇದು ದಕ್ಷಿಣ ಭಾರತದ ಇತರ ಸಂಸ್ಥಾನಗಳು ಒಕ್ಕೂಟದಲ್ಲಿ ವಿಲೀನವಾಗಲು ದಾರಿ ತೋರಿಸಿತು ಎನ್ನಬಹುದು.

ನಂತರ ತಾವು ಬೇಗನೆ ರಾಜ್ಯಮಟ್ಟದ ಸಾರ್ವಜನಿಕ ಜೀವನದಲ್ಲಿ ಕಾಲಿಟ್ಟಿದ್ದು ಆಶ್ಚರ್ಯಕರ ಸಂಗತಿಯಲ್ಲ. ಸಂಯುಕ್ತ ಮುಂಬೈ ರಾಜ್ಯ ಹಾಗೂ ಮೈಸೂರು ರಾಜ್ಯಗಳಲ್ಲಿ ತಾವು ಮೊದಲು ಶಾಸನ ಸಭೆ ಸದಸ್ಯರಾಗಿ ನಂತರ ಸಚಿವರಾಗಿ ಕಾರ್ಯ ನಿರ್ವಹಿಸಿದ ಬಳಿಕ ಕೊನೆಗೆ ಮೈಸೂರು ರಾಜ್ಯದ ಮುಖ್ಯಮಂತ್ರಿ ಸ್ಥಾನವನ್ನು ಅಲಂಕರಿಸಿದಿರಿ. ಈ ಅವಧಿಯಲ್ಲಿ ತಾವು ಭೂ ಸುಧಾರಣೆ ಸಮಿತಿಯ ಅಧ್ಯಕ್ಷರಾಗಿ ಸಲ್ಲಿಸಿದ ಬೃಹತ್ ಗಾತ್ರದ ವರದಿಯು, ರಾಜ್ಯದಲ್ಲಿಯ ಪರಿಸ್ಥಿತಿಯ ಬಗ್ಗೆ ತಮಗಿರುವ ಪ್ರತ್ಯಕ್ಷ ಪರಿಜ್ಞಾನ ಹಾಗೂ ಕೈಕೊಂಡ ಯಾವುದೇ ಕಾರ್ಯವನ್ನು ಪರಿಪೂರ್ಣ ರೀತಿಯಲ್ಲಿ ಮಾಡಿ ಮುಗಿಸುವ ತಮ್ಮ ಉತ್ಕಟೇಚ್ಛೆಗೆ ಸಾಕ್ಷಿಯಾಗಿದೆ. ಇದು ಮುಗಿಯುವಾಗ ಇತರ ಗೌರವಗಳು ನಿಮಗಾಗಿ ಕಾದಿದ್ದವು. ಸುದೈವ ತಮ್ಮನ್ನು ಈ ಸ್ಥಾನಕ್ಕೆ ಕರೆತರುವ ಮೊದಲು ತಾವು ಪಾಂಡಿಚೇರಿಯ ಸಹಾಯಕ ರಾಜ್ಯಪಾಲ ಹಾಗೂ ಒರಿಸ್ಸಾದ ರಾಜ್ಯಪಾಲರಾಗಿಯೂ ಕಾರ್ಯ ನಿರ್ವಹಿಸಿದಿರಿ. ಉಪರಾಷ್ಟ್ರಪತಿಯಾಗಿ ಕಾರ್ಯ ನಿರ್ವಹಿಸುವುದರ ಜೊತೆಗೆ ತಾವು ಅಲ್ಪಕಾಲದವರೆಗೆ ರಾಷ್ಟ್ರದ ವರಿಷ್ಠರ ಹುದ್ದೆಯ ಭಾರವನ್ನೂ ಹೊತ್ತಿರಿ. ಗುಡಿಸಲಿನಿಂದ ಶ್ವೇತ ಭವನಕ್ಕೆ ಎಂದು ಅಬ್ರಾಹಮ್ ಲಿಂಕನ್ನರ ಬಗೆಗೆ ಹೇಳಲಾಗುತ್ತಿತ್ತು. ಹಳ್ಳಿಯ ಗ್ರಾಮ ಪಂಚಾಯಿತಿಯಿಂದ ರಾಷ್ಟ್ರಪತಿ ಸ್ಥಾನಕ್ಕೆ ಎಂದು ತಮ್ಮ ಬಗೆಗೆ ಹೇಳುವುದು ಅತ್ಯಂತ ಸಮಂಜಸವಾದೀತು.

ತಾವು ರಾಜ್ಯ ಸಭೆಯ ಕರ್ಣಧಾರತ್ವ ವಹಿಸಿದಾಗ ಕಾಲ ಸುಗಮವಾಗಿರಲಿಲ್ಲ. ದೇಶದಲ್ಲಿ ಹಿಂದೆಂದೂ ಘಟಿಸದಂಥ ವಿದ್ಯಮಾನಗಳು ನಡೆಯುತ್ತಿದ್ದುದರ ಪರಿಣಾಮವಾಗಿ ಆ ವರ್ಷಗಳಲ್ಲಿ ಅಸಮಾನ್ಯ ಸ್ಥಿತಿ ಇತ್ತು. ಸಭಾಪತಿಯಾಗಿ ತಾವು ನಿರ್ವಹಿಸಬೇಕಾದ ಕಾರ್ಯ ಎಲ್ಲ ದೃಷ್ಟಿಯಿಂದಲೂ ಅಸಾಮಾನ್ಯವಾಗಿತ್ತು. ಇಂಥ ವಿಷಮಾವಸ್ಥೆಯಲ್ಲಿ ತಾವು ಮನೋಸ್ಥೈರ್ಯವನ್ನು ಕಾಪಾಡಿಕೊಂಡು. ವಿಚಲಿತರಾಗದೆ, ಅತ್ಯಂತ ಗಾಂಭೀರ್ಯದಿಂದ ಸಭಾಪತಿಯ ಕಾರ್ಯನಿರ್ವಹಿಸಿದಿರಿ.

ಆಧ್ಯಾತ್ಮಿಕ ಶಾಂತಿಯನ್ನು ಪಡೆಯಲು ಸನ್ಯಾಸಿಯಾಗಿ ಗುಡ್ಡಬೆಟ್ಟಗಳಲ್ಲಿ ಅದನ್ನು ಹುಡುಕಬೇಕಾಗಿಲ್ಲ. ನಿಷ್ಠೆ ಹಾಗೂ ಹೃದಯ ಶುದ್ಧಿಯಿಂದ ಸಹವರ್ತಿಗಳ ಸೇವೆ ಮಾಡುವ ಸಕ್ರಿಯ ಬದುಕಿನ ಮೂಲಕವೇ ಅದನ್ನು ಪಡೆಯಬಹುದು ಎಂಬುದನ್ನು ತಾವು ತಮ್ಮ ಜೀವನದ ಉದಾಹರಣೆ ಕೊಟ್ಟು ತೋರಿಸಿದ್ದೀರಿ. ಯಾರಿಂದ ಜಗತ್ತು ದೂರ ಹೋಗುವುದಿಲ್ಲವೋ, ಯಾರು ಜಗತ್ತಿನಿಂದ ದೂರ ಹೋಗುವುದಿಲ್ಲವೋ, ಅವನೇ ನನಗೆ ಪ್ರಿಯನು ಎಂದು ಶ್ರೀ ಕೃಷ್ಣ ಭಗವದ್ಗೀತೆಯಲ್ಲಿ ಹೇಳಿದ್ದಾನೆ.

ಮಾನ್ಯರೇ, ತಾವು ಸಾಮಾನ್ಯ ಜನರ ವರ್ಗಕ್ಕೆ ಸೇರಿದವರಲ್ಲ. ತಮ್ಮಂಥ ಗಣ್ಯ, ನಮ್ರ, ಆದರೂ ದಿಟ್ಟ ದೃಢನಿರ್ಧಾರ ಮನೋವೃತ್ತಿಯ ಹಾಗೂ ವಿಶ್ವಾಸಾರ್ಹ ವ್ಯಕ್ತಿಗಳು ರಕ್ತದಲ್ಲಿಯ ಕೆಂಪು ಕಣಗಳಿದ್ದಂತೆ, ಅವು ಕಣ್ಣಿಗೆ ಕಾಣದಿದ್ದರೂ ಸ್ನಾಯುಗಳನ್ನು ಪೋಷಿಸುವಂತೆ, ತಮ್ಮಂಥವರು ರಾಷ್ಟ್ರಜೀವನವನ್ನು ಪರಿಶುದ್ಧಗೊಳಿಸಿ ತೋರಿಸುತ್ತೀರಿ. ಸಮಾಜದ ಒಳಿತಿಗಾಗಿ ವಿಧಾಯಕ ಕಾಣಿಕೆ ಸಲ್ಲಿಸುವುದರಲ್ಲಿ ನಿಜವಾದ ವಿಶ್ವಾಸವುಳ್ಳವರಿಗೆಲ್ಲ ತಮ್ಮಂಥವರ ಬದುಕಿನಿಂದ ಸದಾಕಾಲ ಪ್ರೇರಣೆ ದೊರೆಯುತ್ತದೆ.

ತಮ್ಮನ್ನು ಬೀಳ್ಕೊಡುವಾಗ, ತಮ್ಮೊಂದಿಗಿದ್ದ ನಮ್ಮ ಸಂಬಂಧದ ಸ್ಮರಣೆ ಸದಾ ನಮ್ಮೊಂದಿಗಿರುವುದೆಂಬ ಬಗ್ಗೆ ತಾವು ಪ್ರತ್ಯೇಕವಾಗಿ ಆಶ್ವಾಸನೆ ಕೊಡಬೇಕಾಗಿಲ್ಲವೆಂದು ನಮಗೆ ಅನಿಸಿದೆ. ತಮ್ಮಂಥ ವ್ಯಕ್ತಿಗಳು ಎಂದಿಗೂ ವಿಶ್ರಾಂತಿ ಪಡೆಯುವುದಿಲ್ಲ. ತಾವು ಆರೋಗ್ಯವಂತರಾಗಿ ದೀರ್ಘಾಯುಷಿಗಳಾಗಿರಿ. ರಾಷ್ಟ್ರದ ಸೇವೆಗೆ ತಮ್ಮಿಂದ ಫಲಪ್ರದ ಪ್ರಯತ್ನ ನಡೆಯಲಿ ಎಂದು ಹಾರೈಸುತ್ತೇವೆ.

ಗೌರವದೊಂದಿಗೆ,

ಸಂಸತ್ ಭವನ ತಮ್ಮ

ಹೊಸದಿಲ್ಲಿ,

ಆಗಸ್ಟ್ 22,1979, ಭಾರತ ಸಂಸತ್ ಸದಸ್ಯರು

## ಅನುಬಂಧ - 3

## ಶ್ರೀ ಬಿ.ಡಿ. ಜತ್ತಿ ಅವರ 78 ನೆ ಜನ್ಮ ದಿನದ ಸಂದರ್ಭದಲ್ಲಿ ಬಂದ ಎರಡು ಪತ್ರಗಳು

### 1

### ಕೀರ್ತಿ ತಂದ ಸತ್ಪುತ್ರ

ಧಾರವಾಡದಿಂದ ಕೆಲಸ ಮಾಡುತ್ತಿರುವ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆಯ ಕರ್ನಾಟಕ ಶಾಖೆಯು ಶ್ರೀ ಬಿ.ಡಿ. ಜತ್ತಿಯವರನ್ನು ಸನ್ಮಾನಿಸುತ್ತಿರುವುದು ಹಾಗೂ ಅವರ ಜೀವನ ಘಟನೆಗಳ ಬಗೆಗೆ ಸ್ಮರಣ ಸಂಪುಟವೊಂದನ್ನು ಪ್ರಕಟಿಸುತ್ತಿರುವುದು ಔಚಿತ್ಯಪೂರ್ಣ. ವಿಜಾಪುರ ಜಿಲ್ಲೆಯ ಹಳ್ಳಿಯೊಂದರಲ್ಲಿ ಸಣ್ಣದಾಗಿ ಜೀವನ ಆರಂಭಿಸಿ, ಭಾರತ ತನ್ನ ಸತ್ಪುತ್ರರಿಗೆ ಕೊಡಬಹುದಾದ ಕೆಲವೇ ಕೆಲವು ಪದವಿಗಳಲ್ಲೊಂದನ್ನು - ಭಾರತ ಒಕ್ಕೂಟದ ಉಪರಾಷ್ಟ್ರಪತಿ ಪದವಿಯನ್ನು ಅಲಂಕರಿಸುವ ಮಟ್ಟಕ್ಕೆ ಅವರು ಏರಿದರು. ಕೆಲವು ತಿಂಗಳು ಅವರು ರಾಷ್ಟ್ರಪತಿಗಳ ಕಾರ್ಯವನ್ನೂ ನಿರ್ವಹಿಸಿದರು. ಕನ್ನಡಿಗರಿಗೆ ಅದೊಂದು ಹೆಮ್ಮೆಯ ಸಂಗತಿ.

1940ನೇ ದಶಕದ ಕೊನೆಯ ಭಾಗದಿಂದಲೂ ನಾನು ಶ್ರೀ ಜತ್ತಿಯವರನ್ನು ಬಲ್ಲೆ. ಭಾರತದಲ್ಲಿ ಸಂಸ್ಥಾನಿಕರ ಆಳಿಕೆಗೆ ಒಳಪಟ್ಟಿದ್ದ ಸುಮಾರು 560 ಸಂಸ್ಥಾನಗಳೆಲ್ಲದರಲ್ಲೂ ಹೊಣೆಗಾರ ಸರಕಾರ ಬೇಕೆಂದು ಚಳುವಳಿ ನಡೆಯುತ್ತಿದ್ದ ಕಾಲವದು. ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನಿಂದ ಸ್ಫೂರ್ತಿ ಪಡೆದು ರಾಜಕೀಯ ಸ್ವಾತಂತ್ರ್ಯ, ದೊರಕಿಸುವುದಕ್ಕಾಗಿ ಪ್ರಜಾಮಂಡಳದ ಸಂಘಟನೆ ನಡೆದಿತ್ತು. ಜಮಖಂಡಿ ವಿಜಾಪುರ ಜಿಲ್ಲೆಯಲ್ಲಿದ್ದ ಅಂತಹ ಒಂದು ಚಿಕ್ಕ ಸಂಸ್ಥಾನ, ನಂತರ ಕರ್ನಾಟಕ ವಿಧಾನಸಭಾ ಸದಸ್ಯರೂ ಮಂತ್ರಿಗಳೂ ಆದ ದಿವಂಗತ ದೊಡ್ಡಮೇಟಿ ಅಂದಾನಪ್ಪನವರು ಆಗ ಧಾರವಾಡ ಜಿಲ್ಲೆಯ ಅತ್ಯಂತ ಪ್ರಮುಖ ಕಾಂಗ್ರೆಸ್ ನಾಯಕರು ಜಮಖಂಡಿ ಸಂಸ್ಥಾನದ ಪ್ರಜಾಮಂಡಳಕ್ಕೆ ಅವರ ನೇತೃತ್ವ. ಭಾರತಕ್ಕೆ ಸ್ವಾತಂತ್ರ್ಯ ದೊರೆಯಬೇಕೆಂದೂ ಸಂಸ್ಥಾನಗಳು ಉಳಿದ ಭಾರತದೊಡನೆ ವಿಲೀನ ಹೊಂದಬೇಕೆಂದೂ ದೃಢವಾಗಿ ನಂಬಿದ್ದ ಜಮಖಂಡಿಯ ಯುವಕ ಮಹಾರಾಜರ ಮೇಲೆ ಪ್ರಭಾವ ಬೀರಲು ಅವರು ಸಮರ್ಥರಾದರು. ಭಾರತದಲ್ಲಿ ವಿಲೀನ ಹೊಂದ ಬಯಸಿದ್ದು ಆ ಯುವಕ ಸಂಸ್ಥಾನಿಕನ ದೊಡ್ಡಸ್ಥಿಕೆಯೇ ಸರಿ. ಭಾರತದೊಡನೆ ಸೇರಲು ಸಿದ್ಧವೆಂದು ಘೋಷಿಸಿದ ಮೊದಲಿಗರು ಅವರು. ಆ ಸಂಬಂಧದಲ್ಲಿ ಜಮಖಂಡಿಯಲ್ಲಿ ಮಹಾಸಮ್ಮೇಳನ ಸೇರಿತ್ತು. ಆಗ ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷನಾಗಿದ್ದ ನಾನು ಶ್ರೀ ದೊಡ್ಡಮೇಟಿಯವರ ಆಮಂತ್ರಣದ ಮೇರೆಗೆ ಅದರ ಅಧ್ಯಕ್ಷತೆ ವಹಿಸಿದ್ದೆ. ನನಗೆ ಖುಶಿಯೋ ಖುಶಿ, ಆಗ ಶ್ರೀ ಜತ್ತಿಯವರು ಆ ಸಂಸ್ಥಾನದ ಮುಖ್ಯ ಮಂತ್ರಿಯಾಗಿದ್ದರು.

ಈ ಸಂಬಂಧದಲ್ಲಿ ನಾನು ಒಂದು ಮಾತು ಹೇಳಲೇಬೇಕು. ಇನ್ನಿತರ ಸಂಸ್ಥಾನಿಕರು ಭಾರತದಲ್ಲಿ ವಿಲೀನಗೊಳ್ಳಲು ದಾರಿಹಾಕಿಕೊಟ್ಟ ಆ ರಾಷ್ಟ್ರೀಯ ಮನೋವೃತ್ತಿಯ ದೇಶಾಭಿಮಾನೀ ರಾಜರ ಸೇವೆಗೆ ನಾವು ಸೂಕ್ತ ರೀತಿಯಲ್ಲಿ ಮನ್ನಣೆಕೊಡಲಿಲ್ಲ. ನಿರಾಶಗೊಂಡ ವ್ಯಕ್ತಿಯಾಗಿಯೇ ಅವರು ನಿಧನ ಹೊಂದಿದರು.

ಆ ಮೇಲೆ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಶ್ರೀ ಜತ್ತಿಯವರು ಮುಂಬಯಿ ವಿಧಾನಸಭೆ ಸದಸ್ಯರಾಗಿ ಆಯ್ಕೆಗೊಂಡರು. ಆಗ ಧಾರವಾಡ, ವಿಜಾಪುರ, ಬೆಳಗಾವಿ ಹಾಗೂ ಉತ್ತರಕನ್ನಡ ಜಿಲ್ಲೆಗಳು ಮುಂಬಯಿ ಪ್ರಾಂತದ ಭಾಗಗಳಾಗಿದ್ದವು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಬಿನ್ನಹದ ಮೇರೆಗೆ ಶ್ರೀ ಜತ್ತಿ ಹಾಗೂ ಶ್ರೀ ಕಂಠಿಯವರನ್ನು ಶ್ರೀ ಮುರಾರ್ಜಿ ದೇಸಾಯಿಯವರು ತಮ್ಮ ಮಂತ್ರಿಮಂಡಳದಲ್ಲಿ ಉಪಮಂತ್ರಿಗಳನ್ನಾಗಿ ಸೇರಿಸಿಕೊಂಡರು. ಇಬ್ಬರೂ ನೋಡಲು ಸಣ್ಣಗೆ ಕಾಣುತ್ತಿದ್ದರೂ ಬುದ್ಧಿಮತ್ತೆಯಲ್ಲಿ ದೊಡ್ಡವರಾಗಿದ್ದರು. ತಮ್ಮ ಕಾರ್ಯಸಾಮರ್ಥ್ಯ ಹಾಗೂ ನಿಷ್ಠಾವಂತಿಕೆಗಳಿಂದ ಇಬ್ಬರೂ ಕರ್ನಾಟಕಕ್ಕೆ ಕೀರ್ತಿ ತಂದರೆಂದು ನಮಗೆಲ್ಲರಿಗೂ ಹರ್ಷ.

ಕರ್ನಾಟಕ ರಾಜ್ಯ ರಚನೆಯಾದ ಬಳಿಕ ದಿವಂಗತ ಕಂಠಿ ಹಾಗೂ ಶ್ರೀ ಜತ್ತಿಯವರಿಬ್ಬರೂ ನನ್ನ ಮಂತ್ರಿಮಂಡಲದಲ್ಲಿ ಮಂತ್ರಿಗಳಾದರು. ಇಬ್ಬರೂ ಬಹಳ ಚೆನ್ನಾಗಿ ಕೆಲಸ ಮಾಡಿದರು. ಆ ಬಗೆಗೆ ನನಗೆ ಸಂತೋಷ ಹಾಗೂ ಅಭಿಮಾನ.

ಶ್ರೀ ಜತ್ತಿಯವರು ಭೂಸುಧಾರಣಾ ಸಮಿತಿಯ ಅಧ್ಯಕ್ಷರಾಗಿ ವ್ಯಾವಹಾರಿಕ ಹಾಗೂ ಸ್ವೀಕಾರಾರ್ಹವಾದ ವರದಿ ಸಲ್ಲಿಸಿದರು. ಅವರಿಗೆ ಯಾವುದೇ ಕೆಲಸ ಒಪ್ಪಿಸಿದರೂ - ಅದು ಮಂತ್ರಿಯಾಗಿರಲಿ, ಮುಖ್ಯಮಂತ್ರಿಯಾಗಿರಲಿ. ಭಾರತದ ಉಪರಾಷ್ಟ್ರಪತಿಯಾಗಿರಲಿ, ರಾಜ್ಯ ಸಭೆಯ ಸಭಾಪತಿಯಾಗಿರಲಿ - ತುಂಬ ಸಮರ್ಥವಾಗಿ ಹಾಗೂ ನಿಷ್ಠಾಪೂರ್ವಕವಾಗಿ ಕೆಲಸ ನಿರ್ವಹಿಸಿದರು. ಪಕ್ಷಪಾತಿ, ತರಾತುರಿಯಿಂದ ನಿರ್ಣಯ ಕೈಕೊಳ್ಳುವ, ಆಕ್ಷೇಪಾರ್ಹ ಕಾರ್ಯ ರೀತಿಯವ ಅಥವಾ ಅನ್ಯಾಯ ಮಾಡುವವ ಎಂಬಿವೇ ಮುಂತಾದ ಯಾವುದೇ ಪ್ರತಿಕೂಲ ಟೀಕೆಯೂ ಅವರ ಬಗೆಗೆ ಕೇಳಿಬರಲಿಲ್ಲ.

ಕೇಂದ್ರದ ಧೋರಣೆಯಿಂದ ಬೇಸರಗೊಂಡು ಸಿಟ್ಟಿನಿಂದ ನಾನು ಕರ್ನಾಟಕದ ಮುಖ್ಯಮಂತ್ರಿ ಪದಕ್ಕೆ ರಾಜೀನಾಮೆ ಕೊಟ್ಟಾಗ ಶ್ರೀ ಜತ್ತಿಯವರು ಆ ಹುದ್ದೆಯನ್ನಲಂಕರಿಸಿದರು. ಅವರು ಮುಖ್ಯಮಂತ್ರಿಯಾಗಿದ್ದಷ್ಟು ಕಾಲವೂ ಅವರ 77 ವರ್ಷಗಳ ಜೀವನದುದ್ದಕ್ಕೂ ಕಂಡುಬಂದ ಗುಣ ಸಹಜದಿಂದಲೇ ಕಾರ್ಯನಿರ್ವಹಿಸಿದರು. ಅವರು ಕೆಲವೇ ಸಮಯ ಹಂಗಾಮಿ ರಾಷ್ಟ್ರಪತಿಯಾಗಿದ್ದಾಗ ವಿಷಮ ಪರಿಸ್ಥಿತಿ ತಲೆದೋರಿತು. ಆದರೂ ಅವರು ತಪ್ಪು ಪ್ರಭಾವಿಗಳಿಗೆ ಒಳಗಾಗದೆ ಅತ್ಯಂತ ಸರಿಯಾಗಿ ವರ್ತಿಸಿದರು. ಅದೊಂದು ಅವರಿಗೆ ಕೀರ್ತಿ.

ರಾಜಕೀಯ ಜೀವನದಿಂದ ನಿವೃತ್ತಿ ಹೊಂದಿದ ಮೇಲೆ ಅವರು ಬೆಂಗಳೂರಿನಲ್ಲಿ ಬಸವ ಸಮಿತಿಯ ಅಧ್ಯಕ್ಷ ಕಾರ್ಯದಲ್ಲಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡಿದ್ದಾರೆ. ನಾನು ಮುಖ್ಯಮಂತ್ರಿಯಾಗಿದ್ದಾಗ ವಿಧಾನ ಸೌಧದ ಹತ್ತಿರ ಅದಕ್ಕೆ ಒಂದು ನಿವೇಶನವನ್ನು, ಸಚಿವಾಲಯ ಟಿಪ್ಪಣಿಗೆ ವಿರುದ್ಧವಾಗಿ, ಮಂಜೂರು ಮಾಡಿದೆ. ಅದೀಗ ಬಸವೇಶ್ವರ ವೃತ್ತವೆಂದು ಬಹಳ ಪ್ರಸಿದ್ಧಿ ಪಡೆದಿದೆ. ಬಸವ ಸಮಿತಿಯ ಅಧ್ಯಕ್ಷರಾಗಿ ಶ್ರೀ ಜತ್ತಿಯವರು ತುಂಬಾ ಚೆನ್ನಾಗಿ ಕೆಲಸ ಮಾಡಿದ್ದಾರೆ. ಅತ್ಯುತ್ತಮ ಸಾಮಾಜಿಕ ಸೇವೆ ಸಲ್ಲಿಸಿದ್ದಾರೆ. ಬಸವೇಶ್ವರರ ಹೆಸರಿನಲ್ಲಿ ಭವ್ಯ ಕಟ್ಟಡ ನಿರ್ಮಿಸಿದ್ದಲ್ಲದೆ ಆ ಸಂಸ್ಥೆಗೆ ಭದ್ರವಾದ ಶಾಶ್ವತ ಆರ್ಥಿಕ ನೆಲೆಯನ್ನೂ ಕಲ್ಪಿಸಿದ್ದಾರೆ. ಇಷ್ಟೇ ಅಲ್ಲ, ಯಾವುದೇ ರೀತಿಯ ಶೋಷಣೆಗೂ ಅವಕಾಶವಿಲ್ಲದಂತಹ, ಮಾನವ ಕಾಯಕದ ಪ್ರತಿಯೊಂದು ಕ್ಷೇತ್ರವನ್ನೂ ವ್ಯಾಪಿಸುವ ಸ್ತ್ರೀ - ಪುರುಷರೆಂಬ ಭೇದವಿಲ್ಲದೆ, ಸರ್ವಸಮತೆಯ ಸಮಾಜ ರಚನೆಗೆ ಬುನಾದಿ ಹಾಕಿದ ಮಹಾ ಸಮಾಜ ಸುಧಾರಕ ಮಹಾತ್ಮಾ ಬಸವೇಶ್ವರರ ಹಾಗೂ ಅವರ ಶರಣ-ಶರಣೆಯರ ಜೀವನ, ಸಿದ್ಧಾಂತ ಹಾಗೂ ಕಾರ್ಯಗಳ ಬಗೆಗೆ ಗ್ರಂಥಗಳನ್ನು ಪ್ರಕಟಿಸುವ ಮಹತ್ತರ ಕಾರ್ಯವನ್ನು ಸೇವಾ ದುರಂಧರರೂ ಸಾಹಿತ್ಯ ಪಟುಗಳೂ ಆದ ವರ್ಚಸ್ವೀ ಜನರ ನೆರವಿನಿಂದ ತುಂಬಾ ಪರಿಣಾಮಕಾರೀ ರೀತಿಯಲ್ಲಿ ನಡೆಸಿದ್ದಾರೆ.

ಅವರು ಹೀಗೆಯೇ ಬಹಳ ಉತ್ತಮವಾಗಿ ಕೆಲಸ ಮಾಡುತ್ತ ಹೋಗುತ್ತಾರೆಂಬ ವಿಶ್ವಾಸ ನನಗಿದೆ. ಅವರು ಆ ಸಂಸ್ಥೆಯ ಅಧ್ಯಕ್ಷರಾಗಿರುವುದು ನನಗೆ ಸಂತಸ.

ಚಿತ್ರದುರ್ಗ, ಎಸ್. ನಿಜಲಿಂಗಪ್ಪ
3 ಸೆಪ್ಟೆಂಬರ್ 1989

## ಅಭಿಮಾನಿಯ ಮೆಚ್ಚಿಗೆ

ಮಾನ್ಯರೆ,

ನಿಮ್ಮ 78ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ನನ್ನ ಅಭಿಮಾನ ಹಾಗೂ ಸದಿಚ್ಛೆ ಸಮರ್ಪಿಸಬಯಸುತ್ತೇನೆ.

ನಾನೊಬ್ಬ ಸೋವಿಯಟ್ ವಿಷಯಗಳಲ್ಲಿ ಪರಿಣತಿ ಪಡೆದ ಅಮೆರಿಕನ್, ಸಧ್ಯಕ್ಕೆ ಸಿಂಗಾಪುರದ ರಾಷ್ಟ್ರೀಯ ವಿಶ್ವವಿದ್ಯಾಲಯದಲ್ಲಿ ಪಾಠ ಹೇಳುತ್ತಿದ್ದೇನೆ. ನಿಮ್ಮ ಉಜ್ವಲ ದೇಶದ ಇತಿಹಾಸ ಹಾಗೂ ರಾಜಕೀಯ ವಿಷಯಗಳಲ್ಲಿ ನನಗೆ ಎಂದಿನಿಂದಲೂ ತುಂಬ ಆಸಕ್ತಿ. ಅವುಗಳ ಶ್ರೀಮಂತಿಕೆಯನ್ನು ಒಳಹೊಕ್ಕು ನೋಡುವ ಅವಕಾಶಗಳು ನನ್ನದಾಗಿದ್ದವು. ನಿಮ್ಮ ರಾಷ್ಟ್ರೀಯ ನಾಯಕತ್ವದ ಮುಖಗಳನ್ನು ನಾನು ಪರಿಚಯಿಸಿಕೊಂಡಿದ್ದೇನೆ. ಉಚ್ಚ ಹುದ್ದೆಗಳಲ್ಲಿ - ರಾಜ್ಯ ಹಾಗೂ ರಾಷ್ಟ್ರ ಸರಕಾರಗಳೆರಡರಲ್ಲೂ - ನಿಮ್ಮ ಸಾಧನೆಗಳನ್ನು ಕಂಡು ಮೆಚ್ಚಿದ್ದೇನೆ. 1970 ನೇ ದಶಕದ ಆ ಪ್ರಕ್ಷುಬ್ಧ ದಿನಗಳಲ್ಲಿ ಉಪರಾಷ್ಟ್ರಪತಿಯಾಗಿ ಹಾಗೂ ಹಂಗಾಮಿ ರಾಷ್ಟ್ರಪತಿಯಾಗಿ ನೀವು ಧೈರ್ಯ ಮೆರೆದುದಲ್ಲದೆ ಯಾವುದೇ ಪಕ್ಷ ವಹಿಸದೆ ಮಧ್ಯಮ ಮಾರ್ಗವನ್ನನುಸರಿಸಿದಿರಿ. ಆ ಕಷ್ಟದ ದಿನಗಳಲ್ಲಿ ಏಕಾಂಗಿಯಾಗಿ ನೀವು ನಿರ್ವಹಿಸಿದ ಪಾತ್ರವನ್ನು ಅಂತಾರಾಷ್ಟ್ರೀಯ ಸಮುದಾಯದಲ್ಲಿ ಬಹಳ ಜನರು ನೆನಸುತ್ತಾರೆ.

ನಿಮ್ಮ ಪ್ರಶಸ್ತ ನಿವೃತ್ತ ಜೀವನದಲ್ಲಿ ಒಳ್ಳೆಯ ಆರೋಗ್ಯ ಹಾಗೂ ವೈಯುಕ್ತಿಕ ಸಂತಸದ ಭಾಗ್ಯ ದೊರೆಯಲೆಂದೂ ನಿಮ್ಮ ಪ್ರಸಕ್ತ ಕಾಯಕಗಳಲ್ಲಿ ಯಶಸ್ಸು ಪ್ರಾಪ್ತವಾಗಲೆಂದೂ ನಿಮ್ಮ ಜನ್ಮದಿನದ ಈ ಸಂದರ್ಭದಲ್ಲಿ ನಾನು ಹಾರೈಸುವೆ.

ನಿಮ್ಮ ಅಭಿಮಾನಿ ನಾನಾಗಿರುವುದರಿಂದ ನಿಮ್ಮ ಹಸ್ತಾಕ್ಷರವಿಟ್ಟುಕೊಳ್ಳುವ ಪುಣ್ಯ ನನ್ನದಾದರೆ ನನಗೆ ಬಹಳ ಸಂತೋಷವಾಗುತ್ತದೆ. - ನಿಮ್ಮ ಹಸ್ತಾಕ್ಷರಾಂಕಿತವಾದ ಫೋಟೋ ಕಳಿಸಿದರಂತೂ ಕಟ್ಟು ಹಾಕಿಸಿ ಇಟ್ಟುಕೊಳ್ಳುತ್ತೇನೆ. ನಿಮಗೆ ಇಂತಹ ನೂರಾರು ಕೋರಿಕೆಗಳು ಬರಬಹುದು. ಆದರೂ, ನನ್ನ ಇಚ್ಛಾಪೂರೈಕೆ ಮಾಡುತ್ತೀರೆಂಬ ನಂಬಿಕೆ ನನ್ನದು. ಅದು ವಿಶೇಷ ಮೌಲ್ಯ ಹಾಗೂ ಅರ್ಥವುಳ್ಳದ್ದು ನನಗೆ.

ಅನನ್ಯ ಕೃತಜ್ಞತೆಗಳು

ಶುಭಕಾಮನೆಗಳೊಂದಿಗೆ,

ನಿಮ್ಮ ವಿಶ್ವಾಸಿ
ಡಾ।। ಫ್ರಾಂಕ್ ಸಿಬುಲ್ಕಾ
ಸೀನಿಯರ್ ಲೆಕ್ಚರರ್, ರಾಜಕೀಯ ವಿಜ್ಞಾನ ವಿಭಾಗ
ಸಿಂಗಾಪುರ ರಾಷ್ಟ್ರೀಯ ವಿಶ್ವವಿದ್ಯಾನಿಲಯ,
10, ಕೆಂಟ್ ರಿಚ್ ಕ್ರೆಸೆಂಟ್
ಸಿಂಗಾಪುರ - 0511.

10, ಸೆಪ್ಟೆಂಬರ್ 1989

## ಅನುಬಂಧ - 4

ಶ್ರೀ ಬಿ.ಡಿ. ಜತ್ತಿ ಅವರ 90ನೇ ಜನ್ಮದಿನದ ಸಂದರ್ಭದಲ್ಲಿ ದಿನಾಂಕ 10-9-2001 ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಡಾ॥ ಎಸ್. ವಿದ್ಯಾಶಂಕರ ಅವರು ಬರೆದ ಲೇಖನ.

### ಒಂದು ಸಾರ್ಥಕ ಬದುಕು

1964 ರಲ್ಲಿ ನಡೆದ ಘಟನೆಯದು, ನಾನು ಆಗ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎ. (ಕನ್ನಡ) ವಿದ್ಯಾರ್ಥಿಯಾಗಿದ್ದೆ, ಅರ್ಥಶಾಸ್ತ್ರ ವಿಭಾಗದವರು ಒಂದು ಉಪನ್ಯಾಸವನ್ನು ಏರ್ಪಡಿಸಿದ್ದರು. ಆ ದಿನದ ಸಭೆಯ ಅಧ್ಯಕ್ಷತೆಯನ್ನು ಡಾ. ಬಿ. ನಂಜುಂಡಪ್ಪನವರು ವಹಿಸಿದ್ದರು. ಅಂದಿನ ಉಪನ್ಯಾಸಕರು ಬಿ.ಡಿ. ಜತ್ತಿಯವರು. ನನ್ನ ನೆನಪಿನ ಮಟ್ಟಿಗೆ ಅವರು ಕರ್ನಾಟಕ ರಾಜ್ಯದ ವಿತ್ತ ಮಂತ್ರಿಗಳಾಗಿದ್ದರು. ಕರ್ನಾಟಕ ರಾಜ್ಯದ ಆರ್ಥಿಕ ಮುನ್ನಡೆ ಕುರಿತು ಉಪನ್ಯಾಸ, ಉಪನ್ಯಾಸದ ನಡುವೆ ಜತ್ತಿಯವರು ರಾಷ್ಟ್ರೀಯ ಉಳಿತಾಯ ಯೋಜನೆಯಿಂದ ಕರ್ನಾಟಕ ಸಾಧಿಸಿರುವ ಪ್ರಗತಿಯ ಚಿತ್ರವನ್ನು ಉಪಯುಕ್ತ ಅಂಕಿ ಅಂಶಗಳ ಮೂಲಕ ವಿವರಿಸಿದರು. ನನಗೆ ಆಶ್ಚರ್ಯವೆನಿಸಿದ್ದು, ಉಪನ್ಯಾಸಕರು ಟಿಪ್ಪಣಿ ರೂಪದ ದಾಖಲೆಗಳನ್ನು ಕೈಯಲ್ಲಿ ಇಟ್ಟುಕೊಳ್ಳದೆ, ನಿರರ್ಗಳವಾಗಿ ಒಂದು ಗಂಟೆ ಇಂಗ್ಲೀಷ್‌ನಲ್ಲಿ ಉಪನ್ಯಾಸ ಮಾಡಿದ್ದು.

ಬಿ.ಡಿ. ಜತ್ತಿಯವರ ಜಾಯಮಾನವೇ ಹಾಗೆ, ಮಂತ್ರಿಗಳಾಗಿದ್ದಾಗ ಒಂದು ವಿಷಯದ ಬಗೆಗೆ ನಿರ್ಣಯ ತೆಗೆದುಕೊಳ್ಳುವಾಗ ಸಂಬಂಧಪಟ್ಟ ಫೈಲನ್ನು ಕೂಲಂಕುಷವಾಗಿ ಅವರು ಅಧ್ಯಯನ ಮಾಡುತ್ತಿದ್ದರು. ಅವರು ತೆಗೆದುಕೊಳ್ಳುತ್ತಿದ್ದ ನಿರ್ಣಯಗಳನ್ನು ಯಾರು ಅಲ್ಲಗಳೆಯಲು ಸಾಧ್ಯವಾಗುತ್ತಿರಲಿಲ್ಲ. ತುರ್ತು ಪರಿಸ್ಥಿತಿಯ ಕೊನೆಯ ದಿನಗಳಲ್ಲಿ ಜತ್ತಿಯವರು ದೆಹಲಿಯಲ್ಲಿ ಹಂಗಾಮಿ ರಾಷ್ಟ್ರಪತಿಗಳಾಗಿದ್ದರು. ಇಂದಿರಾಗಾಂಧಿಗೆ ತೀರಾ ಹತ್ತಿರದವರಾಗಿದ್ದರು. ಚುನಾವಣೆಯಲ್ಲಿ ಕಾಂಗ್ರೆಸ್ ಸರ್ಕಾರ ಸೋಲನ್ನು ಕಂಡಿತು. ಮೊರಾರ್ಜಿ ದೇಸಾಯಿಯವರ ನೇತೃತ್ವದ ಪಕ್ಷ ಅಧಿಕಾರಕ್ಕೆ ಬರಬೇಕಾಗಿತ್ತು. ಜತ್ತಿಯವರು ಮೊರಾರ್ಜಿ ದೇಸಾಯಿಯವರನ್ನು ಸರ್ಕಾರ ರಚಿಸಲು ಆಹ್ವಾನಿಸಿದರು. ತುರ್ತು ಪರಿಸ್ಥಿತಿಯನ್ನು ಹಿಂತೆಗೆದುಕೊಳ್ಳುವಂತೆ ಇಂದಿರಾ ಗಾಂಧಿಯವರಿಗೆ ಸಲಹೆ ನೀಡಿ ಅವರ ಮಂತ್ರಿಮಂಡಲದಲ್ಲಿ ಆ ತೀರ್ಮಾನ ತೆಗೆದುಕೊಂಡ ಮೇಲೆ ರಾಷ್ಟ್ರಪತಿಗಳಾಗಿ ಜತ್ತಿಯವರು ತುರ್ತು ಪರಿಸ್ಥಿತಿ ರದ್ದಾದ ಘೋಷಣೆ ಹೊರಡಿಸಿದರು.

ಇಲ್ಲಿ ಜತ್ತಿಯವರು ತಮ್ಮ ಆತ್ಮಸಾಕ್ಷಿಗೆ ಅನುಗುಣವಾಗಿ ಲೋಕ ಮೆಚ್ಚುವಂತೆ ನಡೆದುಕೊಂಡರು. ಜತ್ತಿಯವರ ಕಡು ವಿರೋಧಿಗಳಾದ ಶ್ರೀ ನಿಜಲಿಂಗಪ್ಪನವರು, ಜತ್ತಿಯವರು ತಪ್ಪು ಪ್ರಭಾವಗಳಿಗೆ ಒಳಗಾಗದೆ ನಿಷ್ಪಕ್ಷಪಾತವಾಗಿ ವರ್ತಿಸಿ ತಮ್ಮ ಅಧಿಕಾರದ ಘನತೆಯನ್ನು ಎತ್ತಿ ಹಿಡಿದರು. ಅದು ಅವರಿಗೆ ಸಲ್ಲುವ ಕೀರ್ತಿ ಎಂದು ಮೆಚ್ಚುಗೆಯ

ಮಾತುಗಳನ್ನಾಡಿದರು. ಒರಿಸ್ಸಾದಲ್ಲಿ ನಂದಿನಿ ಸತ್ಪತಿಯವರ ಮಂತ್ರಿಮಂಡಲ ಆಗೀಗಲೋ ಉರುಳುವ ಸ್ಥಿತಿಯಲ್ಲಿದ್ದಾಗ ಆ ರಾಜ್ಯದ ರಾಜ್ಯಪಾಲರಾಗಿ ಜತ್ತಿಯವರು ನೇಮಕಗೊಂಡರು. ಅದಾದ ನಾಲ್ಕು ತಿಂಗಳಲ್ಲೇ ಆ ಸರ್ಕಾರ ಉರುಳಿತು. ಯಾರಿಗೂ ಬಹುಮತ ಇಲ್ಲದಿದ್ದಾಗ ಅನಿವಾರ್ಯವಾಗಿ ರಾಷ್ಟ್ರಾಧ್ಯಕ್ಷರ ಆಳ್ವಿಕೆ ಜಾರಿಗೆ ಬರಬೇಕೆಂದು ಜತ್ತಿಯವರು ನಿರ್ಣಯಿಸಿ ಅದನ್ನು ದೆಹಲಿಗೆ ಕಳುಹಿಸಿದರು. ಪ್ರಥಮ ಹಂತದಲ್ಲಿ ಆರು ತಿಂಗಳವರೆಗೆ ಇದ್ದ ರಾಷ್ಟ್ರಪತಿ ಆಳ್ವಿಕೆ ಆರು ತಿಂಗಳವರೆಗೆ ವಿಸ್ತಾರವಾಯಿತು. ಜತ್ತಿಯವರಿಗೆ ಆ ರಾಜ್ಯದ ಆಡಳಿತದಲ್ಲಿ ಪ್ರಜಾಸತ್ತಾತ್ಮಕ ಲೋಕಹಿತ ಕಾರ್ಯಗಳನ್ನು ಅನುಷ್ಠಾನಗೊಳಿಸುವ ಸುವರ್ಣಾವಕಾಶ ದೊರೆಯಿತು.

ಆ ರಾಜ್ಯದ ಹಿಂದುಳಿದ ಪರಿಶಿಷ್ಟ ವರ್ಗದವರಿಗೆ ಸರ್ಕಾರದಿಂದ ದೊರೆಯಬೇಕಾಗಿದ್ದ ಹಲವಾರು ಯೋಜನೆಗಳ ಫಲ ಲಭ್ಯವಾಗಿರಲಿಲ್ಲ. ಜತ್ತಿಯವರು ಆ ರಾಜ್ಯದ ಹರಿಜನ, ಗಿರಿಜನ, ಪರಿಶಿಷ್ಟ, ಹಿಂದುಳಿದ ವರ್ಗದವರಿಗೆ ಅನುಕೂಲವಾಗುವ ಅನೇಕ ಯೋಜನೆಗಳನ್ನು ಕಾರ್ಯಗತಗೊಳಿಸಿದರು. ಇದರಿಂದಾಗಿ ಅವರು ಎಷ್ಟು ಜನಪ್ರಿಯತೆ ಗಳಿಸಿದ್ದರೆಂದರೆ ಭಾರತದ ಉಪರಾಷ್ಟ್ರಪತಿ ಸ್ಥಾನಕ್ಕೆ ಹರಿಜನ ಕೋಮಿನ ಹುರಿಯಾಳೊಬ್ಬರನ್ನು ಆಯ್ಕೆ ಮಾಡಬೇಕೆಂದು ಇಂದಿರಾ ಗಾಂಧಿಯವರ ಮೇಲೆ ಒತ್ತಾಯ ತರಲಾಯಿತು. ಒರಿಸ್ಸಾದಲ್ಲಿ ಜತ್ತಿಯವರು ಹರಿಜನರು ಹಾಗೂ ಹಿಂದುಳಿದ ವರ್ಗದವರ ಹಿತೈಷಿಗಳಾಗಿ ಮಾಡಿದ ಅನುಪಮ ಸೇವೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಇಂದಿರಾ ಗಾಂದಿಯವರು ತಮ್ಮ ಮೇಲೆ ಒತ್ತಡ ತಂದ ನಿಯೋಗಕ್ಕೆ ನಿಮಗೆ ಹರಿಜನ ಕೋಮಿನವರು ಬೇಕೋ ಅಥವಾ ಹರಿಜನರ ಹಿತೈಷಿ ಬೇಕೋ ಎಂದು ಕೇಳಿದರಂತೆ. ಒರಿಸ್ಸಾ ಒಂದು ಸಮಸ್ಯಾತ್ಮಕ ರಾಜ್ಯ, ಈ ರಾಜ್ಯದ ರಾಜಕೀಯ ಕೋಲಾಹಲದಲ್ಲಿ ಜತ್ತಿಯವರು ಕೊಚ್ಚಿಕೊಂಡು ಹೋಗದೆ ಇದ್ದುದು ಅವರ ಚಾಣಾಕ್ಷತನ ಮತ್ತು ದೂರದೃಷ್ಟಿಯ ದ್ಯೋತಕ.

ಬಡ ಗುಡಿಸಿಲಿನಿಂದ ಅಮೆರಿಕದ ಅಧ್ಯಕ್ಷ ಸ್ಥಾನಕ್ಕೇರಿದ ಪರಮಾಶ್ಚರ್ಯದ ಸಂಗತಿಯನ್ನು ಅಬ್ರಹಾಂ ಲಿಂಕನ್ನರ ಜೀವಿತದಲ್ಲಿ ಕೇಳಿದ್ದೇನೆ. ಇಂಥದೇ ಹೋಲಿಕೆ ಬಿಜಾಪುರ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಸಾವಳಗಿ ಗ್ರಾಮದ ಬಡಕುಟುಂಬವೊಂದರಲ್ಲಿ ಜನಿಸಿದ ಜತ್ತಿಯವರು ಭಾರತದ ಉಪರಾಷ್ಟ್ರಪತಿ, ಕೆಲಕಾಲ ರಾಷ್ಟ್ರಪತಿ, ಸ್ಥಾನಕ್ಕೇರಿದ ವಾಸ್ತವ ಘಟನೆಯಲ್ಲಿ ಕಂಡುಬರುತ್ತದೆ. ಹುಟ್ಟಿದ ಅನಾಕರ್ಷಕ ಪರಿಸರ ಬಡತನಗಳು ಓರ್ವ ವ್ಯಕ್ತಿಯ ಏಳಿಗೆಗೆ ಬಂಧನವಾಗಲಿಲ್ಲ. ದೈವ ಜತ್ತಿಯವರ ಪಕ್ಷದಲ್ಲಿ ಸದಾ ಬೆಂಗಾವಲಾಗಿ ನಿಂತಿದ್ದರಿಂದ ಅವರು ತಮ್ಮ ಬದುಕಿನ ಏಳಿಗೆಯ ಒಂದೊಂದೇ ಮೆಟ್ಟಿಲನ್ನು ಸರಾಗವಾಗಿ ಏರಿದರು. 1946ರಲ್ಲಿ ಅವರು ಜಮಖಂಡಿಯ ರಾಜಕೀಯ ಕ್ಷೇತ್ರದಲ್ಲಿ ಪ್ರವೇಶಿಸಿದರು. ಅದಕ್ಕೂ ಪೂರ್ವದಲ್ಲಿ ಸಾವಳಿಗಿಯ ಗ್ರಾಮ ಪಂಚಾಯಿತಿಯ ಅಧ್ಯಕ್ಷರಾಗಿ ಸರ್ಕಾರ ಬೆಂಬಲವಿಲ್ಲದೆ ಗ್ರಾಮಸ್ವರಾಜ್ಯದ ಕನಸು ಕಂಡಿದ್ದರು. ಜಮಖಂಡಿಯಲ್ಲಿ ಪ್ರಸಿದ್ಧ ವಕೀಲರಾಗಿ ಆಗಿನ ಜಮಖಂಡಿ ಸಂಸ್ಥಾನದ ಮುಖ್ಯಮಂತ್ರಿಗಳಾಗಿ ನೇಮಕಗೊಂಡಿದ್ದರು.

ಕಾಣದ ದೈವ ಜಮಖಂಡಿಯ ಮೂಲಕ ಜತ್ತಿಯವರ ಬದುಕಿನಲ್ಲಿ ಭವಿಷ್ಯವನ್ನು ಬರೆಯಿತು. ಮುಂಬಯಿಯ ವಿಧಾನಸಭಾ ಸದಸ್ಯರಾಗಿ ಪಾರ್ಲಿಮೆಂಟರಿ ಸೆಕ್ರೆಟರಿಯಾಗಿ, ವಿಶಾಲ ಮೈಸೂರು ರಾಜ್ಯದ ಭೂಸುಧಾರಣಾ ಚೇರ್ಮನ್ನರಾಗಿ, ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿ, 1962 ರಲ್ಲಿ ನಿಜಲಿಂಗಪ್ಪನವರ ಸಂಪುಟದಲ್ಲಿ ಮಂತ್ರಿಯಾಗಿ, ನಿಜಲಿಂಗಪ್ಪನವರು ಕಾಂಗ್ರೆಸ್ ಅಧ್ಯಕ್ಷರಾಗಿ ಹೋದ ಮೇಲೆ ಸಾಮಾನ್ಯ ಎಂ.ಎಲ್.ಎ.ಆಗಿ ರಾಜಕೀಯ ಏಳು ಬೀಳುಗಳಲ್ಲಿ ಸಮಾಧಾನ ಚಿತ್ತದಿಂದ ಬಿ.ಡಿ. ಜತ್ತಿಯವರು ಈ ರಾಜಕೀಯ ಪ್ರವಾಹದಲ್ಲಿ ಸಾಗಿದರು.

ನಿಜಲಿಂಗಪ್ಪನವರ ನಂತರ ಮುಖ್ಯ ಮಂತ್ರಿಗಳಾದ ವೀರೇಂದ್ರ ಪಾಟೀಲರು ಉಪ ಮುಖ್ಯಮಂತ್ರಿಯಾಗಿ ಬರಲು ವಿನಂತಿಸಿದರು. ಜತ್ತಿಯವರು ರಾಜಕೀಯದ ಎಲ್ಲ ಸುಖಭೋಗಗಳನ್ನೂ ಅದರ ವಿಕ್ಷಿಪ್ತತೆಯನ್ನು ಆ ವೇಳೆಗಾಗಲೇ ಅನುಭವಿಸಿದ್ದರಿಂದ ರಾಜಕೀಯದಿಂದ ದೂರವಿರಲು ಅವರ ಮನಸ್ಸು ಬಯಸಿತು. ಜತ್ತಿಯವರ ರಾಜಕೀಯ ಜೀವನ ಮುಗಿಯಿತು ಎಂದುಕೊಂಡಿದ್ದವರಿಗೆ ನಿರಾಶೆ ಕಾದಿತ್ತು. ಅಧಿಕಾರ ಬೇಡವೆಂದವರನ್ನು ಅದು ಹಿಂಬಾಲಿಸಿ ಬಂದಿತ್ತು. ಪಾಂಡಿಚೆರಿಯ ಲೆಫ್ಟಿನಂಟ್ ಗೌರ್ನರ್ ಪದವಿ ಅನಂತರ ಒರಿಸ್ಸಾ ರಾಜ್ಯಪಾಲ ಹುದ್ದೆ, ಮುಂದೆ ಉಪರಾಷ್ಟ್ರಪತಿ ಹುದ್ದೆ-ಕೆಲಕಾಲ-ರಾಷ್ಟ್ರಪತಿ ಹುದ್ದೆ ಹೀಗೆ ಅದೃಷ್ಟದ ಕೊಂಡಿ ಒಂದಕ್ಕೊಂದು ಸಂಬಂಧ ಕಲ್ಪಿಸುತ್ತಾ ಬಂದಿತು. ಜತ್ತಿಯವರು ತಮ್ಮ ಜೀವನದುದ್ದಕ್ಕೂ ಹಿಂತಿರುಗಿ ನೋಡದೆ ಮುಂದೆ ಸಾಗಿದರು.

ಸರ್ವೋದಯ ಕವಿಗಳಾದ ಪ್ರೊ.ವಿ. ಸೀತಾರಾಮಯ್ಯನವರ ಕವಿತೆಯೊಂದರ ಸಾಲುಗಳು ಹೀಗಿವೆ:

ಮಣಿಯದಿಹ ಮನವೆಂದು
ಸಾಧಿಸುವ ಹಟವೊಂದು,
ನಿಜದ ನೇರಕೆ ನಡೆದ ನಿಶ್ಚಲತೆಯೊಂದು.
ಅನ್ಯಾಯಕೆಂದಿಗೂ ಬಾಗದೆಚ್ಚರವೊಂದು
ಮರುಕಕ್ಕೆ ಪ್ರೇಮಕ್ಕೆ ಚಿರ ತೆರೆದ ಎದೆಯೊಂದು.

ಈ ಸಾಲುಗಳು ಬಿ.ಡಿ. ಜತ್ತಿಯವರ ವ್ಯಕ್ತಿತ್ವಕ್ಕೆ ಬರೆದ ಭಾಷ್ಯದಂತಿವೆ. ಸಹನೆ, ತಾಳ್ಮೆ, ಶಾಂತಿ, ಸಮಾಧಾನ, ಸಹಿಷ್ಣುತೆ ಜತ್ತಿಯವರ ಗೆಲುವಿನ ರಹಸ್ಯ, ಅವರು ಎದುರಾಳಿಯ ವಾದವನ್ನು ಕಿವಿ ತೆರೆದು ಕೇಳುವವರು, ತಮ್ಮ ಅಂತರಾತ್ಮಕ್ಕೆ ಸರಿಕಂಡಂತೆ ಮಾಡುವವರು, ಅವರು ಯಾರನ್ನೂ ಗಟ್ಟಿಯಾಗಿ ಮಾತನಾಡಿಸಿದವರಲ್ಲ. ಗದರಿಸಿ ನುಡಿದವರಲ್ಲ, ಸಿಟ್ಟಿನಿಂದ ವಿವೇಕ ಕಳೆದುಕೊಂಡವರಲ್ಲ. ಅವರು ಬಸವಣ್ಣನವರ ನಿಷ್ಠಾವಂತ ಅನುಯಾಯಿಗಳಾದ್ದರಿಂದ 'ಉರಿ ಬರಲಿ, ಸಿರಿ ಬರಲಿ' ಎರಡನ್ನೂ ಸಮಾನವಾಗಿ ಸ್ವೀಕರಿಸುವ ಗಟ್ಟಿ ಮನದವರು.

ಒಬ್ಬ ಮುಖ್ಯಮಂತ್ರಿಗೆ ಅಥವಾ ದೇಶದ ಸಾರ್ವಭೌಮ ಅಧಿಕಾರವನ್ನು ವಹಿಸಿಕೊಂಡ ವ್ಯಕ್ತಿಗೆ ಇರಬೇಕಾದುದು ದೇಶದ ಭವಿಷ್ಯದ ಕನಸು. ರಾಷ್ಟ್ರೀಯತೆಯನ್ನು ಸಾಕಾರಗೊಳಿಸುವ ಕನಸು. ಕರ್ನಾಟಕದ ಮುಖ್ಯಮಂತ್ರಿ ಹಾಗೂ ಮಂತ್ರಿ ಆಗಿದ್ದಾಗ ಕರ್ನಾಟಕದ ಸರ್ವಾಂಗೀಣ ವಿಕಾಸದ ಭವ್ಯ ಕನಸು. ಕರ್ನಾಟಕದ ಪ್ರಾಕೃತಿಕ ಸಂಪತ್ತು ಹಾಗೂ ಬೌದ್ಧಿಕ ಶಕ್ತಿಯ ಸಮರ್ಪಕವಂತರೂ, ನೈತಿಕ ಸಂಪತ್ತುಳ್ಳವರೂ ಆಗುವಂತೆ ಯುವಜನತೆಯನ್ನು ರೂಪಿಸುವುದು. ಜತ್ತಿಯವರು ಗ್ರಾಮೀಣ ಪರಿಸರದಿಂದ ಬಂದವರು. ಬಡತನವೇನೆಂಬುದನ್ನು ಬಲ್ಲವರು. ಛಲವಂತಿಕೆಯಿಂದ ಕಷ್ಟಪಟ್ಟು ಮುಂದೆ ಬಂದವರು. ಹೀಗಾಗಿ ಹಸಿರು ಕರ್ನಾಟಕದ ಕನಸು, ಯುವ ಶಕ್ತಿಯ ಅಪವ್ಯಯವಾಗದೆ ಅದರ ಸಮರ್ಪಕ ಬಳಕೆಯ ಬಗೆಗಿನ ಜೀವಂತ ವಿಶ್ವಾಸ ಅವರಲ್ಲಿ ಅದಮ್ಯವಾಗಿದ್ದಿತು.

ಉಪರಾಷ್ಟ್ರಪತಿ - ರಾಷ್ಟ್ರಪತಿಗಳಾದಾಗ ದೇಶದ ಸಮಗ್ರ ಹಿತದ ಕಲ್ಪನೆ, ಪಕ್ಷಗಳಲ್ಲಿ ಸಾಮರಸ್ಯ ಮೂಡಿಸುವುದು, ರಾಷ್ಟ್ರೀಯ ಭಾವೈಕ್ಯತೆಗೆ ಒತ್ತುಕೊಡುವುದು, ದೇಶದ ಭವಿಷ್ಯವನ್ನು ಯೋಜನೆಗಳ ಮೂಲಕ ರೂಪಿಸುವುದು ಒಂದು ಸವಾಲಾಗಿದ್ದಿತು. ಜತ್ತಿಯವರು ರಾಷ್ಟ್ರದ ಸಮಗ್ರತೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಅದನ್ನು ಕಾಪಾಡುವಲ್ಲಿ ವಿಶೇಷ ಕಾಳಜಿ ವಹಿಸಿದರು.

ಅವರ ಸರಳ ಸಜ್ಜನಿಕೆ ಹಾಗೂ ಶ್ರದ್ಧಾಪೂರ್ಣ ಕಾರ್ಯತಂತ್ರ ಅವರ ರಾಜಕೀಯ ಗುರುಗಳಾದ ಮುಂಬಯಿ ರಾಜ್ಯದ ಆಗಿನ ಮುಖ್ಯಮಂತ್ರಿಗಳಾಗಿದ್ದ ಬಾಲಗಂಗಾಧರ ಖೇರ್‌ರವರಿಗೆ ಪ್ರಿಯವಾಗಿದ್ದಿತು. ನೆಹರೂ, ಇಂದಿರಾ ಗಾಂಧಿ, ಮೊರಾರ್ಜಿ ದೇಸಾಯಿ ಇವರೇ ಮೊದಲಾದವರು ಜತ್ತಿಯವರನ್ನು ಇಷ್ಟಪಡಲು ಕಾರಣವಾದದ್ದು ಅವರ ಸರಳ ಸಜ್ಜನಿಕೆ, ಶ್ರದ್ಧಾಪೂರ್ಣ ನಿಷ್ಕಪಟ ಸೇವೆ. ಅವರು ದೆಹಲಿಯ ಪ್ರಭುಗಳಿಗೆ ಪ್ರಿಯವಾದುದರಿಂದ ಅವರ ರಾಜಕೀಯ ಭವಿಷ್ಯ ಉತ್ತುಂಗ ಶಿಖರಕ್ಕೇರಲು ಕಾರಣವಾಯಿತು.

1979 ರ ಆಗಸ್ಟ್ 22 ರಂದು ಪಾರ್ಲಿಮೆಂಟಿನ ಸದಸ್ಯರು ಉಪ ರಾಷ್ಟ್ರಪತಿಗಳಾಗಿದ್ದ ಜತ್ತಿಯವರನ್ನು ಆತ್ಮೀಯವಾಗಿ ಬೀಳ್ಕೊಟ್ಟರು ಆಗ ಕೊಟ್ಟ ಬೀಳ್ಕೊಡುಗೆಯ ಅಭಿನಂದನಾ ಪತ್ರದ ಸಾಲುಗಳಿವು. “ತಾವು ರಾಜ್ಯ ಸಭೆಯ ಕರ್ಣಧಾರತ್ವ ವಹಿಸಿದಾಗ ಕಾಲ ಸುಗಮವಾಗಿರಲಿಲ್ಲ. ದೇಶದಲ್ಲಿ ಹಿಂದೆಂದೂ ಘಟಿಸದಂತಹ ವಿದ್ಯಮಾನಗಳು ನಡೆಯುತ್ತಿದ್ದುದರ ಪರಿಣಾಮವಾಗಿ ಆ ವರ್ಷಗಳಲ್ಲಿ ಅಸಾಮಾನ್ಯ ಸ್ಥಿತಿ ಇತ್ತು. ಸಭಾಪತಿಯಾಗಿ ತಾವು ನಿರ್ವಹಿಸಬೇಕಾದ ಕಾರ್ಯ ಎಲ್ಲ ದೃಷ್ಟಿಯಿಂದಲೂ ಅಸಾಮಾನ್ಯವಾಗಿತ್ತು. ಇಂಥ ವಿಷಮಾವಸ್ಥೆಯಲ್ಲಿ ತಾವು ಮನೋಸ್ಥೈರ್ಯವನ್ನು ಕಾಪಾಡಿಕೊಂಡು, ವಿಚಲಿತರಾಗದೆ, ಅತ್ಯಂತ ಗಾಂಭೀರ್ಯದಿಂದ ಸಭಾಪತಿಯ ಕಾರ್ಯ ನಿರ್ವಹಿಸಿದಿರಿ”

ಬಿ.ಡಿ. ಜತ್ತಿಯವರು ಮೊದಲಿನಿಂದಲೂ ಬಸವಣ್ಣನವರನ್ನು ಆದರ್ಶವಾಗಿ ಸ್ವೀಕರಿಸಿದರು; ಅವರ ಆದರ್ಶಗಳನ್ನು, ತತ್ವಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡವರು.

ಬಸವಣ್ಣನವರು ಬೋಧಿಸಿದ ತತ್ವಗಳನ್ನು ಪ್ರತಿಪಾದಿಸಲು ಬೆಂಗಳೂರಿನಲ್ಲಿ ಬಸವ ಸಮಿತಿಯ ಸ್ಥಾಪಕ ಅಧ್ಯಕ್ಷರಾಗಿ ನಿರಂತವಾಗಿ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ಅವರು ತಮ್ಮ ಬದುಕಿನ ಐವತ್ತು ವರ್ಷಗಳನ್ನು ದೇಶದ ರಾಜಕೀಯಕ್ಕಾಗಿ ಬಳಸಿದವರು. ಅವರ ಈಗಿನ ವಿಶ್ರಾಂತಿಯ ಜೀವನದಲ್ಲಿ ಅವರು ಬಸವಣ್ಣನವರ ತತ್ವಗಳನ್ನು ದೇಶ ವಿದೇಶಗಳಲ್ಲಿ ಪ್ರಚಾರ ಮಾಡುವ ದೊಡ್ಡ ಮಣಿಹದಲ್ಲಿ ಕಾಲವನ್ನು ವಿನಿಯೋಗಿಸುತ್ತಿದ್ದಾರೆ. ಅವರ 90 ನೇ ಹುಟ್ಟು ಹಬ್ಬವನ್ನು ರಾಜ್ಯಮಟ್ಟದಲ್ಲಿ ಆಚರಿಸುತ್ತಿರುವುದು ಸಂತೋಷದ ಸಂಗತಿ.

## ಅನುಬಂಧ 5

ಹೆಸರಿಗೆ ತಕ್ಕಂತೆ ಶ್ರೀ ಬಿ.ಡಿ. ಜತ್ತಿ ಅವರ ಬದುಕಿನಲ್ಲಿ ಮಹಾತ್ಮಾ ಬಸವೇಶ್ವರರು ಮತ್ತು ಅವರ ವಚನ ಸಾಹಿತ್ಯ ಕಾಲೇಜು ದಿನಗಳಿಂದಲೂ ಪ್ರಭಾವ ಬೀರಿದೆ. ಆ ಕುರಿತು ಅವರು ತಮ್ಮ ಆತ್ಮಕಥನ ನನಗೆ ನಾನೇ ಮಾದರಿ ಪುಸ್ತಕದಲ್ಲಿ ವಿವರವಾಗಿ ಹೇಳಿದ್ದಾರೆ.

ಬಸವ ಸಮಿತಿ:

1933 ಮತ್ತು 34 ರಲ್ಲಿ ನಾನು ಕೊಲ್ಲಾಪುರದಲ್ಲಿಯ ರಾಜಾರಾಂ ಕಾಲೇಜಿನಲ್ಲಿ ಬಿ.ಎ. ಕ್ಲಾಸಿನಲ್ಲಿ ಓದುತ್ತಿದ್ದೆ. ಆಗ ನಾನು ಮತ್ತು ನನ್ನ ಕೆಲವು ಸಹಪಾಠಿಗಳು ಕೂಡಿಕೊಂಡು ಬಸವನ ಬಳಗ ಎಂಬ ಹೆಸರಿನಲ್ಲಿ ಒಂದು ಸಂಘವನ್ನು ಕಟ್ಟಿದ್ದೆವು. ಆ ಸಂಘದ ಪರವಾಗಿ ಪ್ರತಿ ಭಾನುವಾರ ನಿರ್ದಿಷ್ಟ ಮಾಡಿದ ವೇಳೆಗೆ ಚಿತ್ರದುರ್ಗ ಜಗದ್ಗುರುಗಳ ಮಠದ ಒಂದು ಕೋಣೆಯಲ್ಲಿ ಒಂದು ವಿಷಯವನ್ನು ತೆಗೆದುಕೊಂಡು ಭಾಷಣ, ಚರ್ಚೆ ಮಾಡುತ್ತಿದ್ದೆವು. ಅದೇ ಕಾಲಕ್ಕೆ ನಮ್ಮ ಜತೆಗೆ ಭಾಗವಹಿಸುತ್ತಿದ್ದ ಶ್ರೀ ಡಾಂಗೆ ಎಂಬುವರು ಕೆಲವು ಕವನಗಳನ್ನು ಬರೆದಿದ್ದರು. ಅವುಗಳನ್ನು ಹೂಗೊಂಚಲು ಎಂಬ ಶಿರೋನಾಮೆಯಲ್ಲಿ ಒಂದು ಕವನ ಸಂಕಲನವನ್ನು ಮುದ್ರಿಸಿ ಪ್ರಕಟಿಸಿದೆವು. ಹೀಗೆ ಕನ್ನಡ ಸ್ನೇಹಿತರೊಡನೆ ಕಾರ್ಯಮಾಡುವಾಗ ನೂರಾರು ಕನ್ನಡ ಗ್ರಂಥಗಳನ್ನು ಓದಲು ಅವಕಾಶ ದೊರೆಯಿತು. ಆ ಸಮಯದಲ್ಲಿ ಬಸವಣ್ಣನವರ ಜೀವನದ ಬಗ್ಗೆ ಮತ್ತು ಅವರ ವಚನಗಳ ಬಗ್ಗೆ ಅಭಿಮಾನ ಹುಟ್ಟಿತು. ಹಾಗೆಯೇ ಆಸಕ್ತಿ ಉಂಟಾಯಿತು. ತದನಂತರ ಹಲವಾರು ಕಾರಣಗಳ ಸಲುವಾಗಿ ಬಸವಣ್ಣನವರ ಮತ್ತು ಅವರ ವಚನಗಳನ್ನು ಕುರಿತು ಹೆಚ್ಚು ಗಮನ ಕೊಡಲು ಅವಕಾಶ ದೊರೆಯಲಿಲ್ಲ. ಮುಂದೆ ಮುಂಬಯಿಯಲ್ಲಿ ನಾನು ಪಾರ್ಲಿಮೆಂಟರಿ ಸೆಕ್ರಟರಿ ಮತ್ತು ಉಪಮಂತ್ರಿಯಾಗಿ ಕೆಲಸ ಮಾಡುವಾಗ ಶ್ರೀಯುತ ಎಂ.ಪಿ. ಪಾಟೀಲರು (ಮಂತ್ರಿಗಳು) ನಾನು ಮತ್ತು ಶ್ರೀ ಪಾಲ್ಕಂಡವಾರ್ ಮುಂತಾದವರು ಕೂಡಿಕೊಂಡು ಒಂದು ಮರಾಠಿ ಮಾಸಿಕ ಪತ್ರಿಕೆಯನ್ನು ತೆಗೆಯುತ್ತಿದ್ದೇವು. ಇದಲ್ಲದೆ ಮುಂಬೈಯಲ್ಲಿ ಬಸವಾಭಿಮಾನಿಗಳು ಬಂದಾಗ ಇಳಿದುಕೊಳ್ಳಲು ಮತ್ತು ಪೂಜಾರ್ಚನೆ ಮಾಡಲು ಒಂದು ಕಟ್ಟಡವನ್ನು ಕಟ್ಟಬೇಕೆಂದು ಗೊತ್ತುಮಾಡಿ ಒಂದು ನಿವೇಶನವನ್ನು ತೆಗೆದುಕೊಂಡೆವು. ಶ್ರೀಯುತ ಬಾಬಣ್ಣ ಗೂಳಿ (ಮಿರಜ್) ಮತ್ತು ಕೆಲವರ ಸಹಕಾರದಿಂದ ಬಸವ ಸದನವನ್ನು ಕಟ್ಟಲಾಯಿತು.

(ಅ) ಬಸವ ಕಲ್ಯಾಣ ತಾಲ್ಲೂಕು ನಿರ್ಮಾಣ ಚಿಂತನೆ:

1955 ರಲ್ಲಿ ಬಸವ ಕಲ್ಯಾಣದಲ್ಲಿ ಅಖಿಲಭಾರತ ವೀರಶೈವ ಮಹಾಸಭೆಯವರು ಒಂದು ಸಮ್ಮೇಳನವನ್ನು ಕರೆದಿದ್ದರು. ಆ ಸಮ್ಮೇಳನಕ್ಕೆ ನಾನು ಮತ್ತು ನನ್ನ ಇಬ್ಬರು ಸ್ನೇಹಿತರು ಕೂಡಿಕೊಂಡು ಮುಂಬೈಯಿಂದ ಬಸವ ಕಲ್ಯಾಣಕ್ಕೆ ಹೋದೆವು. ಆ ಸಭೆಗೆ

ಅಂದಿನ ಮೈಸೂರು ರಾಜ್ಯದ ಮಹಾರಾಜರಾದ ಶ್ರೀ ಜಯಚಾಮರಾಜ ಒಡೆಯರ್ ಅವರು ಬಂದಿದ್ದರು. ಅವರ ಅಮೃತ ಹಸ್ತದಿಂದ ಕಾಯಕ ವಿದ್ಯಾನಿಲಯ ಮತ್ತು ಅನುಭವ ಮಂಟಪ ಕಟ್ಟಡದ ಶಂಕುಸ್ಥಾಪನೆಯು ನಡೆಯಿತು. ಈ ಸಮಾರಂಭಕ್ಕೆ ಅಂದಿನ ಮುಂಬೈ ರಾಜ್ಯದ ಮಂತ್ರಿಗಳಾದ ಶ್ರೀ ಎಂ.ಪಿ. ಪಾಟೀಲರು ಬಂದಿದ್ದರು. ಶಂಕುಸ್ಥಾಪನೆಯ ಕಾರ್ಯಕ್ರಮ ಮುಗಿದ ನಂತರ ನಾನು ಪುಸ್ತಕಗಳಲ್ಲಿ ಓದಿದ 12ನೇ ಶತಮಾನದಲ್ಲಿಯ ಬಸವಣ್ಣನವರ ಮಹಾಮನೆ. ಬಿಜ್ಜಳನ ಅರಮನೆ ಮತ್ತು ಶಿವಶರಣರು ಶಿವಯೋಗವನ್ನು ಮಾಡುವ ತಾಣಗಳನ್ನು ನೋಡಬೇಕೆಂದು ನನ್ನ ಸ್ನೇಹಿತರೊಡನೆ ಕೂಡಿ ಹೋದೆನು. ಆದರೆ ಪುಸ್ತಕಗಳಲ್ಲಿ ಓದಿ ಕಣ್ಣಮುಂದೆ ಕಟ್ಟಿದ ಚಿತ್ರಗಳಿಗೂ ಮತ್ತು ಪ್ರತ್ಯಕ್ಷವಾಗಿ ನೋಡಿದ ಕಟ್ಟಡಗಳಿಗೂ ಮಹದಂತರ ಕಂಡುಬಂದಿತು. ನನಗೆ ಇಲ್ಲಿಯ ಕಟ್ಟಡಗಳನ್ನು ನೋಡಿ ಒಂದು ತರಹದ ನಿರಾಸೆಯಾಯಿತು. ಆಗ ನನ್ನಲ್ಲಿ ಬಸವ ಕಲ್ಯಾಣವನ್ನು ಒಂದು ತಾಲ್ಲೂಕು ಸ್ಥಳವನ್ನಾಗಿ ಮತ್ತು ಕಿಲ್ಲೆ ಕಲ್ಯಾಣ ಎಂದಿದ್ದ ಹೆಸರನ್ನು ಬದಲಾಯಿಸಿ ಬಸವ ಕಲ್ಯಾಣ ಎಂಬ ಹೆಸರನ್ನು ಏಕೆ ಮಾಡಬಾರದು? ಎಂಬ ಆಲೋಚನೆ ಬಂತು. ಆದರೆ ಇವುಗಳನ್ನು ಸಾಧಿಸುವುದು. ಹೇಗೆ ಎಂಬ ಪ್ರಶ್ನೆ ನನ್ನನ್ನು ಕಾಡತೊಡಗಿತು.

ದಿನಾಂಕ 16-05-1958 ರಂದು ನಾನು ಮುಖ್ಯಮಂತ್ರಿಯಾದುದರಿಂದ ನನ್ನ ಕನಸನ್ನು ನನಸನ್ನಾಗಿಸುವ ಅವಕಾಶ ದೊರೆಯಿತು. ನಾನು ಮುಖ್ಯಮಂತ್ರಿಯಾಗಿರುವಾಗ ಬಸವ ಕಲ್ಯಾಣವನ್ನು ತಾಲ್ಲೂಕು ಸ್ಥಳವನ್ನಾಗಿ ಮಾಡಲು ನಿರ್ಣಯ ತೆಗೆದುಕೊಳ್ಳಲಾಯಿತು. ಕಿಲ್ಲೆ ಕಲ್ಯಾಣ ಎಂಬ ಹೆಸರನ್ನು ಬದಲಾಯಿಸಿ ಬಸವ ಕಲ್ಯಾಣ ಎಂಬ ಹೆಸರನ್ನು ಇಡಲು ಸಾಧ್ಯವಾಯಿತು. ಮುಂದೆ ದಿನಾಂಕ 17-5-1964 ರಂದು ಮುಂಬೈಯಲ್ಲಿಯ ಬಸವ ಸದನದಲ್ಲಿ ಒಂದು ಸಭೆಯನ್ನು ಏರ್ಪಡಿಸಲಾಗಿತ್ತು. ಆ ಸಭೆಯಲ್ಲಿ ನಾನು ಭಾಗವಹಿಸಿದ್ದೆನು. ಆ ಸಭೆಯಲ್ಲಿ ಭಾಗವಹಿಸಿದವರಲ್ಲಿ ಶ್ರೀ ಹುಚ್ಚೇಶ್ವರ ಮುದಗಲ್ ಎಂ.ಪಿ. ಮತ್ತು ಶ್ರೀ ಪಾಲ್ಕುಂಡವಾರ್ ಪ್ರಮುಖರಾಗಿದ್ದರು. ಆ ಸಭೆಯಲ್ಲಿ ನೆರೆದ ಸದಸ್ಯರು ಬಸವ ಜಯಂತಿಯನ್ನು 2-3 ವರ್ಷಗಳಿಂದ ಮುಂಬೈಯಲ್ಲಿ ನಡೆಸುತ್ತಾ ಬಂದಿರುವುದಾಗಿಯೂ ಮತ್ತು ಈ ಬಾರಿಯ ಜಯಂತ್ಯೋತ್ಸವಕ್ಕೆ ಶ್ರೀ ನವಕಲ್ಯಾಣ ಮಠದ ಪೂಜ್ಯ ಕುಮಾರ ಸ್ವಾಮೀಜಿಯನ್ನು ಕರೆಸಿದ್ದುದ್ದಾಗಿಯೂ ಹೇಳಿದರು. ಆಗ ನಾನು ಜಯಂತ್ಯೋತ್ಸವವನ್ನು ನಾವೆಲ್ಲರು ಹಲವಾರು ವರ್ಷಗಳಿಂದ ಮಾಡುತ್ತಾ ಬಂದಿದ್ದೇವೆ. ನಮ್ಮ ನಾಡಿನಲ್ಲಿ. ನಮ್ಮ ದೇಶದಲ್ಲಿ ಮತ್ತು ವಿದೇಶಗಳಲ್ಲಿ ಬಸವ ತತ್ವಗಳನ್ನು ಪ್ರಚಾರ ಮಾಡುವ ಸಲುವಾಗಿ ಒಂದು ಸಂಸ್ಥೆಯನ್ನು ಏಕೆ ಸ್ಥಾಪಿಸಬಾರದು? ಎಂದು ಕೇಳಿದೆ. ಆ ವಿಷಯವಾಗಿ ದೀರ್ಘ ಚರ್ಚೆಯಾಯಿತು. ನಂತರ ಒಂದು ಸಣ್ಣ ಕಮಿಟಿಯನ್ನು ನೇಮಿಸಬೇಕು. ಆ ಕಮಿಟಿಯ ಸದಸ್ಯರು ಒಂದು ಸಂವಿಧಾನವನ್ನು ತಯಾರಿಸಬೇಕು. ಸಂವಿಧಾನದಂತೆ ಬೆಂಗಳೂರಲ್ಲಿ ಒಂದು ಸಂಸ್ಥೆಯನ್ನು ಸ್ಥಾಪಿಸಬೇಕೆಂದು ತೀರ್ಮಾನಿಸಲಾಯಿತು. ಈ ತಾತ್ಕಾಲಿಕ ಕಮಿಟಿಗೆ ಯಾರು ಛೇರ್‌ಮೆನ್‌ರಾಗಬೇಕು ಎಂಬ ಬಗ್ಗೆ ಸ್ವಲ್ಪ ಚರ್ಚೆ ನಡೆದ ನಂತರ ನಾನೇ ಛೇರ್‌ಮೆನ್ ಆಗಬೇಕೆಂದು

ನಿರ್ಣಯವಾಯಿತು. ಆ ಠರಾವಿನಂತೆ ನಾನು ಶ್ರೀ ಜಯಣ್ಣ ಚಿಗಟೇರಿ ಕೂಡಿಕೊಂಡು ಧಾರವಾಡಕ್ಕೆ ಬಂದೆವು. ಕರ್ನಾಟಕ ಯುನಿವರ್ಸಿಟಿಯ ವೈಸ್ ಛಾನ್ಸಲರ್ ಆದ ಶ್ರೀ ಡಿ.ಸಿ. ಪಾವಟೆಯವರನ್ನು ಕಂಡು ಒಂದು ಸಭೆಯನ್ನು ಕರೆಯಲು ವಿನಂತಿಸಿಕೊಂಡೆವು. ಅವರು ಧಾರವಾಡದ ಪ್ರಮುಖ ವಕೀಲರು, ಡಾಕ್ಟರರು, ಪ್ರೊಫೆಸರರು ಮುಂತಾದ ಗಣ್ಯವ್ಯಕ್ತಿಗಳ ಸಭೆಯನ್ನು ಏರ್ಪಾಡು ಮಾಡಿದರು. ಆ ಸಭೆಯಲ್ಲಿ ಬಸವ ತತ್ವ ಪ್ರಚಾರ ಮಾಡುವ ಸಂಸ್ಥೆಗೆ ಯಾವ ಹೆಸರನ್ನು ಇಡಬೇಕೆಂದು ಚರ್ಚೆಯಾಗಿ, ಮೂರು ಜನರ ಒಂದು ಕಮಿಟಿಯನ್ನು ಗೊತ್ತು ಮಾಡಲಾಯಿತು. ಈ ಹೆಸರು 2 ಶಬ್ದಗಳನ್ನು ಕೂಡಿದ್ದಿರಬೇಕೆಂದು ನಿರ್ಣಯಿಸಲಾಯಿತು. ಮೂರು ಜನರ ಕಮಿಟಿಯಲ್ಲಿ ಪ್ರೊಫೆಸರ್ ಮಾಳವಾಡರವರು ಒಬ್ಬರಾಗಿದ್ದರು. ಈ ಕಮಿಟಿಯವರು 2-3 ಹೆಸರುಗಳನ್ನು ಸೂಚಿಸಿದರು. ಅವುಗಳಲ್ಲಿ ಬಸವ ಸಮಿತಿ ಎಂಬ ಹೆಸರನ್ನು ಒಪ್ಪಲಾಯಿತು.

(ಬ) ಬಸವ ಸಮಿತಿಯ ಉದಯ :

ದಿನಾಂಕ 13-08-1964 ರಂದು ಸರ್ಪಭೂಷಣ ಮಠದಲ್ಲಿ ಸೇರಿದ ಸಭೆಯಲ್ಲಿ ಬಸವಣ್ಣನವರ ಸುಂದರವಾದ ಭಾವಚಿತ್ರವನ್ನು ಬರೆಯಿಸಲು ನನ್ನನ್ನು ಮತ್ತು ರಾಜಾ ಸಿಲ್ಕ್‌ಹೌಸಿನ ಶ್ರೀ ಎಂ. ನಂಜಪ್ಪನವರನ್ನೊಳಗೊಂಡಂತೆ ಒಂದು ಉಪಸಮಿತಿಯನ್ನು ನೇಮಿಸಲಾಯಿತು. ಸುಪ್ರಸಿದ್ಧ ಕಲಾಕಾರರಾದ ಮೈಸೂರಿನ ಶ್ರೀ ರಾಮು ಎಂಬುವರಿಗೆ ಭಾವಚಿತ್ರವನ್ನು ಬರೆಯಲು ಒಪ್ಪಿಸಲಾಯಿತು. ಅವರ ಸಿದ್ಧಪಡಿಸಿದ ಭಾವಚಿತ್ರವು ಬಸವ ಸಮಿತಿಯ ಬಸವ ಭವನದ ಅನುಭವ ಮಂಟಪದಲ್ಲಿ ಇಡಲಾಗಿದೆ. ದಿನಾಂಕ: 13-09-1964 ರಂದು ಹೈದರಾಬಾದಿನ ವಿದ್ಯಾವರ್ಧಕ ಹಾಸ್ಟೆಲಿನಲ್ಲಿ ಸೇರಿದ ಪ್ರಮುಖ ವ್ಯಕ್ತಿಗಳ ಸಭೆಯಲ್ಲಿ ಉಪ ಸಮಿತಿಯವರು ತಯಾರಿಸಿದ ಬಸವ ಸಮಿತಿಯ ಸಂವಿಧಾನವನ್ನು ಸರ್ವಾನುಮತದಿಂದ ಅಂಗೀಕರಿಸಲಾಯಿತು. ನನಗೆ 21 ಸದಸ್ಯರನ್ನೊಳಗೊಂಡ ಹಂಗಾಮಿ ಕಾರ್ಯಸಮಿತಿಯನ್ನು ನೇಮಿಸುವ ಅಧಿಕಾರವನ್ನು ನೀಡಲಾಯಿತು. ಡಾ. ಡಿ. ಸಿ. ಪಾವಟೆಯವರನ್ನು ಕೋಶಾಧ್ಯಕ್ಷರನ್ನಾಗಿ, ಕರ್ನಾಟಕದ ಹೈಕೋರ್ಟಿನ ನ್ಯಾಯವಾದಿಗಳಾದ ಶ್ರೀ ಅನ್ನದಾನಯ್ಯ ಪುರಾಣಿಕ್ ಅವರನ್ನು ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಿಸಿಕೊಳ್ಳಲಾಯಿತು. ದಿನಾಂಕ 26-9-1964 ರಂದು ಬಸವ ಸಮಿತಿಯನ್ನು ನೊಂದಾಯಿಸಲಾಯಿತು ಮತ್ತು ಹಂಗಾಮಿ ಕಾರ್ಯಸಮಿತಿಯ ಹೆಸರುಗಳನ್ನು ಪ್ರಕಟಿಸಲಾಯಿತು. ಅದೇ ಸಮಯದಲ್ಲಿ ಬಸವಣ್ಣನವರ ಆಯ್ದ 108 ವಚನಗಳನ್ನು ಮೂಲದಲ್ಲಿಯೂ ಮತ್ತು ಭಾಷಾಂತರವನ್ನು ಹಿಂದಿ, ಮರಾಠಿ, ತಮಿಳು, ತೆಲಗು ಮತ್ತು ಇನ್ನಿತರ ಭಾಷೆಗಳಲ್ಲಿಯೂ ಪ್ರಕಟಿಸಬೇಕೆಂದು ಠರಾಯಿಸಲಾಯಿತು.

ಮದ್ರಾಸಿನಲ್ಲಿ ಅಲ್ಲಿಯ ರಾಜ್ಯಪಾಲರಾದ ಶ್ರೀ ಜಯಚಾಮರಾಜೇಂದ್ರ ಅವರ ಅಧ್ಯಕ್ಷತೆಯಲ್ಲಿ ಸಭೆ ಸೇರಿಸಲಾಯಿತು. ಆ ಸಭೆಯಲ್ಲಿ ಶ್ರೀ ಎಂ.ಕೆ. ಭಕ್ತವತ್ಸಲಂ ಅವರು ಭಾಗವಹಿಸಿದ್ದರು. ತದನಂತರ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಬಸವ ಸಮಿತಿಯ

ಸದಸ್ಯತ್ವದ ಪತ್ರಗಳನ್ನು ರಸೀದಿ ಪುಸ್ತಕಗಳನ್ನು ಮತ್ತು ಬಸವ ಸಮಿತಿಯ ಸಂವಿಧಾನವನ್ನು ಅಚ್ಚು ಮಾಡಿಸಲಾಯಿತು.

ಬಸವ ಸಮಿತಿಯ ಹಂಗಾಮಿ ಕಾರ್ಯ ಸಮಿತಿಯ ಮೊದಲನೇ ಸಭೆಯು ಕೇಂದ್ರ ಕಾರ್ಯಾಲಯದಲ್ಲಿ ದಿನಾಂಕ 13-12-1964 ರಂದು ಸೇರಿದಾಗ ಬೇರೆ ಬೇರೆ ರಾಜ್ಯಗಳಲ್ಲಿ ಬಸವ ಸಮಿತಿಗಳನ್ನು ಸ್ಥಾಪಿಸಬೇಕೆಂದು ಗೊತ್ತುಮಾಡಲಾಯಿತು. ಇದೇ ಸಭೆಯಲ್ಲಿ ಹಣಕಾಸಿನ ಸಮಿತಿ, ನಿಯಮಗಳನ್ನು ತಯಾರಿಸುವ ಸಮಿತಿ, ಸಂಶೋಧನೆ ಮತ್ತು ಪ್ರಕಟಣೆಗಳ ಸಮಿತಿ ಮತ್ತು ಪ್ರಚಾರ ಸಮಿತಿಗಳನ್ನು ರಚಿಸಲಾಯಿತು.

1965 ಮೇ ತಿಂಗಳಲ್ಲಿ ಭಾರತ ದೇಶದ ಬೇರೆ ಬೇರೆ ಪ್ರಮುಖ ನಗರಗಳಲ್ಲಿ ಬಸವ ಜಯಂತಿಯನ್ನು ಆಚರಿಸಲಾಯಿತು. ನವದೆಹಲಿಯಲ್ಲಿ ಭಾರತದ ಉಪರಾಷ್ಟ್ರಪತಿಗಳಾದ ಡಾ. ಜಾಕೀರ್ ಹುಸೇನ್ ಅವರಿಂದ ಬಸವಣ್ಣನವರ 108 ವಚನಗಳ ಇಂಗ್ಲೀಷ ಅನುವಾದ ಕೃತಿಯನ್ನು ಮತ್ತು ಡಾ. ಸರೋಜಿನಿ ಮಹಿಷಿಯವರಿಂದ ಹಿಂದಿಯಲ್ಲಿ ಅನುವಾದಿಸಿದ ವಚನಗಳ ಗ್ರಂಥಗಳನ್ನು ಬಿಡುಗಡೆ ಮಾಡಿಸಲಾಯಿತು.

ಮೈಸೂರಿನ ರಾಜ್ಯಪಾಲರಾದ ಜನರಲ್ ನಾಗೇಶ್ ಅವರಿಂದ 108 ವಚನಗಳ ಸಂಕಲವಾದ " ಬಸವ ವಚನಾಮೃತ" ವನ್ನು ಬಿಡುಗಡೆ ಮಾಡಿಸಲಾಯಿತು. ದಿನಾಂಕ 30-6-1965 ರಂದು ರಾಜ್ಯಪಾಲರಾದ ಶ್ರೀ ವಿ.ವಿ. ಗಿರಿಯವರಿಂದ ಶ್ರೀಮತಿ ಜಯದೇವಿ ತಾಯಿ ಲಿಗಾಡೆಯವರು ರಚಿಸಿದ ಶ್ರೀ ಸಿದ್ಧರಾಮ ಪುರಾಣವನ್ನು ಬಿಡುಗಡೆ ಮಾಡಿಸಲಾಯಿತು.

1966 ರಲ್ಲಿ ಶ್ರೀ ಬಸವೇಶ್ವರ ಡೈರಿ ಮತ್ತು ಕ್ಯಾಲೆಂಡರುಗಳನ್ನು ಮುದ್ರಿಸಲಾಯಿತು. ಬಸವಣ್ಣನವರ 108 ವಚನಗಳ ತೆಲಗು ಮತ್ತು ತಮಿಳು ಭಾಷಾಂತರಗಳನ್ನು ತೆಲಗು ಭಾಷಾಂತರದ ವೆಚ್ಚವನ್ನು ಶ್ರೀ ಜಿ. ಶಿವಪ್ಪನವರು ಮತ್ತು ತಮಿಳು ಭಾಷಾಂತರದ ವೆಚ್ಚವನ್ನು ಶ್ರೀ ಜಯಣ್ಣ ಚಿಗಟೇರಿಯವರು ವಹಿಸಿಕೊಂಡರು.

ದಿನಾಂಕ 21-3-1966 ರಂದು ನನ್ನ ಅಧ್ಯಕ್ಷತೆಯಲ್ಲಿ ಬೆಂಗಳೂರಿನ ಜಯದೇವ ಹಾಸ್ಟೆಲಿನಲ್ಲಿ 9 ಜನರ ಕಾರ್ಯ ಸಮಿತಿಯನ್ನು ಮತ್ತು 30 ಜನ ಸದಸ್ಯರನ್ನು ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು.

(ಕ) ಪಾದಯಾತ್ರೆಯಿಂದ ಫಲಪ್ರಾಪ್ತಿ:

ಬಸವ ಸಮಿತಿಯ ಆಶ್ರಯದಲ್ಲಿ 1966 ಏಪ್ರಿಲ್ ಒಂದನೇ ತಾರೀಕಿನಂದು ಹಂಪೆಯಿಂದ ಬಸವ ಕಲ್ಯಾಣದವರೆಗೆ ಪಾದಯಾತ್ರೆಯನ್ನು ಕೈಗೊಳ್ಳಲಾಯಿತು. ಈ ಪಾದಯಾತ್ರೆಯ ರೂಪ ರೇಷೆಗಳನ್ನು ಶ್ರೀ ವಿಶ್ವನಾಥ ರೆಡ್ಡಿ ಮುದ್ನಾಳ ಅವರು ಮತ್ತು ಅವರ ಸಹೋದ್ಯೋಗಿಗಳು ಕೂಡಿಕೊಂಡು ರೂಪಿಸಿ ಎಲ್ಲಾ ತರಹದ ಏರ್ಪಾಡನ್ನು ಮಾಡಿದರು.

ಬೆಳಿಗ್ಗೆ 5 ಮೈಲಿ ಮತ್ತು ಮಧ್ಯಾಹ್ನದ ನಂತರ 5 ಮೈಲಿ ಹೀಗೆ ಪ್ರತಿನಿತ್ಯ 10 ಮೈಲಿಯಂತೆ 21 ದಿವಸ ಬಸವ ಕಲ್ಯಾಣದವರೆಗೆ ಪಾದಯಾತ್ರೆಯನ್ನು ಮಾಡಲಾಯಿತು.

ಹಂಪೆ ವಿರೂಪಾಕ್ಷ ದೇವರ ಗುಡಿಯಲ್ಲಿ ಪೂಜಾವಿಧಿಗಳನ್ನು ಮುಗಿಸಿ ಸಮಿತಿಯವರು ಕ್ರಯಕ್ಕೆ ತೆಗೆದುಕೊಂಡ ನಿವೇಶನದಲ್ಲಿ ಪ್ರೌಢದೇವರಾಯ ಮಂಡಪದ ಶಂಕುಸ್ಥಾಪನೆಯನ್ನು ಅಂದಿನ ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರಿಂದ ಮಾಡಿಸಲಾಯಿತು. ಈ ಸಮಾರಂಭವು ಚಿತ್ರದುರ್ಗದ ಜಗದ್ಗುರುಗಳಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳವರ ಸಮ್ಮುಖದಲ್ಲಿ ನೆರವೇರಿತು. ಪಾದಯಾತ್ರೆಯ ಮಾರ್ಗದುದ್ದಕ್ಕೂ ಭಜನೆ. ಕೀರ್ತನೆ, ಲಾವಣಿ ಮತ್ತು ಉಪನ್ಯಾಸಗಳನ್ನು ನಡೆಸಲಾಗುತ್ತಿತ್ತು. ಈ ಪಾದಯಾತ್ರೆಯ ಸಮಯದಲ್ಲಿ ಲಾರಿಯಲ್ಲಿ ಬಸವ ಭಂಡಾರವನ್ನು (ತಿಜೋರಿ) ಇಡಲಾಗಿತ್ತು. ಆ ಭಂಡಾರದಲ್ಲಿ ಪ್ರವಾಸ ಸಮಯದಲ್ಲಿ ಬಸವಣ್ಣನವರ ಭಕ್ತರು ತಮ್ಮ ತಮ್ಮ ಇಷ್ಟಾನುಸಾರ ಕಾಣಿಕೆಯನ್ನು ಹಾಕುತ್ತಿದ್ದರು. ಈ ಯಾತ್ರೆಯಲ್ಲಿ ಸದಸ್ಯತ್ವದ ಹಣ ಮತ್ತು ಭಂಡಾರದಲ್ಲಿಯ ಹಣ ಕೂಡಿ 1,59,392-00 ರೂಪಾಯಿಗಳ ಸಂಗ್ರಹವಾಗಿತ್ತು. ಈ ಪಾದಯಾತ್ರೆಯಲ್ಲಿ ಸರ್ಪ ಭೂಷಣ ಮಠದ ಶ್ರೀ ಶಿವಕುಮಾರ ಸ್ವಾಮಿಗಳು, ಶ್ರೀ ವಿಶ್ವನಾಥ ರೆಡ್ಡಿಯವರು, ಶ್ರೀ ನಿಜಗುಣಿ ಸ್ವಾಮಿಗಳು, ನಾನು ಮತ್ತು ಅನೇಕ ಗಣ್ಯವ್ಯಕ್ತಿಗಳು ಮತ್ತು ನೂರಾರು ಜನರು ಭಾಗವಹಿಸಿದ್ದೆವು. ಈ ಯಾತ್ರೆಯ ಯಶಸ್ವಿಗೆ ಶ್ರೀ ವಿಶ್ವನಾಥ ರೆಡ್ಡಿ ಮುದ್ನಾಳರು ವಿಶೇಷ ಶ್ರಮ ವಹಿಸಿದರು. ಶ್ರೀ ಸಿದ್ಧರಾಮಪ್ಪ ಖೂಬಾ ಬಸವ ಭಂಡಾರವನ್ನು ತೆಗೆದುಕೊಂಡು ಹೋಗಲು ಒಂದು ಲಾರಿಯನ್ನು ಕೊಟ್ಟಿದ್ದರು. ಶ್ರೀ ಎಲ್.ಜಿ. ಹೊಂಬಳರು ಬಸವ ಭಂಡಾರವನ್ನು ಪುಕ್ಕಟೆಯಾಗಿ ಕೊಟ್ಟರು. ಈ ತಿಜೋರಿಯನ್ನು ಬಸವ ಕಲ್ಯಾಣದಲ್ಲಿಯ ದೇವಸ್ಥಾನದಲ್ಲಿ ಇಡಲಾಗಿದೆ.

(ಡ) ಬಸವ ಅಷ್ಟ ಶತಮಾನೋತ್ಸವ:

ಬಸವಣ್ಣನವರ ಅಷ್ಟ ಶತಮಾನೋತ್ಸವವನ್ನು ಡಿಸೆಂಬರ್ 26,1967 ರಿಂದ 31, ಡಿಸೆಂಬರ್ 1968ರ ವರೆಗೆ ಆಚರಿಸಲಾಯಿತು. ಈ ಉತ್ಸವವನ್ನು ಆಚರಿಸಲು ಸರಕಾರದವರು ಒಂದು ಸ್ವತಂತ್ರ ರಾಜ್ಯ ಮಟ್ಟದ ಸಮಿತಿಯನ್ನು ರಚಿಸಿ ಬಸವ ಸಮಿತಿಯೊಡನೆ ಸಹಕರಿಸಿದರು. ಸರಕಾರಿ ಸಮಿತಿಗೆ ಶ್ರೀ ಎಸ್. ನಿಜಲಿಂಗಪ್ಪನವರು ಅಧ್ಯಕ್ಷರಾಗಿದ್ದರು. ಶ್ರೀಯುತ ಎಸ್.ಆರ್. ಕಂಠಿ ಮತ್ತು ನಾನು ಉಪಾಧ್ಯಕ್ಷರಾಗಿದ್ದೆವು. ಬಸವ ಸಮಿತಿ ಮತ್ತು ರಾಜ್ಯ ಸರಕಾರದ ಸಂಯುಕ್ತ ಆಶ್ರಯದಲ್ಲಿ ಬಸವಣ್ಣನವರ ಎಂಟನೆಯ ಶತಮಾನೋತ್ಸವದ ಸಮಾರಂಭಗಳನ್ನು ಬಸವ ಕಲ್ಯಾಣ, ಕೂಡಲ ಸಂಗಮ, ಸೊಲ್ಲಾಪುರ, ಉಳವಿ, ಹೊಸ ದೆಹಲಿ ಬೆಂಗಳೂರು ಶಿವಮೊಗ್ಗಾ, ಬೆಳಗಾವಿ, ಬಾಗೇವಾಡಿ ಮತ್ತು ಮುಂಬಯಿ ನಗರಗಳಲ್ಲಿ ಆಚರಿಸಲಾಯಿತು. ಈ ಸಮಾರಂಭಗಳಲ್ಲಿ ರಾಷ್ಟ್ರಾಧ್ಯಕ್ಷರು, ಉಪರಾಷ್ಟ್ರಪತಿಗಳು, ಪ್ರಧಾನ ಮಂತ್ರಿಗಳು ಮುಖ್ಯ ಮಂತ್ರಿಗಳು ಸಚಿವರುಗಳು, ಮಠಾಧೀಶರು, ಸಾಹಿತಿಗಳು ಭಾಗವಹಿಸಿದ್ದರು. ಶತಮಾನೋತ್ಸವದ ಅಂಗವಾಗಿ ಸ್ಮರಣ ಸಂಚಿಕೆ ಯನ್ನು ಡಾ॥ ಜಾಕೀರ ಹುಸೇನ್ ಅವರು ದಿಲ್ಲಿಯಲ್ಲಿ ಬಿಡುಗಡೆ ಮಾಡಿದರು. "ಶ್ರೀ ಬಸವೇಶ್ವರ" ಎಂಬ ಗ್ರಂಥವನ್ನು

ಬಸವ ಕಲ್ಯಾಣದಲ್ಲಿ ಡಾ|| ಗೋಕಾಕ ಅವರು ಬಿಡುಗಡೆ ಮಾಡಿದರು ಹೀಗೆ ಹಲವಾರು ಗ್ರಂಥಗಳನ್ನು ಬೇರೆ ಬೇರೆ ಪ್ರಮುಖರು ಬಿಡುಗಡೆ ಮಾಡಿದರು. ಅಂದು ಟ್ರಾನ್ಸ್‌ಪೋರ್ಟ್ ಕಮಿಶನರ್ ಆಗಿದ್ದ ಶ್ರೀ ಸಿದ್ಧಯ್ಯ ಪುರಾಣಿಕ ಶ್ರೀ ಆಲೂರು ಬಸ್ಸಪ್ಪ ಮತ್ತು ಇನ್ನು ಅನೇಕ ಜನರು ಈ ಕಾರ್ಯದಲ್ಲಿ ಭಾಗವಹಿಸಿ ಗಮನಾರ್ಹವಾದ ಸೇವೆಯನ್ನು ಸಲ್ಲಿಸಿದರು.

(ಇ) ಉಡುತಡಿಯಲ್ಲಿ 'ಅಕ್ಕನ ಮಂದಿರ' ನಿರ್ಮಾಣ:

ಬಸವಣ್ಣನವರ ಎಂಟನೇಯ ಶತಮಾನೋತ್ಸವದ ಸಮಯದಲ್ಲಿ ಶಿವಮೊಗ್ಗಾ ಜಿಲ್ಲೆಯಲ್ಲಿ ಉಡುತಡಿ ಗ್ರಾಮದ ಪಕ್ಕದಲ್ಲಿ ಅಕ್ಕ ಮಹಾದೇವಿಯ ಮಂದಿರವನ್ನು ಕಟ್ಟಲು ಯೋಚಿಸಲಾಯಿತು. ಆ ಸಮಯಕ್ಕೆ ಆ ಸ್ಥಳವು ಇಸ್ಲಾಂ ಧರ್ಮದ ಜನಗಳ ಕೈವಶವಾಗಿತ್ತು. ನಾನು ನಮ್ಮ ಮಂತ್ರಿ ಮಂಡಲದಲ್ಲಿಯ ಹಣಕಾಸಿನ ಉಪ ಮಂತ್ರಿಯಾದ ಶ್ರೀ ಶಂಷುದ್ದಿನ್ ಅವರನ್ನು ಅಲ್ಲಿಯ ಆ ಭೂಮಿಗೆ ಸಂಬಂಧ ಪಟ್ಟ ಇಸ್ಲಾಂ ಧರ್ಮದ ಭೂ ಒಡೆಯರನ್ನು ಸಂಪರ್ಕಿಸಿ ಅವರ ಕಡೆಯಿಂದ ಆ ಭೂಮಿಯ ಹಕ್ಕನ್ನು ಅಕ್ಕ ಮಹಾದೇವಿ ಸಮಾಜಕ್ಕೆ ಕೂಡಿಸುವಂತೆ ಹೇಳಿ ಕಳುಹಿಸಿದೆ. ಶ್ರೀ ಶಂಷುದ್ದೀನ್ ಅವರು ತಮಗೆ ಒಪ್ಪಿಸಿದ ಕೆಲಸವನ್ನು ಮಾಡಿ ಅವರು ಬಿಟ್ಟುಕೊಟ್ಟ ಭೂಮಿಯ ಬದಲು ಮತ್ತೊಂದು ಕಡೆ ಸರಕಾರಿ ಭೂಮಿಯನ್ನು ಕೊಡಲು ಒಪ್ಪಿಗೆಯನ್ನು ಕೊಟ್ಟು ಬಂದರು. ಶ್ರೀ ಶಂಷುದ್ದೀನ ಅವರು ಮಾಡಿದ ಕೆಲಸ ಪ್ರಸಂಶನೀಯವಾದುದು. ಅಲ್ಲಿ ಅಕ್ಕ ಮಹಾದೇವಿಯ ಸೊಗಸಾದ ಮಂದಿರವನ್ನು ಕಟ್ಟಿಸಲಾಗಿದೆ.

(ಫ) ಬೆಂಗಳೂರಿನಲ್ಲಿ 'ಬಸವ ಭವನ' ನಿರ್ಮಾಣ:

ಬೆಂಗಳೂರಿನ ಹೈಗೌಂಡ್ಸ್‌ನಲ್ಲಿ ಸರಕಾರದವರು 99 ವರ್ಷಗಳ ಕಾಲಾವಧಿಗೆ ವಾರ್ಷಿಕ ಬಾಡಿಗೆಯ ಮೇಲೆ 4299 ಚದರ ಗಜಗಳ ವಿಸ್ತೀರ್ಣದ ನಿವೇಶನವನ್ನು ಬಸವ ಸಮಿತಿಗೆ ಗುತ್ತಿಗೆ ಕೊಟ್ಟರು. ಆ ನಿವೇಶನದಲ್ಲಿ 'ಬಸವ ಭವನ' ವನ್ನು ಕಟ್ಟಲು ಕಟ್ಟಡದ ವಿನ್ಯಾಸವನ್ನು ತಯಾರಿಸಲು ನನ್ನ ಅಧ್ಯಕ್ಷತೆಯಲ್ಲಿ ಒಂದು ಉಪ ಸಮಿತಿಯನ್ನು ನೇಮಿಸಲಾಯಿತು. ಶ್ರೀ ಸದಾನಂದರವರು ಸಿದ್ಧ ಪಡಿಸಿದ ಬಸವ ಭವನದ ನಕ್ಷೆಯನ್ನು ಬಸವ ಸಮಿತಿಯು 1969 ಫೆಬ್ರುವರಿ ತಿಂಗಳಲ್ಲಿ ಒಪ್ಪಿಕೊಂಡಿತು. ಬಸವ ಭವನದ 4 ಅಂತಸ್ತುಗಳ ಕಟ್ಟಡವನ್ನು ಸುಮಾರು 13 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಕಟ್ಟಿಸಲಾಯಿತು. ಬಸವ ಭವನದ ಶಂಕು ಸ್ಥಾಪನೆಯನ್ನು ದಿನಾಂಕ 19-3-1969 ರಂದು ಚಿತ್ರದುರ್ಗದ ಜಗದ್ಗುರುಗಳಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಯವರ ಅಮೃತ ಹಸ್ತದಿಂದ ನೆರವೇರಿಸಲಾಯಿತು. ಈ ಭವನದ ನಿರ್ಮಾಣ ಕಾರ್ಯವು 1971 ರಲ್ಲಿ ಪೂರ್ಣವಾಯಿತು. ಜಗದ್ಗುರುಗಳು ಕಟ್ಟಡಕ್ಕೆ 25,000-00 ರೂಪಾಯಿಗಳ ದೇಣಿಗೆಯನ್ನು ಕೊಟ್ಟರು. ಈ ಕಟ್ಟಡಕ್ಕಾಗಿ ತಗಲುವ ಹಣವನ್ನು

ದಿ.ವೈಶ್ಯ ಬ್ಯಾಂಕ್‌ದಿಂದ ಸಾಲ ತೆಗೆದುಕೊಳ್ಳಲಾಯಿತು. ಬಸವ ಕಲ್ಯಾಣದಲ್ಲಿ ಅನುಭವ ಮಂಟಪದ ಕಟ್ಟಡವನ್ನು ಕಟ್ಟಲಾಯಿತು.

1968 ರಿಂದ 1972 ರ ಅವಧಿಯಲ್ಲಿ ಕೆಲವು ಪುಸ್ತಕಗಳನ್ನು ಪ್ರಕಟಿಸಲಾಯಿತು. ಬಸವ ಸಮಿತಿಯ ಟ್ರಸ್ಟನ್ನು ದಿನಾಂಕ 29-4-1972 ರಂದು ಸ್ಥಾಪಿಸಿ ರಿಜಿಸ್ಟರ ಮಾಡಲಾಯಿತು. ಈ ಟ್ರಸ್ಟಿನಲ್ಲಿ 6 ಜನ ಖಾಯಂ ಧರ್ಮದರ್ಶಿಗಳಿದ್ದಾರೆ. 6 ಜನ ಆಯ್ಕೆ ಯಾದ ಧರ್ಮದರ್ಶಿಗಳಿದ್ದಾರೆ.

(ಜ) ಬಸವ ಸಮಿತಿಯ ಸಾಧನೆ ಮತ್ತು ಮುನ್ನಡೆ

1973 ರಿಂದ ಇದುವರೆಗೆ ಅನೇಕ ಮಹತ್ವದ ಕಾರ್ಯಗಳನ್ನು ಬಸವ ಸಮಿತಿಯ ವತಿಯಿಂದ ಮಾಡಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ - ಅನುಭವ ಮಂಟಪದ ನಿರ್ಮಾಣ, ಬಸವಾಶ್ರಮದಲ್ಲಿ ಬಸವಣ್ಣನವರ ಪುತ್ಥಳಿಯ ಸ್ಥಾಪನೆ, ಉದ್ಯೋಗಸ್ಥ ಮಹಿಳೆಯರ ವಸತಿ ಗೃಹ, ಹಳ್ಳಿಯ ಜನಗಳಿಗಾಗಿ ಸಂಚಾರಿ ಉಚಿತ ಆಸ್ಪತ್ರೆ, ರಾಮು ಹಳ್ಳಿಯಲ್ಲಿ ನರ್ಸರಿ ಶಾಲೆ, ಬಸವೇಶ್ವರ ಸಂಗೀತ ವಿದ್ಯಾಲಯ, ಹಳ್ಳಿಯ ಹೆಣ್ಣು ಮಕ್ಕಳಿಗೆ ಹೊಲಿಗೆಯ ತರಬೇತಿ ಕೇಂದ್ರ, ಬಸವ ಭವನಕ್ಕೆ ಎರಡು ಅಂತಸ್ತುಗಳ ಜೋಡಿಕೆ ಮುಂತಾದ ಹಲವಾರು ಕೆಲಸಗಳನ್ನು ಮಾಡಲಾಗಿದೆ. ದೊಡ್ಡ ಬೆಲೆಯ ಜಮೀನಿನಲ್ಲಿ 600 ತೆಂಗಿನ ಮರಗಳು ಮತ್ತು 600 ನಿಂಬೆ ಗಿಡಗಳನ್ನು ನೆಡಲಾಗಿದೆ.

ಕಳೆದ 25 ವರ್ಷಗಳಲ್ಲಿ ಅನೇಕ ಗ್ರಂಥಗಳ ಪ್ರಕಟಣೆಯನ್ನು ಮಾಡಲಾಗಿದೆ. 'ಬಸವ ಪಥ' ಕನ್ನಡ ಮತ್ತು 'ಬಸವ ಜರ್ನಲ್' ಇಂಗ್ಲೀಷ್ ಪತ್ರಿಕೆಗಳನ್ನು ಹೊರಡಿಸಲಾಗಿದೆ. ಸುಪ್ರಸಿದ್ಧ ವಿದ್ವಾಂಸರ, ಸಾಹಿತಿಗಳ ಮತ್ತು ಸಂಶೋಧಕರ ಲೇಖನಗಳು ಈ ಪತ್ರಿಕೆಗಳಲ್ಲಿ ಪ್ರಕಟವಾಗುತ್ತವೆ.

ಬಸವ ಸಮಿತಿಯಲ್ಲಿ 3000 ಸಾವಿರಕ್ಕೂ ಮಿಕ್ಕಿ ಆಜೀವ ಸದಸ್ಯರಿದ್ದಾರೆ, ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಸದಸ್ಯರಿದ್ದಾರೆ. ಇದಲ್ಲದೆ ಆಂಧ್ರ ಪ್ರದೇಶ, ತಮಿಳುನಾಡು, ಮಹಾರಾಷ್ಟ್ರ, ಕೇರಳ, ದೆಹಲಿ, ಗೋವಾ ರಾಜ್ಯಗಳಲ್ಲಿಯೂ ಸಮಿತಿಯ ಸದಸ್ಯರಿದ್ದಾರೆ. ಅಮೆರಿಕಾ ಮತ್ತು ಇಂಗ್ಲೆಂಡಿನಲ್ಲಿಯೂ ಸಮಿತಿಯ ಸದಸ್ಯರಿದ್ದಾರೆ. ಸಮಿತಿಯ ಸದಸ್ಯರಲ್ಲಿ ಬೇರೆ ಬೇರೆ ಮತದವರು, ಬೇರೆ ಬೇರೆ ಭಾಷೆಗಳವರು ಸಹ ಇದ್ದಾರೆ. ಎಲ್ಲಾ ಸದಸ್ಯರೂ ಸಹೋದರ ಭಾವದಿಂದ ಸೇವೆ ಸಲ್ಲಿಸುತ್ತಿದ್ದಾರೆ.

ಕೆಲವು ಮಹನೀಯರು ತಮ್ಮ ಹೆಸರಿನಲ್ಲಿ ವಿದ್ಯಾರ್ಥಿ ವೇತನವನ್ನು ನೀಡಲು ಇಡು ಗಂಟನ್ನು ಸಮಿತಿಯಲ್ಲಿ ಇರಿಸಿದ್ದಾರೆ. ಈ ವಿದ್ಯಾರ್ಥಿ ವೇತನಗಳನ್ನು ವಿದ್ಯಾರ್ಥಿಯ ಯೋಗ್ಯತೆ ಮತ್ತು ಆರ್ಥಿಕವಾಗಿ ಹಿಂದುಳಿದಿರುವಿಕೆಯ ಆಧಾರದ ಮೇಲೆ ನೀಡಲಾಗಿದೆ.

ಸಮಿತಿಯಲ್ಲಿ ಡಾ।। ಬಿ. ಶಿವಮೂರ್ತಿ ಶಾಸ್ತ್ರಿ ಅವರ ಹೆಸರಿನಲ್ಲಿ ಪುಸ್ತಕ ಭಂಡಾರವನ್ನು ತೆಗೆಯಲಾಗಿದೆ. ಈ ಗ್ರಂಥಾಲಯಕ್ಕೆ ಡಾ।। ಬಿ. ಶಿವ ಮೂರ್ತಿ ಶಾಸ್ತ್ರಿಗಳು ಮತ್ತು ನಾನು ಪುಸ್ತಕಗಳನ್ನು ಕೊಟ್ಟಿರುತ್ತೇವೆ. ನಾನು ಸುಮಾರು 45,000-00 ರೂಪಾಯಿ ಬೆಲೆ ಬಾಳುವ ಪುಸ್ತಕಗಳನ್ನು ಪುಸ್ತಕ ಭಂಡಾರಕ್ಕೆ ಕೊಟ್ಟಿರುತ್ತೇನೆ.

ಬಸವ ಸಮಿತಿಯ ಪರವಾಗಿ 'ಬಸವ ಸಾಹಿತ್ಯ ಸದನ' ದಲ್ಲಿ ಶಿವ ಶರಣರಿಗೆ ಸಂಬಂಧಿಸಿದ ಎಲ್ಲಾ ಭಾಷೆಗಳ ಸಾಹಿತ್ಯ ಕೃತಿಗಳನ್ನು, ಜೀವನ ಚರಿತ್ರೆಗಳನ್ನೂ, ಸಂಶೋಧನಾ ಗ್ರಂಥಗಳನ್ನೂ ಇಡಲಾಗಿದೆ.

## ಅನುಬಂಧ - 6

### ಶ್ರೀ ಬಿ.ಡಿ. ಜತ್ತಿಯವರ ಜೀವನದ ಮುಖ್ಯ ಘಟನಾವಳಿಗಳು:

| | |
|---|---|
| 10-9-1912 | ಸಾವಳಗಿಯಲ್ಲಿ ಜನನ |
| 1922 | ಬಾಲ್ಯ ವಿವಾಹ ಸಂಗಾತಿ ಶ್ರೀಮತಿ ಸಂಗಮ್ಮ |
| 1934 | ಬಿ.ಎ. ಪದವಿ (ಕೊಲ್ಲಾಪೂರ ರಾಜರಾಮ ಕಾಲೇಜು) |
| 1935 | ತಂದೆ ದಾನಪ್ಪನವರ ನಿಧನ ಮನೆತನದ ಜವಾಬ್ದಾರಿ ಸಾವಳಗಿ ವಾಸ. |
| 1936 | ಸಾವಳಗಿ ಗ್ರಾಮಪಂಚಾಯಿತಿ ಪ್ರವೇಶ |
| 1939 | ದೇಶಭಕ್ತಿ, ಗಾಂಧಿ ತತ್ವದತ್ತ ಒಲವು |
| 1940 | ಕಾನೂನು ಪದವೀಧರ |
| 1940-45 | ಜಮಖಂಡಿಯಲ್ಲಿ ವಕೀಲಿ ವೃತ್ತಿ |
| 1942 | ಚಲೆಚಾವ ಚಳುವಳಿಯಲ್ಲಿ ಭಾಗ |
| 1943-45 | ಜಮಖಂಡಿ ನಗರಸಭೆ ಅಧ್ಯಕ್ಷತೆ |
| 1945-47 | ಜಮಖಂಡಿ ಸಂಸ್ಥಾನದಲ್ಲಿ ಸಚಿವ |
| 1947 | ಜಮಖಂಡಿ ಸಂಸ್ಥಾನದ ಮುಖ್ಯಮಂತ್ರಿ |
| 1949 | ಮುಂಬಯಿ ರಾಜ್ಯ ವಿಧಾನ ಸಭೆಗೆ ಶಾಸಕರೆಂದು ನಾಮಕರಣ |
| 1952 | ಮುಂಬಯಿ ರಾಜ್ಯದಲ್ಲಿ ಉಪಮಂತ್ರಿ. |
| 1957 | ರಾಜ್ಯ ಭೂ ಸುಧಾರಣಾ ಮಂಡಳದ ಅಧ್ಯಕ್ಷತೆ |
| 1958-62 | ಮೈಸೂರು ರಾಜ್ಯದ ಮುಖ್ಯಮಂತ್ರಿ |
| 1962-65 | ರಾಜ್ಯದ ಹಣಕಾಸಿನ ಮಂತ್ರಿ. |
| 1965-67 | ರಾಜ್ಯದ ಆಹಾರ ಮಂತ್ರಿ. |
| 1968-72 | ಪಾಂಡಿಚೇರಿ ಲೆಫ್ಟಿನೆಂಟ್ ಗೌರ್ನರ |
| 1972-74 | ಓರಿಸ್ಸಾ ರಾಜ್ಯಪಾಲ |
| 1974-79 | ಭಾರತದ ಉಪರಾಷ್ಟ್ರಪತಿ - ಹಂಗಾಮಿ ರಾಷ್ಟ್ರಪತಿ |
| 1-9-1979 ರಿಂದ | ಬೆಂಗಳೂರು ವಾಸ |
| 7-6-2002 | ನಿಧನ |

# ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ

## (2001-2002)

ಶ್ರೀಯುತರುಗಳಾದ :

| | | |
|---|---|---|
| 1. | ಬಿ.ಬಿ. ಶಿವಪ್ಪ<br>ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2. | ಗುತ್ತೇದಾರ ಸುಭಾಷ್ ರುಕ್ಮಯ್ಯ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 3. | ಬೆಲ್ಲದ ಚಂದ್ರಕಾಂತ ಗುರಪ್ಪ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 4. | ಕೆ.ಎನ್. ಸುಬ್ಬಾರೆಡ್ಡಿ,<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 5. | ಉಮೇಶ್ ವಿ. ಕತ್ತಿ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 6. | ಡಾ : ಎಲ್. ಹನುಮಂತಯ್ಯ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 7. | ಕೆ. ನಿರಂಜನ ನಾಯ್ಡು<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 8. | ಶ್ರೀಮತಿ ನಿರ್ಮಲ ವೆಂಕಟೇಶ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |

## ಗ್ರಂಥಾಲಯ ಉಪ ಸಮಿತಿ

## (2002-2003)

ಶ್ರೀಯುತರುಗಳಾದ :

| | | |
|---|---|---|
| 1. | ಬಿ.ಬಿ. ಶಿವಪ್ಪ<br>ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2. | ಡಿ.ಆರ್. ಪಾಟೀಲ್<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 3. | ಡಾ॥ ಭಾರತೀಶಂಕರ್<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 4. | ಕೆ.ಬಿ. ಚಂದ್ರಶೇಖರ್<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 5. | ಪಿ. ರಮೇಶ್<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 6. | ರಾಮಚಂದ್ರಗೌಡ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 7. | ಡಾಃ ಎಂ.ಪಿ. ನಾಡಗೌಡ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 8. | ಎಂ.ಎಸ್. ಸಿದ್ದರಾಜು<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |

## ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆ

### ಸಂಪಾದಕ ವರ್ಗ

ಶ್ರೀಯುತರುಗಳಾದ :

1. ಟಿ. ರಾಜಣ್ಣ
   ಕಾರ್ಯದರ್ಶಿ
2. ಎಸ್.ಬಿ. ಪಾಟೀಲ್
   ಅಪರ ಕಾರ್ಯದರ್ಶಿ
3. ಟಿ.ಎನ್. ಧ್ರುವಕುಮಾರ್
   ಜಂಟಿ ಕಾರ್ಯದರ್ಶಿ
4. ಡಾ|| ಎಸ್. ಚಂದ್ರಪ್ಪ
   ಸಂಶೋಧನಾಧಿಕಾರಿ
5. ಎಂ.ಕೆ. ವಿಶಾಲಾಕ್ಷಿ
   ಶಾಖಾಧಿಕಾರಿ

## ಈ ಸಚಿವಾಲಯದ ಪ್ರಕಟಣೆಗಳು

| ರಚಿತ ಪುಸ್ತಕಗಳು | ದರ ರೂ. | ಭಾಷಾಂತರ ಪುಸ್ತಕಗಳು | ದರ ರೂ. |
|---|---|---|---|
| 1. ಕೆ. ಹನುಮಂತಯ್ಯ | 20-00 | 1. ಡಾ : ಬಿ.ಆರ್. ಅಂಬೇಡ್ಕರ್ | 20-00 |
| 2. ಎಸ್. ನಿಜಲಿಂಗಪ್ಪ | 15-00 | 2. ಡಾ : ರಾಮಮನೋಹರ ಲೋಹಿಯಾ | 15-00 |
| 3. ಶಾಂತವೇರಿ ಗೋಪಾಲಗೌಡ | 15-00 | 3. ವಿ.ಕೆ. ಕೃಷ್ಣಮೆನನ್ | 20-00 |
| 4. ವೈಕುಂಠ ಬಾಳಿಗಾ | 20-00 | 4. ಡಾ : ಶ್ಯಾಂಪ್ರಸಾದ್ ಮುಖರ್ಜಿ | 20-00 |
| 5. ವೀರೇಂದ್ರ ಪಾಟೀಲ್ | 20-00 | 5. ಶೇಖ್ ಮಹಮದ್ ಅಬ್ದುಲ್ಲಾ | 15-00 |
| 6. ಕಡಿದಾಳ್ ಮಂಜಪ್ಪ | 15-00 | 6. ಡಾ : ರಾಜೇಂದ್ರ ಪ್ರಸಾದ್ | 20-00 |
| 7. ಜಿ.ವಿ. ಹಳ್ಳಿಕೇರಿ | 15-00 | 7. ಭೂಪೇಶ್ ಗುಪ್ತ | 20-00 |
| 8. ಶ್ರೀಮತಿ ಕೆ.ಎಸ್. ನಾಗರತ್ನಮ್ಮ | 15-00 | 8. ಅನಂತಶಯನಂ ಅಯ್ಯಂಗಾರ್ | 20-00 |
| 9. ಡಿ. ದೇವರಾಜ ಅರಸು | 15-00 | 9. ಶ್ರೀಮತಿ ರಾಜಕುಮಾರಿ ಅಮೃತಕೌರ | 20-00 |
| 10. ಕೆ.ಟಿ. ಭಾಷ್ಯಂ | 15-00 | 10. ಡಾ : ಚಿಂತಾಮನ್ ಡಿ. ದೇಶ್‌ಮುಖ್ | 20-00 |
| 11. ಟಿ.ಸಿದ್ದಲಿಂಗಯ್ಯ | 20-00 | 11. ಪನಂಪಿಲ್ಲಿ ಗೋವಿಂದ ಮೆನನ್ | 15-00 |
| 12. ಕೆ. ಪುಟ್ಟಸ್ವಾಮಿ | 15-00 | 12. ಜೈ ಸುಖಲಾಲ್ ಹಾಥಿ | 15.00 |
| 13. ಜಗಳೂರು ಇಮಾಂ | 15-00 | 13. ಎಸ್.ಎಂ. ಜೋಷಿ | 15.00 |
| 14. ಕೆ.ಸಿ. ರೆಡ್ಡಿ | 20-00 | | |
| 15. ಬಿ.ವಿ. ಕಕ್ಕಿಲಾಯ | 20-00 | | |
| 16. ಜೆ.ಬಿ. ಮಲ್ಲಾರಾಧ್ಯ | 15.00 | | |
| 17. ಹೆಚ್.ಎಂ. ಚನ್ನಬಸಪ್ಪ | 20.00 | | |
| 18. ಬಿ. ರಾಚಯ್ಯ | 20.00 | | |
| 19. ಎಂ. ನಾಗಪ್ಪ | 15.00 | | |
| 20. ಗಂಗಾಧರ ನಮೋಶಿ | 15.00 | | |

ಮುದ್ರಕರು:- ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳು,
ಸಶಾಮು.ತುಮಕೂರು, ಕಾಸೂ. 187 - 2,000 ಪುಸ್ತಕಗಳು ದಿ: 05-02-2003.